# ಮುನ್ನುಡಿ

ಏಳು ಕಥೆಗಳಿರುವ ಈ ಪುಸ್ತಕವನ್ನು ನಮ್ರತೆಯಿಂದ ಕನ್ನಡಿಗರಿಗೆ ಸಮರ್ಪಿಸಿರುವೆನು. ಈ ಏಳೂ ನಮ್ಮ ನಾಡಿನ ಜನಜೀವನಕ್ಕೆ ಸಂಬಂಧಪಟ್ಟ ಸಂಗತಿಗಳ ಆಧಾರದ ಮೇಲೆ ಸ್ವತಂತ್ರವಾಗಿ ಬರೆದಿರುವ ಕಥೆಗಳು.

ನಾನಾ ಕಾರಣಗಳ ದೆಸೆಯಿಂದ ದೊಡ್ಡ ದೊಡ್ಡ ಕಾದಂಬರಿಗಳೇ ಮುಂತಾದ ಕಥೆಯ ಪುಸ್ತಕಗಳನ್ನು ಓದಲು ವ್ಯವಧಾನವಿಲ್ಲದ ಪರಿಸ್ಥಿತಿಯು ಪಾಶ್ಚಿಮಾತ್ಯ ಜನಜೀವನದಲ್ಲಿ ನೆಲಸಿ ವೃದ್ಧಿಯಾಯಿತು. ಬೇಗ ಓದಿ ಮುಗಿಸಬಹುದಾದ "ಸಣ್ಣ ಕಥೆಗಳು" ಬಹಳವಾಗಿ ಪ್ರಚಾರವಾದುದಕ್ಕೆ ಅದರ ಪರಿಣಾಮವೇ ಮುಖ್ಯ ಕಾರಣ. "ಸಣ್ಣ ಕಥೆಗಳ" ಸಾಹಿತ್ಯವು ಅಲ್ಲಿ ವಿಶೇಷ ವೃದ್ಧಿಯಾಗಿರುವುದು ನಿಜ. ಆದಾಗ್ಯೂ "ಸಣ್ಣ ಕಥೆಗಳು" ಹೇಗಿರಬೇಕೆಂಬ ವಿಚಾರದಲ್ಲಿ ವಿದೇಶೀಯರು ಕೂಡ ಕೆಲವು ಸ್ಥೂಲ ಲಕ್ಷಣಗಳನ್ನು ಏರ್ಪಡಿಸಿಕೊಂಡಿರುವುದು ಹೊರತು, ನಿಷ್ಕೃಷ್ಟವಾದ ಸಿದ್ಧಾಂತ ಯಾವುದನ್ನೂ ಇನ್ನೂ ಏರ್ಪಡಿಸಿಲ್ಲ; ಅವರಲ್ಲಿ ಅನೇಕ ಪಂಡಿತರ ಅಭಿಪ್ರಾಯಗಳೇ ಇದಕ್ಕೆ ಪ್ರಮಾಣ. "ಸಣ್ಣ ಕಥೆ"ಗಳನ್ನು ಬರೆಯುವುದು ಪಾಶ್ಚಿಮಾತ್ಯ ದೇಶಗಳಲ್ಲಿ ಇನ್ನೂ ಪ್ರಯೋಗ ದಶೆಯಲ್ಲಿದೆಯೆಂದು ಹೇಳಬೇಕಾಗಿದೆ. ಆದಕಾರಣ, "ಸಣ್ಣ ಕಥೆ"ಗಳನ್ನು ಬರೆಯುವ ವಿಚಾರದಲ್ಲಿ ನಮ್ಮ ದೇಶದಲ್ಲಿ ಕೂಡ ಬಗೆ ಬಗೆಯ ಪ್ರಯೋಗಗಳು ನಡೆಯಕೂಡದೇಕೆ?

ವಿದೇಶಗಳ ಮಾದರಿಗಳನ್ನೂ ಅಲ್ಲಿಯ ಲಾಕ್ಷಣಿಕರ ಮತಗಳನ್ನೂ ಸ್ಥೂಲವಾಗಿ ಸ್ವೀಕರಿಸಲು ಅಡ್ಡಿಯಿಲ್ಲ; ಅಗತ್ಯವಾಗಿ ಆ ರೀತಿ ಮಾಡಲೂ ಬಹುದು. ಕನ್ನಡ ನಾಡಿನಲ್ಲಿ ಆಧುನಿಕ ರೀತಿಯ "ಸಣ್ಣ ಕಥೆ"ಗಳಿಗೆ ಮೂಲಪುರುಷರೂ, ಸುಪ್ರಸಿದ್ಧರೂ ಆದ ಶ್ರೀಮಾನ್ ಮಾಸ್ತಿ ವೆಂಕಟೇಶ ಐಯ್ಯಂಗಾರ್ಯರೂ, ಇತರ ಕೆಲವರೂ ಸೊಗಸಾದ "ಸಣ್ಣ ಕಥೆ"ಗಳನ್ನು ಬರೆದಿದ್ದಾರೆ. ಆದರೆ ಹೊರಗಿನವರ ಮಾದರಿಗಳನ್ನು ಚಾಚೂ ತಪ್ಪದೆ

ಅನುಸರಿಸಿ ಬರೆದಿರುವ ಕಥೆಗಳಲ್ಲಿ ಮಾತ್ರವೇ ಮತ್ತೆ ಕೆಲವರು ಕಲೆಯನ್ನು ಕಾಣುತ್ತಾರೆ. ಇದು ಉಚಿತವಲ್ಲವೆಂದರೆ ಬಹುಶಃ ತಪ್ಪಾಗಲಾರದು. ಪಾಶ್ಚಿಮಾತ್ಯ ಲೇಖಕರಲ್ಲಿಯೇ ಏಕಮುಖವಾದ ಅಭಿಪ್ರಾಯವೂ ನಿಷ್ಕೃಷ್ಟವಾದ ಸಿದ್ಧಾಂತವೂ ಇಲ್ಲವೆಂಬುದನ್ನು ಗಮನಿಸದೆ ಅಲ್ಲಿಯ ಕೆಲವು ಲೇಖಕರ ಗ್ರಂಥಗಳ ಪಡಿಯಚ್ಚಿನಲ್ಲಿಯೇ ಕಥೆಗಳನ್ನೆಲ್ಲ ಎರಕ ಹೊಯ್ದು ಕೊಟ್ಟುದರಲ್ಲಿ ಮಾತ್ರವೇ ಕಲೆಯನ್ನು ಕಂಡು, ವ್ಯಕ್ತಿ ವೈಶಿಷ್ಟ್ಯವನ್ನೂ ವೈವಿಧ್ಯವನ್ನೂ ಕುಂಠಿತಗೊಳಿಸುವ ಸಂಕೋಲೆಗಳನ್ನು ತೊಡುವುದು ಮಾತ್ರ ಸರ್ವಥಾ ಯುಕ್ತವಲ್ಲ. ಬಣ್ಣದಲ್ಲಿಯೂ, ಆಕಾರದಲ್ಲಿಯೂ, ವಾಸನೆಯಲ್ಲಿಯೂ ಎಲ್ಲ ಹೂಗಳಿಗೂ ಏಕರೂಪತೆಯನ್ನು ಬಯಸುವುದರಲ್ಲಿ ಅರ್ಥವಿಲ್ಲ. ಕಥಾ ಸಾಹಿತ್ಯವು ವಿದೇಶಗಳಲ್ಲಿರುವಂತೆಯೇ ನಮ್ಮ ದೇಶದಲ್ಲಿಯೂ ಈಗಿರುವುದಕ್ಕಿಂತ ಹೆಚ್ಚಿನ ವೈಶಿಷ್ಟ್ಯದಿಂದಲೂ ವೈವಿಧ್ಯದಿಂದಲೂ ಕಂಗೊಳಿಸುವಂತಾಗಲಿ!

ಪೂಜ್ಯರಾದ ಹಿರಿಯರೂ ಪ್ರಿಯಮಿತ್ರರೂ ಅನೇಕ ಮಂದಿ ನನ್ನ ಗ್ರಂಥಗಳಲ್ಲಿ ತೋರಿಸಿರುವ ಪ್ರೀತ್ಯಾದರಗಳಿಗಾಗಿ ನಾನು ಅವರಿಗೆ ವಿಶೇಷ ಕೃತಜ್ಞನಾಗಿದ್ದೇನೆ. ಈ ಪುಸ್ತಕದಲ್ಲಿರುವ ಏಳು ಕಥೆಗಳಲ್ಲಿ "ನೀನೇ ಮುದ್ದುಕೃಷ್ಣ" ಎಂಬುದು 'ಜಯಕರ್ನಾಟಕ'ದಲ್ಲಿಯೂ, "ಎಲ್ಲಾ ಯಾರಿಗೆ ಗೊತ್ತು?" ಎಂಬುದು 'ಕರ್ಣಾಟಕ ಧುರೀಣ'ದ ವಿಶೇಷ ಸಂಚಿಕೆಯಲ್ಲಿಯೂ, "ಈ ಹುಚ್ಚು ಉಂಟೆ?" ಎಂಬುದು 'ಕಥಾಂಜಲಿ'ಯಲ್ಲಿಯೂ ಪ್ರಕಟವಾಗಿದ್ದುವು. "ಗಿರಿಜಾ ಕಲ್ಯಾಣ" ಎಂಬುದು ಮನೋಹರ ಗ್ರಂಥಮಾಲೆಯ 'ನವಿಲುಗರಿ' ಎಂಬ ಕಥಾ ಸಂಗ್ರಹದಲ್ಲಿಯೂ, "ಪುಸ್ತಕ ಪಿಶಾಚ" ಎಂಬುದು 'ಕಾಮನ ಬಿಲ್ಲು' ಎಂಬ ಕಥಾ ಸಂಗ್ರಹದಲ್ಲಿಯೂ ಪ್ರಕಟವಾದ ಕಥೆಗಳು. ಹೀಗೆ ಈ ಐದು ಕಥೆಗಳನ್ನು ಪ್ರಕಟಿಸಿ ಉಪಕರಿಸಿದ ಈ ಮಾಸಪತ್ರಿಕೆಗಳ ಮತ್ತು ಕಥಾ ಸಂಗ್ರಹಗಳ ಸಂಪಾದಕರುಗಳಿಗೆ ಕೃತಜ್ಞತೆಯಿಂದ ನನ್ನ ವಂದನೆಗಳನ್ನು ಸಲ್ಲಿಸುವೆನು. "ಗಿರಿಜಾ ಕಲ್ಯಾಣ" ಎಂಬ ಕಥೆಯನ್ನು ಈಚೆಗೆ ಯುಕ್ತ ತೋರಿದಂತೆ ಸ್ವಲ್ಪಮಟ್ಟಿಗೆ ಮಾರ್ಪಡಿಸಿದ್ದೇನೆ. "ಕಾಡು ಪಾಪ" ಎಂಬ ಕಥೆಯನ್ನು ತಮ್ಮ ಪತ್ರಿಕೆಯಲ್ಲಿ ಪ್ರಕಟಿಸಿ ಉಪಕರಿಸಿದುದಕ್ಕಾಗಿ 'ಸರಸ್ವತಿ'ಯ ಸಂಪಾದಕಿಯವರಿಗೂ

ಕೃತಜ್ಞತೆಯಿಂದ ನನ್ನ ವಂದನೆಗಳನ್ನು ಸಲ್ಲಿಸುವೆನು. "ಚಿನ್ನದ ಬೊಂಬೆ" ಎಂಬ ಕಥೆಯು ಇದುವರೆಗೆ ಮತ್ತೆಲ್ಲಿಯೂ ಪ್ರಕಟವಾಗಿಲ್ಲ. ಈ ಪುಸ್ತಕವನ್ನು ಅಂದವಾಗಿ ಅತಿ ಬೇಗ ಮುದ್ರಿಸಿಕೊಟ್ಟುದಕ್ಕಾಗಿ ಬೆಂಗಳೂರು ಪ್ರೆಸ್ಸಿನವರಿಗೂ ನನ್ನ ವಂದನೆಗಳು ಸಲ್ಲಬೇಕಾಗಿವೆ.

ಈ ಗ್ರಂಥದಿಂದ ಕನ್ನಡಿಗರಿಗೆ ಅಲ್ಪಸ್ವಲ್ಪ ಸಂತೋಷವೇನಾದರೂ ಉಂಟಾದಲ್ಲಿ ನನ್ನ ಶ್ರಮವು ಸಾರ್ಥಕವಾಯಿತೆಂದೆಣಿಸುವೆನು.

ಬೆಂಗಳೂರು,
ತಾ|| ೨೫-೧-೧೯೩೪.

**ಸಿ. ಕೆ. ವೆಂಕಟರಾಮಯ್ಯ.**

---

## ಎರಡನೆಯ ಮುದ್ರಣದ ಪೀಠಿಕೆ

ಕನ್ನಡಿಗರು ಈ ಗ್ರಂಥದ ವಿಚಾರದಲ್ಲಿ ತೋರಿಸಿದ ಆದರಕೃಪೆಗಳ ಪರಿಣಾಮವಾಗಿ ಎರಡನೆಯ ಸಲ ಇದನ್ನು ಅಚ್ಚು ಹಾಕಿಸುವ ಸುಯೋಗವು ದೊರೆಯಿತು. ನನ್ನ ದೇಶಬಾಂಧವರು ಇದೇ ರೀತಿ ಇನ್ನು ಮುಂದೆ ಕೂಡ ಆದರಕೃಪೆಗಳನ್ನು ತೋರಿಸುವರೆಂದು ನಂಬಿದ್ದೇನೆ. ಈ ಗ್ರಂಥವನ್ನು ಎಸ್. ಎಸ್. ಎಲ್. ಸಿ. ಪರೀಕ್ಷೆಗೆ ಪಠ್ಯಪುಸ್ತಕವಾಗಿ ಗೊತ್ತುಮಾಡಿದ್ದ ಉಪಕಾರಕ್ಕಾಗಿ ನಾನು ಮದರಾಸು ಸರ್ಕಾರದ "ಟೆಕ್ಸ್ಟ-ಬುಕ್ ಕಮಿಟಿ"ಯವರಿಗೂ ವಿದ್ಯಾಭ್ಯಾಸದ ಇಲಾಖೆಯವರಿಗೂ ಕೃತಜ್ಞನಾಗಿದ್ದೇನೆ.

ಬೆಂಗಳೂರು,
ತಾ|| ೨೨-೧-೧೯೩೬.

**ಸಿ. ಕೆ. ವೆಂಕಟರಾಮಯ್ಯ.**

---

# ವಿಷಯಾನುಕ್ರಮಣಿಕೆ

---

## ಇದೇ ಗ್ರಂಥಕರ್ತನಿಂದ ರಚಿತವಾದ
## ಇತರ ಗ್ರಂಥಗಳು

---

| | ರೂ. | ಆ. | ಪೈ |
|---|---|---|---|
| ಹಳ್ಳಿಯ ಕಥೆಗಳು . . . . | ೦ | ೮ | ೦ |
| ನಮ್ಮ ಸಮಾಜ (ಸಾಮಾಜಿಕ ನಾಟಕ) . . | ೧ | ೦ | ೦ |
| ಮಂಡೋದರಿ (ಪೌರಾಣಿಕ ನಾಟಕ) ಸಾದಾ ಪ್ರತಿ . | ೧ | ೦ | ೦ |
| ,, ಕ್ಯಾಲಿಕೊ ಪ್ರತಿ . | ೧ | ೮ | ೦ |
| ಪೈಗಂಬರ ಮಹಮ್ಮದನು . . . | ೧ | ೦ | ೦ |
| ಕಾಳಿದಾಸನು ಶೃಂಗಾರ ರಸವನ್ನು ಚಿತ್ರಿಸಿರುವ ಬಗೆ . . . . | ೦ | ೮ | ೦ |
| ಸುಂದರಿ (ಸಾಮಾಜಿಕ ನಾಟಕ) . . . | ೦ | ೧೨ | ೦ |
| ನಚಿಕೇತ (ಕಠೋಪನಿಷತ್ತಿನ ಆಧಾರದ ಮೇಲೆ ಬರೆದಿರುವ ನಾಟಕ) . . . . . | ೧ | ೦ | ೦ |
| ಬುದ್ಧ (ಗೌತಮ ಬುದ್ಧನ ಜೀವನ ಚರಿತ್ರೆ) . . | ೧ | ೮ | ೦ |

ಈ ಗ್ರಂಥಗಳನ್ನು "**ಸತ್ಯಶೋಧನ ಪುಸ್ತಕ ಭಂಡಾರ,** ಕೋಟೆ, ಬೆಂಗಳೂರು ಸಿಟಿ" ಎಂಬ ವಿಳಾಸಕ್ಕೆ ಬರೆದು ತರಿಸಿಕೊಳ್ಳಬಹುದು.

# ಚಿನ್ನದ ಬೊಂಬೆ

೧

ಗೌರಿಯ ಹಬ್ಬವು ಕಳೆದು ಕೆಲವು ದಿನಗಳಾಗಿದ್ದುವು. ಭಾಗೀರಥಮ್ಮನೂ ಅವಳ ಜೊತೆಯ ಹುಡುಗಿಯರೂ ಒಂದೊಂದು ದಿನವನ್ನು ಕಳೆಯುವುದೂ ಒಂದೊಂದು ಯುಗವನ್ನು ಕಳೆದಂತೆ ಕಷ್ಟವಾಗಿದ್ದಿತು. ಅವರು ಎಷ್ಟು ಕುತೂಹಲದಿಂದ ಬಯಸಿದರೂ ದಿನಗಳು ಬೇಗ ಬೇಗ ಉರುಳಲೊಲ್ಲವು. ಒಂದು ದಿನ ಅವರೆಲ್ಲರೂ ಸೇರಿ ಕವಡೆಯ ಆಟವನ್ನಾಡುತ್ತಿದ್ದರು. ಆಟದ ಮಧ್ಯದಲ್ಲಿ ಭಾಗೀರಥಮ್ಮನು ತನ್ನ ಸರದಿಯ ಆಟವನ್ನೂ ಗಮನಿಸದೆ, ಜೋಯಿಸರಂತೆ ಅಂಗೈ ಬೆರಳುಗಳನ್ನು ಮಡಿಸುತ್ತ, "ಭಾದ್ರಪದ ಒಂದು, ಆಶ್ವೀಜ ಎರಡು, ಕಾರ್ತೀಕ ಮೂರು, ಕಾರ್ತೀಕಾ ಮೂರೂ" ಎಂದು ತನ್ನ ಜೊತೆಯವರಿಗೂ ಕೇಳಿಸುವಂತೆ ಆಕಾಶ ಭಾಷಣ ಮಾಡಿದಳು.

ಅದನ್ನು ನೋಡಿ ಹುಡುಗಿಯರೆಲ್ಲರೂ ನಕ್ಕರು. ರಂಗಮ್ಮನು ನಗುವನ್ನು ನಿಲ್ಲಿಸಿ "ಭಾಗು, ಭಾಗು, ಅದೇನೆ ನೀನು ಲೆಕ್ಕಾಚಾರ ಹಾಕಿದ್ದು? ಭಾದ್ರಪದ ಒಂದು, ಆಶ್ವೀಜ ಎರಡು, ಕಾರ್ತೀಕ ಮೂರು ಎಂದು ಆಚೆ ಮನೆ ಸುಬ್ಬಾಜೋಯಿಸರ ಹಾಗೆ ಬೆಟ್ಟು ಮಡಿಸಿ ಗುಣಿತ ಹಾಕಿದೆಯಲ್ಲ. ಮಾರ್ಗಶಿರ ಮಾಸದಲ್ಲಿ ನಿನ್ನ ಮದುವೆಯೇನೆ?" ಎಂದಳು. ಆ ಬಳಿಕ ಹುಡುಗಿಯರೆಲ್ಲರೂ ಗಹಗಹಿಸಿ ನಕ್ಕರು. ನಗುವನ್ನು ನಿಲ್ಲಿಸಿದವರು ಕೂಡ, ಇತರರು ಇನ್ನೂ ನಗುತ್ತಿರುವುದನ್ನು ನೋಡಿ ಮತ್ತೆ ನಗುವನ್ನು ಪ್ರಾರಂಭಿಸುತ್ತಿದ್ದುದರಿಂದ, ನಗುವು ಯಾವಾಗ ನಿಲ್ಲುವುದೆಂಬುದನ್ನು ಯಾರೂ ಹೇಳುವಂತಿರಲಿಲ್ಲ. ಆದರೆ ಒಂದು ವಿಶೇಷ. ಭಾಗೀರಥಮ್ಮನು ಜೋಲುಮೋರೆ ಹಾಕಿಕೊಂಡಾಗಲಿ, ಗಂಟುಮುಖದಿಂದ "ದುಮುದುಮು"ಗುಟ್ಟುತ್ತಲಾಗಲಿ ಕುಳಿತುಕೊಳ್ಳದೆ ತಾನೂ

ನಗುತ್ತಿದ್ದಳು. ಆದುದರಿಂದ ಅವರೆಲ್ಲರ ನಗುವಿಗೂ ಕಳೆಯೇರಿ, ಎಷ್ಟು ನಕ್ಕರೂ ತೃಪ್ತಿಯಾಗದಷ್ಟು ಉತ್ಸಾಹ ಹುಟ್ಟಿತು.

ಎಲ್ಲರೂ ನಕ್ಕು ಸಾಕಾದ ಮೇಲೆ ಭಾಗೀರಥಮ್ಮನು ರಂಗಮ್ಮನನ್ನು ಕುರಿತು "ರಂಗು, ರಂಗು, ಮಾರ್ಗಶಿರ ಮಾಸದಲ್ಲಿ ನನಗೆ ಮದುವೆಯಾಗುವುದಕ್ಕೆ ನಿನ್ನ ಹಾಗೆ ನನಗೇನು ಮಾಲಗಣ್ಣಿದೆಯೆ?" ಎಂದಳು. ರಂಗಮ್ಮನೂ ಸುಮ್ಮನಿರಲಿಲ್ಲ. ಭಾಗೀರಥಮ್ಮನೊಡನೆ "ಭಾಗು, ಭಾಗು, ನಿನಗೇನು ಗೊತ್ತು, ಮಾಲಗಣ್ಣಿನ ಮಹಿಮೆ! ಮಾಲಗಣ್ಣಿನ ಹೆಣ್ಣು ಕೈಹಿಡಿದರೆ ಮೂಲೆಯಲ್ಲಿದ್ದವರೂ ಮಹಡಿಯನ್ನೇರುತ್ತಾರೆ" ಎಂದಳು. ಮತ್ತೆ ನಗುವಿನ ಲಹರಿಯು ಪ್ರಾರಂಭವಾಯಿತು.

ಅಷ್ಟರಲ್ಲಿ ಭಾಗೀರಥಮ್ಮನ ತಾಯಿ ಸುಬ್ಬಮ್ಮನವರು ಹುಡುಗಿಯರಿಗೆಲ್ಲ ಕೊಡುವುದಕ್ಕಾಗಿ ಕಳಿತ ಬಾಳೆಯ ಹಣ್ಣುಗಳನ್ನು ಬೆಳ್ಳಿಯ ತಟ್ಟೆಯಲ್ಲಿಟ್ಟುಕೊಂಡು ಅಲ್ಲಿಗೆ ಬಂದರು. ಅವರ ಮುಖದ ಮೇಲೆ ಮುಗುಳು ನಗೆಯು ಮೂಡಿದ್ದಿತು. ಅವರು ಅಲ್ಲಿಗೆ ಬಂದೊಡನೆಯೆ ನಗುವಿನ ಲಲ್ಲೆಯು ನಿಂತುಹೋಯಿತು. ಸುಬ್ಬಮ್ಮನವರು ನಗುತ್ತಿದ್ದುದನ್ನು ಕಂಡು, ತಮ್ಮ ಮಾತುಗಳನ್ನು ಅವರೆಲ್ಲಿ ಕೇಳಿಬಿಟ್ಟರೋ ಎಂದು ಭಾಗೀರಥಮ್ಮನಿಗೂ ರಂಗಮ್ಮನಿಗೂ ಕಳವಳವಾಯಿತು. ಅವರಿಬ್ಬರೂ ನೆಲವನ್ನೇ ದೃಷ್ಟಿಸಿ ನೋಡುತ್ತ ತಲೆತಗ್ಗಿಸಿ ಕುಳಿತುದನ್ನು ಕಂಡು, ಇತರ ಹುಡುಗಿಯರು ಅವರ ಕಡೆಗೇ ನೋಡಿ ನಿಶ್ಶಬ್ದವಾಗಿ "ಮುಸಿ ಮುಸಿ" ನಗುತ್ತಿದ್ದರು. ಆ ಅಣಕದ ನಗುವಿನ ಆಶಯವು ಅವರಿಗೆ ಗೊತ್ತಾಯಿತು. ಆದರೂ ಬೋನಿನಲ್ಲಿ ಬಿದ್ದ ಹುಲಿಗಳಂತೆ, ಏನು ಮಾಡುವುದಕ್ಕೂ ಅವರಿಗೆ ಸಾಧ್ಯವಿರಲಿಲ್ಲ.

ಭಾಗೀರಥಮ್ಮನು ತನ್ನ ತಾಯಿಯು ತನಗೆ ಕೊಡುವುದಕ್ಕೆ ಮೊದಲೇ ಆಕೆಯಿಂದ ಬಾಳೆಯ ಹಣ್ಣುಗಳನ್ನು ಕಸಿದುಕೊಳ್ಳಲಿಚ್ಛಿಸಿದವಳಂತೆ ನಟಿಸುತ್ತ ಕೈ ನೀಡಿದಳು. ಏನನ್ನಾದರೂ ಮಾಡಿ ಇತರರೆಲ್ಲರ ಮನಸ್ಸೂ ಬೇರೆ ವಿಷಯಕ್ಕೆ ತಿರುಗುವಂತೆ ಮಾಡಬೇಕೆಂಬುದು ಅವಳ ಅಭಿಲಾಷೆ. ಸುಬ್ಬಮ್ಮನವರು "ಹೀಗೆ ಆತುರಪಟ್ಟರೆ ಹೇಗೆ ಹೇಳು. ಎಲ್ಲರಿಗೂ ಕೊಟ್ಟಮೇಲೆ ನಿನಗೆ. . ಸ್ವಲ್ಪ ತಡಿ" ಎಂದರು.

ಭಾಗೀರಥಮ್ಮನು ಸಾಲಿಗೆಯಿಂದ ತುಟಿಗಳನ್ನು ಸವರಿಕೊಂಡು, ತಲೆಯು ಕಡಿಯುದಿದ್ದರೂ ಕೆರೆದುಕೊಳ್ಳುತ್ತ ಕೊರಳನ್ನು ಕೊಂಕಿಸಿ, "ಬಾಳೇಹಣ್ಣು ಸೊಗಸಾಗಿ ಕಳಿತಿದೆಯಮ್ಮ. ಆಶೆಗೆ ಬಾಯಲ್ಲಿ ನೀರೂರಿತು. ಅದಕ್ಕೆ ಕೈನೀಡಿದೆ" ಎಂದಳು.

ಸುಬ್ಬಮ್ಮನವರು ನಗುತ್ತ "ಹೌದು ಕಣೆ. ಮರಳೀ ಮರಳೀ ಮಂಚಕ್ಕೆಷ್ಟು ಕಾಲೇ ಅಂದರೆ ಮೂರೂ ಮತ್ತೊಂದು ಅಂತ. ನಿಮ್ಮ ಚೆಲ್ಲಾಟ ನಂಗೂ ಗೊತ್ತಿದೆ. ಕಣ್ಣಿಗೆ ಮಣ್ಣೆರಚಬೇಡ" ಎಂದರು. ಭಾಗೀರಥಮ್ಮನು ಸೋಲುವ ಜಾತಿಗೆ ಸೇರಿದವಳಲ್ಲ. ಅವಳು ದಿಟ್ಟತನದಿಂದ "ನಾನೇನಮ್ಮ ಮಾಡಿದ್ದು?" ಎಂದಳು. ಸುಬ್ಬಮ್ಮನವರ ನಗುವು ಹೆಚ್ಚಿತು. ಅವರು "ನೀನು ಮಾಡಿದ್ದೇನೇ, ಹೇಳ್ತೀನಿ ಕೇಳು. ಭಾದ್ರಪದ, ಆಶ್ವೀಜ, ಕಾರ್ತೀಕ, ಅದೆಲ್ಲಾ ಏನೆ? ಯಾರಿಗೆ ಮದುವೆಯೆ? ಅಯ್ಯೋ ಗಂಡುಬೀರಿ! ನಾಚಿಕೆಯಿಲ್ಲದೆ ನಿನ್ನ ಮದುವೆ ಮಾತು ನೀನೇ ಆಡೋದೇ? ನೀನೇನೊ ಮಾತಿನಮಲ್ಲಿ ಅಂತಿದ್ದೆ. ಆದರೆ ನಿನ್ನ ಬಾಯಿ ಇಂಥಾ ಭಾರಿ ಬುಡುಬುಡಿಕೆ ಅಂತಿರಲಿಲ್ಲ. ಮಾಘ ಮಾಸಕ್ಕೆ ಮದುವೆ ಮಾಡಬೇಕು ಅಂತ ನಾವು ಮಾತಾಡಿಕೊಂಡರೆ ಅದನ್ನ ಹೊಂಚು ಕೇಳಿದಾಳೆ. ಮಾಘಕ್ಕೆ ಬದಲು ಮಾರ್ಗಶಿರ ಮಾಸಕ್ಕೇ ಮದುವೆ ಅಂತ ಡಂಗುರ ಹೊಡೆದು ಗೆಜ್ಜೆ ಕಟ್ಟಿಕೊಂಡು ಕುಣೀತಾಳೆ" ಎಂದರು. ಎಲ್ಲವನ್ನೂ ಪೂರ್ತಿಯಾಗಿ ಕೇಳದೆ ಒಂದೊಂದು ಮಾತನ್ನು ಕಿಘಿಯ ಮೇಲೆ ಹಾಕಿಕೊಂಡುದರ ಪರಿಣಾಮವಾಗಿ ಸುಬ್ಬಮ್ಮನವರು ಈ ರೀತಿ ಹೇಳಬೇಕಾಯಿತು.

ಭಾಗೀರಥಮ್ಮನು ಜಗ್ಗಲಿಲ್ಲ. ಸುಬ್ಬಮ್ಮನವರೊಡನೆ "ಅಮ್ಮಾ, ಅಮ್ಮಾ, ನೀನು ಪೂರ್ತಿ ಕೇಳಲಿಲ್ಲ. ನನ್ನ ಮದುವೆ ಮಾತಲ್ಲಮ್ಮ ನಾನಾಡಿದ್ದು" ಎಂದಳು. ರಂಗಮ್ಮನು "ಇಲ್ಲ, ಸುಬ್ಬಮ್ಮನೋರೆ, ಮದುವೆ ಮಾತಲ್ಲ ಅವಳಾಡಿದ್ದು" ಎಂದಳು. ಸುಬ್ಬಮ್ಮನವರು ಅವಳ ಕೈಗೆರಡು ಬಾಳೆಯ ಹಣ್ಣುಗಳನ್ನು ಕೊಟ್ಟು "ಸರಿಯಮ್ಮ ರಂಗು. ಹಾಗಲಕಾಯಿಗೆ ಬೇವಿನ ಕಾಯಿ ಸಾಕ್ಷಿ. ಅದಿರಲಿ. ನೀನು ಸರಿಯಮ್ಮ. ಬಂಗಾರದಂಥ ಹುಡುಗಿ. ನೀನೇ ಕ್ಲಾಸಿನಲ್ಲಿ ಫಸ್ಟಂತೆ. ನಿನ್ನ ಬುದ್ಧಿಯಲ್ಲಿ ಸ್ವಲ್ಪ ತೆಗೆದು ನಮ್ಮ ಪೆದ್ದು ಭಾಗೂ ತಲೆಗೂ ತುಂಬಬಾರದೆ, ಹೇಳು.

ಅವಳು ಎಡಗಡೆಯಿಂದ ಫಷ್ಟು; ಶುದ್ಧ ಶುಂಠಕಾಯಿ" ಎಂದರು. ಭಾಗೀರಥಮ್ಮನು ನಗುತ್ತ "ಬುದ್ಧಿಯನ್ನ ಒಬ್ಬರ ತಲೆಯಿಂದ ಇನ್ನೊಬ್ಬರ ತಲೆಗೆ ತುಂಬೋಕೆ ಅದೇನು ದೋಸೆ ಹಿಟ್ಟೇನಮ್ಮ? ತಲೆಗಳೇನು ಕೊಳದಪ್ಪಲೆಗಳೊ? ನೀನು ಹೋಗಮ್ಮ. ನಾವು ಕವಡೆ ಆಡಬೇಕು" ಎಂದಳು.

ಸುಬ್ಬಮ್ಮನವರು "ಕವಡೆ ಆಡಬೇಕೋ, ಲಲ್ಲೆ ಹೊಡೀಬೇಕೋ, ಏನಾದರೂ ಮಾಡಿಕೊಳ್ಳಿ. ನಾನು ಅಡ್ಡಿಯಾಗೋದಿಲ್ಲ. ಇಗೋ ಹೊರಟೆ" ಎಂದು ಹೇಳಿ ನಗುತ್ತ ಅಡಿಗೆಯ ಮನೆಯ ಕಡೆಗೆ ಹೊರಟುಹೋದರು. ಭಾಗೀರಥಮ್ಮನು ಸರಕ್ಕನೆ ಮೇಲಕ್ಕೆದ್ದು ತಾವು ಕುಳಿತಿದ್ದ ಕೊಟಡಿಯ ಬಾಗಿಲನ್ನು ಹಾಕಿ ಭದ್ರಪಡಿಸಿ ದೊಡ್ಡದಾಗಿ ಉಸಿರು ಬಿಟ್ಟು "ಇನ್ನು ಬದುಕಿದೆವಮ್ಮ" ಎಂದು ಆಕಳಿಸಿದಳು. ಎಲ್ಲರೂ ಮತ್ತೆ ನಕ್ಕರು.

ರಂಗಮ್ಮನು "ಇನ್ನು ಹಾಸ್ಯವೆಲ್ಲಾ ಸಾಕಮ್ಮ. ಭಾಗು, ನೀನು ಗುಣಿಸಿ ನೋಡಿದ್ದೇನು?" ಎಂದಳು. ಕೆಲವರು ಹುಡುಗಿಯರು ಸಡಗರದಿಂದ ಮತ್ತೆ ನಗಲಾರಂಭಿಸಿದರು. ಭಾಗೀರಥಮ್ಮನು ಬಿಂಕದ ಮುಗುಳು ನಗೆಯಿಂದ "ನಿನಗಂತು ತಲೆಯಲ್ಲಿ ಬುದ್ಧಿಯಿದೆ. ಇನಾಂ ಬರುತ್ತೇ ಅಂತ ಭರವಸೆ" ಎಂದು ಹೇಳಿ ಆ ಬಳಿಕ ತನ್ನ ಬಲಗೈ ತರ್ಜನಿಯನ್ನು ಎತ್ತಿ ಹಿಡಿದು ಅಲ್ಲಾಡಿಸುತ್ತ "ರಂಗೂ, ರಂಗೂ, ಬರೆದಿಟ್ಟುಕೊ, ಬೇಕಾದರೆ. ಸೆರಗಿಗೆ ಗಂಟುಹಾಕಿಟ್ಟುಕೊ. ನೀವೆಲ್ಲ ಓದಿನಲ್ಲಿ ಇನಾಂ ಪಡೆದರೆ, ನಾನು ನಿಮಗೆ ಇನಾಂ ಬರೋ ದಿನ ನಾಟಕದಲ್ಲಿ ಚೆನ್ನಾಗಿ ಭೇಷ್ ಅನ್ನಿಸಿಕೊಂಡು ಅದಕ್ಕಾದರೂ ಇನಾಂ ಹೊಡೆದೇ ಹೊಡೀತೀನಿ" ಎಂದಳು.

ಆಗ ಅಚ್ಚು ಸುಮ್ಮನಿರದೆ ಕೀಟಲೆಗೆ "ಲೇ ಭಾಗು, ಸೆರಗಿಗೆ ಗಂಟು ಹಾಕಿಟ್ಟುಕೊ ಅಂದೆ. ರಂಗು ಲಂಗ ಹಾಕಿಕೊಂಡಿದ್ದಾಳಲ್ಲೆ? ನಿನ್ನ ಮಾತು ಗಂಟು ಹಾಕಿಕೊಳ್ಳೋದಕ್ಕೆ ಸೀರೆಯೆಲ್ಲಿದೆ, ಸೆರಗೆಲ್ಲಿದೆ?" ಎಂದು ನಕ್ಕಳು. ಭಾಗೀರಥಮ್ಮನು "ವಿಷಯವೇ ತಿಳಿಯದೆ ರೈಲು ಬಿಡಬೇಡವೇ, ಅಚ್ಚಕ್ಕ. ಮುಂದಿನ ಶುಕ್ರವಾರದ ದಿನದಿಂದ ರಂಗು ಸೀರೇನೇ ಉಡಬೇಕೆಂತ ಗೊತ್ತಾಗಿದೆಯಂತೆ. ಈಗ ಸದ್ಯಕ್ಕೆ ಅವಳು ಸುಮ್ಮನೇ ಇದ್ದು ಆಮೇಲೆ ಸೀರೆ ಸೆರಗಿಗೆ ಗಂಟುಹಾಕಿಕೊಳ್ಳಲೇಳು" ಎಂದಳು. ಅಚ್ಚು "ಭಲಾ,

ಚೆನ್ನಾಗಿ ಹೇಳಿದೆ. ನನ್ನ ಹೆಸರು ಲಕ್ಷ್ಮಿಯಿಂದ ಲಕ್ಕಮ್ಮವಾಗಿ ಕೊನೆಗೆ ಅಚ್ಚಮ್ಮವಾಯಿತು. ನೀನು ಅಚ್ಚಕ್ಕ ಅಂತ ಬೇರೆ ಬಿರುದುಕೊಟ್ಟೆ. ಅದಿರಲಿ. ಮೂರು ತಿಂಗಳು ಲೆಕ್ಕಾ ಹಾಕಿ ಬೆರಳು ಮಡಿಸಿ ಮಾರ್ಗಶಿರ ಮಾಸ ಗೊತ್ತು ಮಾಡಿದ್ದೇಕೆ ಹೇಳೇ ಅಂದರೆ, ಇವಳ ಜಂಭವೇ ಜಂಭ'' ಎಂದು ಉತ್ತರ ಹೇಳಿದಳು. ಅಂದಿನ ಅಮೃತ ಘಳಿಗೆಯ ಫಲ. ಅವರಲ್ಲಿ ಯಾರ ಮುಖದಲ್ಲಿ ನೋಡಿದರೂ ನಗುವಿನ ಸುರಿಮಳೆಯೇ. ಹಲವು ಸಂದರ್ಭದಲ್ಲಿ ಮುಂದಿನ ಅಳುವಿಗೆ ಇಂದಿನ ನಗುವೇ ನಾಂದಿ.

ಭಾಗೀರಥಮ್ಮನು ಚಪ್ಪಾಳೆ ತಟ್ಟುತ್ತ ''ಅಬ್ಬಾ ಅಬ್ಬಾ ಒಬ್ಬರಿಗಿಂತ ಒಬ್ಬರು ಬುದ್ಧಿವಂತರಂತೆ. ಆದರೂ ಒಬ್ಬರ ತಲೆಯಲ್ಲೂ ಬುದ್ಧಿಯಿಲ್ಲ. ಇಷ್ಟೂ ತಿಳಿಯಲಿಲ್ಲವೆ? ನಮ್ಮ ಮೇಡಂ ನಮ್ಮಿಂದ ರುಕ್ಮಾಂಗದ ನಾಟಕದ ಸೀನುಗಳನ್ನ ಆಡಿಸುವ ದಿನ ಇನ್ನೂ ಮೂರು ತಿಂಗಳಿದೆಯೆಂದು ಲೆಕ್ಕಾಹಾಕಿದೆ. ಆ ದಿನ ನಮ್ಮ ಸ್ಕೂಲಿಗೆ ದೊಡ್ಡ ದೊಡ್ಡವರೆಲ್ಲ ಬರ್ತಾರೆ. ಪಾಠಕ್ಕಾಗಿ ರಂಗುವಿಗೆ ಇನಾಂ. ನಾಟಕಕ್ಕಾಗಿ ನನಗೆ ಇನಾಂ'' ಎಂದಳು.

ಅಚ್ಚಮ್ಮ ಸುಮ್ಮನಿರದೆ ''ಅದೇಕೇ ಹಾಗೆಂದೆ? ನಾಟಕದಲ್ಲಿ ರಂಗುವಿಗೂ ಇನಾಂ ಬರಕೂಡದೋ, ಹಾಗಾದರೆ? ನನಗೂ ನಾಟಕದಲ್ಲಿ ಪಾರ್ಟು ಕೊಟ್ಟೇ ಕೊಡುತ್ತಾರೆ. ನನಗೆ ಬರಕೂಡದೋ, ಇನಾಮು?'' ಎಂದಳು. ಭಾಗೀರಥಮ್ಮನು ನಗುತ್ತ ''ಕೂಡದೆಂದವರು ಯಾರೆ? ನಿಮಗೆ ಫಸ್ಟು, ಸೆಕೆಂಡು, ಎಲ್ಲಾ ಇನಾಮುಗಳೂ ಓದಿನಲ್ಲಿ ಮೀಸಲಾಗೇ ಇವೆ. ಇದರಲ್ಲೂ ಬೇಕಾದರೆ ಬರಲಿ. ನನಗೆ ಅದರಲ್ಲಂತೂ ಸೌತೇಕಾಯಿ ಸೊನ್ನೆ. ಇದರಲ್ಲಾದರೂ ಬರಲೀ ಅಂತ ಹಾಳು ಆಸೆ. ಅಷ್ಟೆ. ಇದರಲ್ಲಿ ಇನಾಂ ಬಂದೇ ಬರುತ್ತೆ. ಬರದೇ ಇದ್ದರೆ ನಾನು ಬದುಕಿರೋದೇ ಬೇಡ'' ಎಂದಳು.

ರಂಗಮ್ಮನು ಭಾಗೀರಥಮ್ಮನೊಡನೆ ''ನಿನಗೆ ಒಳ್ಳೇ ಇನಾಂ ಬರಲಮ್ಮ. ಎಲ್ಲಾ ಇನಾಮೂ ನನಗೇ ಬರಬೇಕೆಂತ ನನಗೇನೂ ದುರಾಸೆಯಿಲ್ಲ. ಎಲ್ಲರಿಗೂ ಇನಾಂ ಬಂದರೇ ಚೆನ್ನ'' ಎಂದಳು.

ಸಾತಿಯು ತನ್ನ ಕೀರಲು ಧ್ವನಿಯಲ್ಲಿ "ಈ ಬೇಳುವೆ ಮಾತಿಗೇನಂತೆ. ನೀನು ಪಾರ್ಟು ಮಾಡಿದರೆ ಅವಳಿಗೆ ಸೊನ್ನೆ ಬಿದ್ದರೆ?" ಎಂದಳು. ಅದಕ್ಕೆ ರಂಗಮ್ಮನು "ಸಾತಿ, ಸಾತಿ, ನೀನೂ ನಾನೂ ಯಾರು ಪಾರ್ಟು ಮಾಡಿದರೂ ಭಾಗೂ ಇನಾಮು ತಪ್ಪುವಹಾಗಿಲ್ಲ. ಅವಳಿಗೇನೆ, ಚಿನ್ನದ ಬೊಂಬೆ ಹಾಗಿದ್ದಾಳೆ. ಬಣ್ಣವಿಲ್ಲದೆ ಅವಳು ಬಂದರೂ ಜನರೆಲ್ಲ ಬೆರಗಾಗಿ ಚಪ್ಪಾಳೆ ತಟ್ಟುತ್ತಾರೆ" ಎಂದು ಉತ್ತರ ಹೇಳಿದಳು. ಸಾತಿಯು "ಈ ಜಿಡಗೆಲ್ಲ ಕಟ್ಟಿಡೆ. ಅಲ್ಲಿ ರೂಪಕ್ಕೆ ಮಾತ್ರವೇ ಅಲ್ಲ, ಇನಾಮು ಬರೋದು. ನಿನ್ನಹಾಗೆ ಚೆನ್ನಾಗಿ ಮಾತನಾಡಿ ಆಟ ಕಟ್ಟಿ ನಟನೆ ಹೂಡೋದಕ್ಕೂ ಬರಬೇಕು. ಬಣ್ಣ ಹಚ್ಚಿಕೊಂಡಮೇಲೆ ನಿನ್ನಂಥ ಎಣ್ಣೆಗೆಂಪಿನ ಹೆಣ್ಣೂ ಭಾಗೂಗಿಂತ ಹೆಚ್ಚಿನ ಚಿನ್ನದ ಬೊಂಬೆಯೇ ಆಗ್ತಾಳೆ" ಎಂದಳು.

ರಂಗಮ್ಮನು "ಹಾಗೂ ಆಗಲಮ್ಮ. ನಾನು ಮೇಡಂ ಕೈಲಿ ನನಗೆ ಯಾವ ವೇಷವೂ ಬೇಡವೆಂತ ನಾಡಿದ್ದು ಹೇಳಿಯೇ ಬಿಡ್ತೀನಿ. ನಮ್ಮ ಭಾಗೂಗೇ ಇನಾಮು ಬರಲಮ್ಮ. ಅದೇ ನನಗೆ ಬೇಕಾದ್ದು. ನನಗೆ ಪಾರ್ಟು ಮಾಡೋದಕ್ಕೆ ಇಷ್ಟವಿಲ್ಲವೆಂತ ಹೇಳಿದರೆ ಅವರೇನು ಮಾಡು ತ್ತಾರೆ? ನಮ್ಮ ಭಾಗು ಇನಾಂ ಹೊಡೆದರೆ ಸಾಕು. ಅವಳು ಬರಿಯ ಕೈಯಲ್ಲಿ ಬರುವ ಹಾಗೆ ಮಾಡಲೇ ಕೂಡದು" ಎಂದಳು. ಭಾಗೀರಥಮ್ಮ ಅವಳ ಬೆನ್ನಿನ ಮೇಲೆ ಪ್ರೀತಿಯಿಂದ ಕೈಹಾಕಿ "ನಮ್ಮಮ್ಮ ಹೇಳಿದ್ದು ಸರಿ. ರಂಗೂ ಬಂಗಾರದಂಥ ಹುಡುಗಿ" ಎಂದು ಹೇಳಿ ಆದರದಿಂದ ಅವಳ ಕೊರಳನ್ನು ತಬ್ಬಿಕೊಂಡಳು.

ಸಾತಿಯು ಸುಮ್ಮನಾಗದೆ "ಈ ಹೊಗಳಿಕೆ, ಈ ಉಪಚಾರ, ಹಾಗಿರಲಿ. ಭಾಗು ಪಾರ್ಟು ಮಾಡೋದು, ಮೇಡಂ ಅವಳಿಗೆ ಪಾರ್ಟು ಕೊಟ್ಟರೆ ತಾನೆ? ತೊನ್ನು ಹುಡುಗಿ ಸಂಜಮ್ಮನ್ನ ಇವಳು ಕುಚೋದ್ಯ ಮಾಡಿದ್ದಕ್ಕೆ ಮೇಡಂ ಕೋಪಿಸಿಕೊಂಡಿದ್ದಾರೆ. ಆ ದಿನವೇ ಇವಳಿಗೆ ಛೀ ಪಟ್ಟೂ ಬಿತ್ತು. ಇವಳಿಗೆ ವೇಷಕ್ಕೆ ಚಕ್ಕರ್ ಹೇಳಬಹುದೆಂತ ನನಗೆ ಅನುಮಾನ" ಎಂದಳು. ಕಳ್ಳನಿಗೆ ಚೇಳು ಬಡಿದಂತಾಯಿತು; ಭಾಗೀರಥಮ್ಮನು ತನ್ನ ಮನಸ್ಸನ್ನು ಕೊರೆಯುತ್ತಿದ್ದ ಅನುಮಾನವನ್ನೇ ಸಾತಿಯ ಬಾಯಿಂದಲೂ ಕೇಳಿದಳು. ಭಾಗೀರಥಮ್ಮನಿಗೆ ಪಾತ್ರ ಧರಿಸ

ಬೇಕೆಂದು ಬಹಳ ಆಸೆಯಿದ್ದಿತು. ಸುಭದ್ರಾ ಪರಿಣಯ ನಾಟಕದ ಅಭಿನಯ ವನ್ನು ಅವಳು ಮೂರು ಸಾರಿ ನೋಡಿದ್ದಳು. ಆ ನಾಟಕದಲ್ಲಿ ಸುಭದ್ರೆಯ ಪಾತ್ರವನ್ನು ಧರಿಸಿದ್ದವನನ್ನು ಕುರಿತು ಶ್ರೀ ಕೃಷ್ಣನ ಪಾತ್ರವನ್ನು ಧರಿಸಿದ್ದವನು ಮನೋಹರವಾಗಿ ಹೇಳಿದ್ದ "ಬಾರಮ್ಮ ಬಾರೆ ಸೋದರೀ" ಎಂಬ ಹಾಡು ಅವಳ ತಂದೆಯಂತೆಯೇ ಅವಳಿಗೆ ಅಚ್ಚುಮೆಚ್ಚು. ಭಾಗೀರಥಮ್ಮನ ತಂದೆಯು ಮೂರು ಸಾರಿ ಅದೇ ನಾಟಕವನ್ನು ನೋಡುದುದಕ್ಕೆ ಆ ಹಾಡನ್ನು ಕೇಳಬೇಕೆಂಬ ಆಸೆಯೇ ಕಾರಣ. ಭಾಗೀರಥಮ್ಮನು ಆ ಹಾಡಿನ ರಾಗಕ್ಕೆ ಬಹು ದೂರವಾದ ತನ್ನದೇ ಆದೊಂದು ರಾಗದಲ್ಲಿ ಆ ಹಾಡನ್ನು ಕಲಿತಿದ್ದಳು. ರುಕ್ಮಾಂಗದ ನಾಟಕ ದಲ್ಲಿ ವೇಷ ಹಾಕಿದಾಗ ಅದನ್ನು ಹಾಡಬೇಕೆಂಬ ಆಸೆಯೂ ಅವಳ ಮನಸ್ಸಿನಲ್ಲಿದ್ದಿತು.

ನಾತಿಯ ಮಾತಿಗುತ್ತರವಾಗಿ ಭಾಗೀರಥಮ್ಮನು "ನಾತಿ! ನನ್ನ ಕಣ್ಣಾಣೆಗೂ ನಾನು ಅವಳನ್ನು ಹಾಸ್ಯ ಮಾಡುವುದಕ್ಕೆ ಹೇಳಲಿಲ್ಲ. ಅವಳ ಮುಖವೆಲ್ಲ ಬೆಳ್ಳಗಿರುವುದರಿಂದ ಅವಳ ಮುಖಕ್ಕೆ ಬಣ್ಣವನ್ನೇ ಹಾಕದೆ ಪಾರ್ಟು ಮಾಡಿಸಬಹುದೆಂತ ನಾವು ನಾವು ಮಾತಾಡುತ್ತಿದ್ದಾಗ ಹೇಳಿದೆ. ನಂಜಮ್ಮ ಗೋಳಾಡುತ್ತ ಮೇಡಂಗೆ ದೂರು ಹೇಳಿಬಿಟ್ಟಳು. ನಿಜವಾಗಿ ನನಗೆ ತೋರಿದ್ದನ್ನ ಹೇಳಿಯೂ ಹೀಗೆ ಹಗರಣವಾಯಿತು, ನೋಡು" ಎಂದಳು. ನಾತಿ ನಗುತ್ತ "ಅನೇಕ ಸಲ ನಿಜ ಹೇಳೋದರಂಥ ತಪ್ಪು ಕೆಲಸ ಇನ್ನೊಂದಿಲ್ಲ, ನೋಡಮ್ಮ. ಸಂಗೀತದ ಮೇಷ್ಟರಿಗೆ ಹಲ್ಲುಬ್ಬು ಅಂತ ಹೇಳಿ ನಾನು ಬೆನ್ನು ಮುರಿಯುವ ಹಾಗೆ ಬಿಸಿ ಬಿಸಿ ಒಬ್ಬೊಟ್ಟು ತಿಂದದ್ದಕ್ಕಿಂತಲೆ?" ಎಂದಳು. ಎಲ್ಲರೂ ಸ್ವಲ್ಪ ಸ್ವಲ್ಪ ನಕ್ಕರು.

ಆ ಬಳಿಕ ಅಚ್ಚು "ಅಲ್ಲವೇ ಭಾಗು, ಮೇಡಂ ಯಾರಿಗೆ ಯಾವ ಪಾರ್ಟು ಕೊಡ್ತಾರೋ, ಯಾರ್‍ಯಾರಿಗೆ ಪಾರ್ಟೇ ಕೊಡೋದಿಲ್ಲವೋ ಒಂದೂ ಗೊತ್ತಿಲ್ಲ. ಇನ್ನೂ ನಾಡಿದ್ದು ಅದೆಲ್ಲಾ ಹೇಳ್ತಾರೆ. ಅದಕ್ಕೋಸ್ಕರ ಅವರ ಮನೆಗೇ ನಮ್ಮೆಲ್ಲರನ್ನೂ ಬರಹೇಳಿದ್ದಾರೆ. ನೀನು ಊರಿಗೆ ಮುಂಚೆ ನಂಜಮ್ಮನ ಮಾತೇಕನ್ನು ಎತ್ತಬೇಕಾಗಿತ್ತು?" ಎಂದಳು. ಭಾಗೀರಥಮ್ಮನು ಯಾವುದೊಂದು ಉತ್ತರವನ್ನೂ ಹೇಳಲಿಲ್ಲ.

## ೨

ಕ್ಲುಪ್ತವಾಗಿದ್ದ ದಿನ "ಮೋಡಂ" ಮನೆಗೆ ಹುಡುಗಿಯರೆಲ್ಲರೂ ಸಡಗರದಿಂದ ಹೊರಟರು. ಭಾಗೀರಥಮ್ಮನಿಗೆ ಮಾತ್ರ ಬಹಳ ಯೋಚನೆ. ಸಾತಿಯು ಶಂಕಿಸಿದ್ದಂತೆ—ತನಗೂ ಅನುಮಾನವಿದ್ದಂತೆ—"ಮೋಡಂ" ಕೋಪಿಸಿಕೊಂಡು ತನಗೆಲ್ಲಿ ಯಾವ ಪಾತ್ರವನ್ನೂ ಕೊಡದೆ ಹೋಗುತ್ತಾರೋ ಎಂದು ಅವಳಿಗೆ ಚಿಂತೆ. ಅವಳು ಸ್ವಲ್ಪ ದೂರ ಸುಮ್ಮನೆ ಬರುತ್ತಿದ್ದು ತಟಕ್ಕನೆ "ಸ್ವಲ್ಪ ನಿಂತುಕೊಳ್ಳಿರಮ್ಮ, ನಾನು ಮನೆಗೆ ಓಡಿಹೋಗಿ ನಾಯಿಮರಿ ಕಟ್ಟಿಹಾಕಿ ಬರ್ತೀನಿ. ಮರೆತುಬಂದೆ" ಎಂದು ಹೇಳಿ ಸ್ವಲ್ಪ ದೂರ ಹಿಂದಕ್ಕೆ ಓಡಿದಳು. ಸೀತಮ್ಮನೆಂಬ ಹುಡುಗಿ "ಇವಳ ರಗಳೆಯೇ ಹೀಗಮ್ಮ. ಹೊತ್ತಾಯಿತು. ಮೋಡಂ ಕಾದಿರ್ತಾರೆ. ರೈಲಿಗೆ ಅವಸರವಾಗಿರುವಾಗ ಹಾಲಿಗೆ ಹೆಪ್ಪುಹಾಕೋದು ಮರೆತುಬಂದೆ ಅಂತ ಹಿಂದಕ್ಕೆ ಓಡುವ ಹೆಂಗಸು ಇವಳು" ಎಂದಳು.

ಭಾಗೀರಥಮ್ಮನು ಸ್ವಲ್ಪ ದೂರ ಓಡಿ ಮತ್ತೆ ಹಿಂದಕ್ಕೇ ಓಡಿಬಂದು ನಗುತ್ತ "ನನ್ನ ಬುದ್ಧಿಯೇ ನನ್ನ ಸ್ವಾಧೀನದಲ್ಲಿಲ್ಲ" ಎಂದಳು. ರಂಗಮ್ಮನು "ಹೌದಮ್ಮ, ನೀನು ಇವೊತ್ತು ಬೆಳಗ್ಗೆ ಏನೋ ಒಂದು ಬಗೆಯಾಗಿದ್ದೀಯೆ. ನಾನೇ ಕೇಳಬೇಕೆಂದಿದ್ದೆ. ಮೈಗೆ ಸ್ವಸ್ಥವಿಲ್ಲವೆ?" ಎಂದಳು. ಭಾಗೀರಥಮ್ಮನು ಬಲವಂತವಾಗಿ ನಗುತ್ತ "ಒಂದು ಬಗೆಯಾಗಿಯೂ ಇಲ್ಲ; ಏನೂ ಇಲ್ಲ. ನನಗೇನು, ಸ್ವಸ್ಥವಾಗಿದ್ದೇನೆ" ಎಂದು ಉತ್ತರ ಹೇಳಿದಳು. ಅಚ್ಚಮ್ಮ "ಅದಿರಲಿ, ಸಾಹೇಬರ ಸವಾರಿ ಓಡಿಹೋದ್ದೇನು. ಹೀಗೇ ಓಡಿ ಬಂದದ್ದೇನು? ನಾಯಿಮರಿ ಕಟ್ಟಿಹಾಕದೆ ಹೋಗಿದ್ದರೆ ಪ್ರಪಂಚ ಮುಳುಗಿ ಹೋದದ್ದೇನು?" ಎಂದು ಕೇಳಿದಳು.

ಭಾಗೀರಥಮ್ಮನು "ಯಾಕೋ ಏನೋ ನಾನು ನಾಯಿಮರಿ ಕಟ್ಟಿಹಾಕಿ ಬಂದದ್ದೇ ಮರೆತುಹೋಗಿತ್ತು. ಸ್ವಲ್ಪ ದೂರ ಓಡಿದಮೇಲೆ ಜ್ಞಾಪಕ ಬಂದು ಹಿಂದಕ್ಕೇ ಬಂದೆ. ಹಾಳು ಮರಿ ಮೊನ್ನೆ ದೇವರ ಮನೆಗೆ ನುಗ್ಗಿಬಿಟ್ಟಿತ್ತಮ್ಮ. ದೇವರ ಪೆಟ್ಟಿಗೆ ಮುಟ್ಟದಂತೆ ಓಡಿಹೋಗಿ ಹಿಡಿದು ತಂದೆ" ಎಂದಳು.

ಹುಡುಗಿಯರೆಲ್ಲರೂ "ಮೇಡಂ" ಮನೆಗೆ ಹೋದರು. ಅವರೆಲ್ಲರಿಗೂ ಒಡನೆಯೇ ಅಲ್ಲಿ ಉಪ್ಪಿಟ್ಟು ಕಾಫಿ ಸತ್ಕಾರವಾಯಿತು. ಮುಖ್ಯೋಪಾಧ್ಯಾಯಿನಿಯಾದ ಅಲಮೇಲಮ್ಮನವರು ("ಮೇಡಂ") ವಿದ್ಯಾರ್ಥಿನಿಯರಿಗೆ ತಾಯಿ, ಅಕ್ಕ, ಜೊತೆಗಾತಿ, ಮೂವರೂ ಒಟ್ಟುಗೂಡಿ ಒಂದೇ ವ್ಯಕ್ತಿಯಲ್ಲಿ ನೆಲೆಯಾಗಿದ್ದಂತಿದ್ದರು. ಪಾಠಪ್ರವಚನಗಳ ವಿಚಾರವಂತು, ಅವರಲ್ಲಿ ಸಿದ್ಧಾನ್ನದ ಚೊಕ್ಕ ಭೋಜನ. ಗುಣವತಿಯಾದ ರಂಗಮ್ಮನು ಪಾಠಶಾಲೆಯಲ್ಲೆಲ್ಲ ಅವರಿಗೆ ಅಚ್ಚುಮೆಚ್ಚಾದ ಮೇಧಾವಿನಿಯಾದ ಪ್ರಿಯ ಶಿಷ್ಯೆ.

ಕಾಫಿಯನ್ನು ಕುಡಿಯುವ ಸಡಗರವು ಮುಗಿದ ಮೇಲೆ ನಾಟಕದ ಸುದ್ದಿಯು ಪ್ರಾರಂಭವಾಯಿತು. ಅಲಮೇಲಮ್ಮನವರು ರಂಗಮ್ಮನ ಹೆಗಲಿನ ಮೇಲೆ ಕೈಯಿಟ್ಟು "ರಂಗೂ, ನಿನಗೆ ಧರ್ಮಾಂಗದನ ಪಾತ್ರ" ಎಂದರು. ಉಳಿದ ಹುಡುಗಿಯರೆಲ್ಲರೂ ಚಪ್ಪಾಳೆ ತಟ್ಟಿ ತಮ್ಮ ಭಾಗಕ್ಕೇನು ಬರುವುದೋ ಎಂದು ಕುತೂಹಲದಿಂದ ಅಲಮೇಲಮ್ಮನವರ ಕಡೆಗೇ ನೋಡುತ್ತಿದ್ದರು. ರಂಗಮ್ಮನು "ನಾನು ಪಾರ್ಟು ಮಾಡೋದಿಲ್ಲ, ಮೇಡಂ" ಎಂದಳು. ಅಲಮೇಲಮ್ಮನವರು ಆಶ್ಚರ್ಯಪಟ್ಟು, ಹೊಗಳಿಕೆಯಿಂದ ಹುಡುಗಿಗೆ ಸ್ವಲ್ಪ ಜಂಭ ಬಂದಿರಬಹುದೆಂದು ಭಾವಿಸಿ, ಉದಾಸೀನವೇ ಅದಕ್ಕೆ ಔಷಧವೆಂದು ಸುಮ್ಮನಾದರು.

ಅಚ್ಚು ಸುಮ್ಮನಿರದೆ "ಮೇಡಂ, ಭಾಗೂಗೆ ಯಾವ ವೇಷ?" ಎಂದು ಕೇಳಿದಳು. ಅಲಮೇಲಮ್ಮನವರು ಹುಡುಗಿಯಲ್ಲಿ ಪ್ರೀತಿಯಿದ್ದರೂ ಪರ್ವವನ್ನು ಬಿಟ್ಟುಕೊಡದೆ "ಅವಳ ಮಾತು ಹಾಗಿರಲಮ್ಮ. ಹೇಳಿದಷ್ಟು ಕೇಳಿ" ಎಂದರು. ಭಾಗೀರಥಮ್ಮನ ಮನಸ್ಸಿಗೆ ತನಗೆ ಪಾತ್ರವಿಲ್ಲವೆಂದು ಖಂಡಿತವಾಯಿತು. ಅವಳ ಕಣ್ಣಿನಲ್ಲಿ ನೀರು ಬರುವಂತಾಯಿತು. ಆದರೂ ಆ ಸಂದರ್ಭದಲ್ಲಿ ಕಣ್ಣೀರು ಸುರಿಸಿದರೆ ಅತ್ತು ಔತಣ ಹೇಳಿಸಿಕೊಂಡಂತಾಗುವುದೆಂದು ಅವಳು ದುಃಖವನ್ನು ತಡೆದುಕೊಂಡಳು.

ಅಲಮೇಲಮ್ಮನವರು "ಸೀತು, ನಿನಗೆ ಮೋಹಿನೀ ವೇಷ. ನಿನ್ನ ಮುಖ ಮೋಹಿನೀ ವೇಷಕ್ಕೆ ಮುದ್ದಾಗಿದೆ" ಎಂದರು. ಸೀತಮ್ಮನು "ಕೊನೆಯ ಸೀನೊಂದರಲ್ಲೇ ನಾನು ಬರಬೇಕು. ಇನ್ನೂ ಒಂದೆರಡು ಸಲ ಬರುವಹಾಗೆ ಮಾಡಿ, ಮೇಡಂ" ಎಂದಳು. ಎಲ್ಲರೂ ಘೊಳ್ ಎಂತ

ನಕ್ಕರು. ಆ ಬಳಿಕ ಅಲಮೇಲಮ್ಮನವರು "ಅಚ್ಚು, ನಿನಗೆ ರುಕ್ಮಾಂಗದನ ಹೆಂಡತಿ ಪಾರ್ಟು" ಎಂದರು. ಅಚ್ಚು "ಮೇಡಂ, ಮೇಡಂ, ನಿಮ್ಮ ದಮ್ಮಯ್ಯ, ಹೇಳಿ ಮೇಡಂ, ಭಾಗುವಿಗೆ ಯಾವ ಪಾರ್ಟು" ಎಂದು ಅಂಗಲಾಚಿ ಬೇಡಿದಳು.

ಅಲಮೇಲಮ್ಮನವರು ಅದಕ್ಕೆ ಉತ್ತರವಾಗಿ "ಭಾಗುವಿಗೆ ದೊಡ್ಡ ಪಾರ್ಟು. ಅವಳು ಎಲ್ಲರಿಗಿಂತ ಉದ್ದವಾಗಿ ಬೆಳೆದು ದಪ್ಪವಾಗಿರುವುದಕ್ಕೆ ತಕ್ಕ ಪಾರ್ಟು. ಯಾವದಿರಬಹುದು ಹೇಳಿ ನೋಡೋಣ" ಎಂದರು. ತನಗೂ "ಪಾರ್ಟು" ಉಂಟೆಂದು ತಿಳಿದು ಭಾಗೀರಥಮ್ಮನ ಮುಖವು ಊರಗಲ ವಾಯಿತು. ಅವಳ ಸಂತೋಷವು ಅವಳ ತುಂಬು ಕೆನ್ನೆಗಳನ್ನೊಡೆದು ಕೊಂಡು ಹೊರಹೊಮ್ಮುವಂತಿದ್ದಿತು. ಸಾತಿಯು "ಜವಾನನ ಪಾರ್ಟಿರ ಬಹುದು ಅಲ್ಲವೇ, ಮೇಡಂ?" ಎಂದು ಕೇಳಿದಳು. ಅಲಮೇಲಮ್ಮನವರು ಸ್ವಲ್ಪ ನಕ್ಕು "ಅದು ನಿನ್ನ ಪಾರ್ಟಮ್ಮ. ಅವಳು ಅದನ್ನು ಮಾಡುವ ಹಾಗಿಲ್ಲ" ಎಂದರು.

ಸಾತಿಯು "ಮತ್ತೇ ಅವಳಿಗೆ ಯಾವ ಪಾರ್ಟು, ಮೇಡಂ? ಸೂತ್ರ ಧಾರನ ಪಾರ್ಟೆ? ನಾವು ಆ ಸೀನ್ ಆಡಬೇಕೆಂದೇ ಇಲ್ಲವಲ್ಲ" ಎಂದಳು. ಅಲಮೇಲಮ್ಮನವರು ನಕ್ಕು "ಇನ್ನೂ ಗೊತ್ತಾಗಲಿಲ್ಲವೆ? ನಿನ್ನ ಬುದ್ಧಿ ಒನಕೆ ತುಂಡಿನಂತೆ ಚಿಗುರುತ್ತಿದೆ. ಅವಳಿಗೆ ರುಕ್ಮಾಂಗದನ ಪಾರ್ಟು" ಎಂದರು. ಸಾತಿಯ ಹೊಟ್ಟೆಯಲ್ಲಿ ಮೆಣಸಿನಕಾಯಿ ಕಿವುಚಿದಂತಾಯಿತು. ಅವಳು "ಭಾಗು ಆ ಪಾರ್ಟು ಚೆನ್ನಾಗಿ ಮಾಡ್ತಾಳೆಯೆ, ಮೇಡಂ? ಕ್ಲಾಸಿನಲ್ಲಿ ನಾನು ಸೆಕೆಂಡ್, ಅವಳು ಎಲ್ಲರಿಗಿಂತ ಕಡೆ. ಎಡಗಡೆಯಿಂದ ಫಸ್ಟ್" ಎಂದಳು.

ಅಲಮೇಲಮ್ಮನವರು ನಕ್ಕು "ನಿನಗೆ ಚಾರನ ಪಾರ್ಟೆಂತ ಅಸಮಾಧಾನವೊ? ಪಾರ್ಟು ಯಾವುದಾದರೇನು? ಆದರೆ ಗುಣಕ್ಕೆ ಮತ್ಸರವಿರ ಬಾರದಮ್ಮ. ಪಾಠದಲ್ಲಿ ಕೊನೆಯಾದರೂ ಭಾಗು ನಾಟಕದಲ್ಲಿ ಚೆನ್ನಾಗಿ ಪಾರ್ಟು ಮಾಡ್ತಾಳೆ" ಎಂದರು. ಸಾತಿಯು ಕೀರಲು ಧ್ವನಿಯ ತಾರಸ್ವರ ದಲ್ಲಿ "ಮಾಡ್ತಾಳೊ ಅವಳು? ಇನಾಮೂ ಬರಬಹುದು. ಅಲ್ಲವೆ, ಮೇಡಂ?" ಎಂದು ನಕ್ಕಳು. ಅಲಮೇಲಮ್ಮನವರು "ಮಾಡದೆ

ಅವಳಿಗೇನು ಚಿನ್ನದ ಬೊಂಬೆ ಹಾಗಿರ್ತಾಳೆ. ಸೊಗಸಾಗಿ ಪಾರ್ಟು ಮಾಡ್ತಾಳೆ. ಇನಾಮೂ ಬರುತ್ತೆ. ನಮ್ಮ ಹುಡುಗಿಯರಲ್ಲೊಬ್ಬರು ದೊಡ್ಡವರಿಗೆ ಪ್ರತಿಷ್ಠೆಬಂದಿದೆ. ಅವರು ಪಾರ್ಟುಮಾಡುವುದಿಲ್ಲವಂತೆ, ಅವರಿಗೆ ಮೊದಲನೆಯ ಇನಾಮು ಬರುತ್ತಿತ್ತು. ಇವಳಿಗೆ ಎರಡನೆಯ ಇನಾಮು ಬರುತ್ತಿತ್ತು. ಈಗೇನು, ಇವಳಿಗೇ ಎರಡು ಇನಾಮೂ ಕೊಟ್ಟರಾಯಿತು'' ಎಂದು ಹೇಳಿ ಗಂಭೀರವಾಗಿ ರಂಗಮ್ಮನ ಕಡೆಗೆ ತಿರುಗಿ ನೋಡಿದರು.

ರಂಗಮ್ಮನು ಸಂತೋಷದಿಂದ ''ಹಾಗೇ ಮಾಡಿ ಮೇಡಂ. ನನಗೆ ಹೇಗೂ ಕ್ಲಾಸಿನಲ್ಲಿ ಫಸ್ಟ್ ಆದ ಇನಾಂ ಬರುತ್ತೆ. ಭಾಗುವಿಗೂ ನಾಟಕದಲ್ಲಿ ಫಸ್ಟ್ ಆದ ಇನಾಂ ಬರಲಿ. ಮೇಡಂ, ಮೇಡಂ, ಭಾಗು ಚಿನ್ನದ ಬೊಂಬೆ ಹಾಗಿರ್ತಾಳೆ ಅಂದಿರಿ, ಮೊನ್ನೆ ನಾನೂ ಹಾಗೇ ಹೇಳಿದ್ದೆ, ಮೇಡಂ. ಇವರನ್ನೆಲ್ಲಾ ಕೇಳಿ ಬೇಕಾದರೆ'' ಎಂದಳು. ಅಲಮೇಲಮ್ಮನವರಿಗೆ ಆಶ್ಚರ್ಯವಾಯಿತು. ರಂಗಮ್ಮ ತನ್ನ ಮಾತನ್ನು ನಡೆಸಲಿಲ್ಲವೆಂತ ಅಲ್ಪಸ್ವಲ್ಪ ಅಸಮಾಧಾನವೂ ಆಯಿತು.

ಭಾಗೀರಥಮ್ಮನು ''ಮೇಡಂ, ರಂಗೂ ದೇವಲೋಕದ ಹುಡುಗಿ, ನನಗೆ ಇನಾಂ ಬರಬೇಕೆಂತ ತಾನು ಪಾರ್ಟು ಮಾಡುವುದಿಲ್ಲವೆಂದು ಹೇಳಿದ್ದಾಳೆ. ಮೊನ್ನೆ ನಮ್ಮ ಮನೆಯಲ್ಲಿ ನಮ್ಮ ನಮ್ಮಲ್ಲಿ ಮಾತು ಬಂತು. ಇವಳು ಪಾರ್ಟು ಮಾಡಿದರೆ ನನಗೆ ಇನಾಮು ಬರುವುದಿಲ್ಲವೆಂತ ನಾತಿ ಚಂಡಿಸಿ ಹೇಳಿದಳು. ನಾನು ಚಿನ್ನದ ಬೊಂಬೆ ಹಾಗಿದ್ದೇನೆಂತಲೂ ಇನಾಮು ಬರುತ್ತೆಂತಲೂ ಇವಳು ಹೇಳಿದಳು. ನಾತಿ ಸುಮ್ಮನಾಗಲಿಲ್ಲ. ಅದೆಲ್ಲಾ ಬೇಳುವೆ ಮಾತು ಎಂತ ನಾತಿ ಹೇಳಿದ್ದಕ್ಕೆ ರಂಗು ತಾನು ಪಾರ್ಟೇ ಮಾಡುವುದಿಲ್ಲವೆಂತ ನಿರ್ಧಾರ ಮಾಡಿದಳು. ಅಷ್ಟೇ ಅಲ್ಲ, 'ನಮ್ಮ ಭಾಗು ಇನಾಂ ಹೊಡೆದರೆ ಸಾಕು. ಅವಳು ಬರಿಯ ಕೈಯಲ್ಲಿ ಬರುವಹಾಗೆ ಮಾಡಲೇಕೂಡದು' ಎಂತ ಕೂಡ ಹೇಳಿದ್ದಳು, ಮೇಡಂ. ಅವಳಿಗೇ ಮೊದಲನೇ ಇನಾಂ ಬರಲಿ, ನನಗೆ ಎರಡನೇ ಇನಾಮೇ ಸಾಕು. ಅವಳ ಮಾತು ಕೇಳದೆ ಅವಳ ಕೈಲಿ ಪಾರ್ಟು ಮಾಡಿಸಲೇ ಬೇಕು, ಮೇಡಂ'' ಎಂದಳು.

ರಂಗಮ್ಮನ ಸದ್ಗುಣವನ್ನು ಕಂಡು ಅಲಮೇಲಮ್ಮನವರಿಗೆ ಅತ್ಯಂತ ಸಂತೋಷವಾಯಿತು. ಅವರು ಅವಳನ್ನು ಆದರದಿಂದ ಮೈದಡವಿ "ನಂಬುವುದೇ ಕಷ್ಟವಾಗಿದೆ. ಬುದ್ಧಿಯ ಜೊತೆಗೆ ನಿನಗೆಷ್ಟು ಗುಣವಮ್ಮ. ನನ್ನಮ್ಮಾ ಸುಖವಾಗಿ ಬಾಳು. ನಾತಮ್ಮ, ಹೀಗಿರಬೇಕು ಸ್ವಾರ್ಥತ್ಯಾಗ, ನೀನೂ ಹಾಗೆ ಕಲಿಯಮ್ಮ" ಎಂದರು. ರಂಗಮ್ಮನು "ಹೀಗೆಲ್ಲ ಹೊಗಳಬೇಡಿ, ಮೇಡಂ; ನಿಮ್ಮ ಮನಸ್ಸು ಎಲ್ಲಕ್ಕಿಂತ ದೊಡ್ಡದು. ಅದಕ್ಕೇ ಇಷ್ಟು ಜನಕ್ಕೂ ನೀವೊಬ್ಬರು ತಾಯಿಯಂತೆ ಇದ್ದೀರಿ. ನಿಮ್ಮೊಬ್ಬರಿಗೆ ಈ ಸ್ಕೂಲಿನವರಿಷ್ಟು ಜನ ಮಕ್ಕಳು" ಎಂದಳು. ತಾನಾಡಿದ ಮಾತುಗಳ ಭಾವವೆಷ್ಟು ದೊಡ್ಡದೆಂಬುದು ಅವಳ ಚಿಕ್ಕ ಹೃದಯಕ್ಕೆ ತಿಳಿಯಲಿಲ್ಲ. ಮಕ್ಕಳೂ ಇಲ್ಲದೆ ಗಂಡನನ್ನೂ ಕಳೆದುಕೊಂಡು ವಿದ್ಯಾರ್ಥಿನಿಯರೇ ತಮ್ಮ ಸರ್ವಸ್ವವೆಂಬ ಭಾವನೆಯಿಂದ ಕೆಲಸಮಾಡು ತ್ತಿದ್ದ ಅಲಮೇಲಮ್ಮನವರು ಅದನ್ನು ಗ್ರಹಿಸಿದರು. ನಾತಿಯು "ಹಾಗೇ ಆಗಲಿ ಮೇಡಂ, ಸರ್ಕಾರಿ ಜವಾನರು ಕೂಡ ಭೇಷ್ ಅನ್ನೋಹಾಗೆ ಜಾರನ ಪಾರ್ಟು ಮಾಡಿಬಿಡ್ತೀನಿ, ಅದೇ ನನ್ನ ಸ್ವಾರ್ಥತ್ಯಾಗ. ಸ್ವಾರ್ಥ ತ್ಯಾಗವೆಂದರೇನು, ಮೇಡಂ?" ಎನ್ನದೆ ಹೋಗಿ—ಅವರಿಗೆ ಫಕ್ಕನೆ ನಗು ಬರದೆ ಹೋಗಿದ್ದರೆ–ಕಣ್ಣಿನಲ್ಲಿ ಕಂಬನಿಯು ಕೋಡಿಗಟ್ಟಿ ಹರಿಯುತ್ತಿದ್ದಿತು. ಅಲ್ಲಿಗೂ ನಗುವಿನ ಮಧ್ಯೆ ಅವರ ಕಣ್ಣುಗಳಿಂದ ಒಂದೆರಡು ನೀರಿನ ಹನಿಗಳುದುರಿದುವು. ಆದರೆ ಹೆಚ್ಚಾಗಿ ನಕ್ಕುದರಿಂದ ಹಾಗಾಯಿತೆಂದು ಹುಡುಗಿಯರು ಭಾವಿಸಿದರು. ಸೀತಮ್ಮನು "ಎಷ್ಟು ಚೆನ್ನಾಗಿ ನಗುತ್ತೀರಿ, ಮೇಡಂ? ನಾನು ಗಟ್ಟಿಯಾಗಿ ನಕ್ಕರೇ ನಮ್ಮ ತಾಯಿಗೆ ಸರಿಬೀಳುವುದಿಲ್ಲ. ಬೇಡವೆನ್ನುತ್ತಾರೆ" ಎಂದಳು.

ಅಷ್ಟರಲ್ಲಿ ಭಾಗೀರಥಮ್ಮನು "ಮೇಡಂ, ಮೇಡಂ, ನನ್ನ ಮಾತೊಂದು ನಡೆಸಿಕೊಡಿ, ಮೇಡಂ. ರುಕ್ಮಾಂಗದನಿಗೊಬ್ಬ ತಂಗಿ ಪಾರ್ಟು ಹಾಕಿಸಿ ನಾನು 'ಬಾರಮ್ಮಾ ಬಾರ ಸೋದರಿ' ಎಂಬ ಹಾಡು ಹೇಳುವಂತೆ ಮಾಡಿ, ಮೇಡಂ" ಎಂದಳು. ಅಲಮೇಲಮ್ಮನವರು ನಕ್ಕು "ಅದೆಲ್ಲಾ ಸಾಧ್ಯ ವಿಲ್ಲಮ್ಮ, ನೀನೂ ಸರಿಯೆ, ಒಳ್ಳೆಯ ಹುಡುಗಿ" ಎಂದರು. ಭಾಗೀರಥಮ್ಮ ನಿಗೆ ತನಗೆ ರುಕ್ಮಾಂಗದನ "ಪಾರ್ಟು" ದೊರೆತುದೇ ದೊಡ್ಡ ಸಂತೋಷ.

ತಲೆಹರಟೆಯಾಡಿದರೆ ಆಸಲಿಗೆಲ್ಲಿ ಮೋಸವೋ ಎಂಬ ಭಯ. ಆದುದರಿಂದ ಅವಳು "ಆಗಲಿ, ಮೇಡಂ, ದೊಡ್ಡವರು ಹೇಳಿದಂತೆ ಕೇಳುವುದೇ ನಮ್ಮ ಧರ್ಮ. ಆದರೆ, ಆದರೆ, ಇನ್ನೊಂದು ಮಾತು" ಎಂದು ಹೇಳಿ ನಕ್ಕಳು. ಅಲಮೇಲಮ್ಮನವರು "ಅದನ್ನು ಪೂರ್ತಿಯಾಗಿ ಹೇಳಿದಮೇಲೆ ನಗಮ್ಮ" ಎಂದರು.

ಭಾಗೀರಥಮ್ಮನು "ಆಗಲಿ, ಮೇಡಂ. ರಂಗು ಮೊನ್ನೆತಾನೆ ಹೇಳಿದ್ದಾಳೆ. ಅವಳ ಮಾಲಗಣ್ಣಿಗೆ ಬಹಳ ಮಹಿಮೆಯಂತೆ. ಮಾಲಗಣ್ಣಿನ ಹೆಣ್ಣು ಕೈಹಿಡಿದರೆ ಮೂಲೆಯಲ್ಲಿದ್ದವರೂ ಮಹಡಿಯನ್ನೇರುತ್ತಾರಂತೆ. ಅವಳೇ ಹೇಳಿದ್ದಾಳೆ. ರಂಗೂಗೆ ಸಂಧ್ಯಾವಳಿ ಪಾರ್ಟ್ ಕೊಟ್ಟು ಅವಳು ನನ್ನ ಹೆಂಡತಿಯಾಗುವಂತೆ ಮಾಡಿ. ನನಗೆ ಮಹಡಿಯನ್ನೇರಲು ಬಹಳ ಆಸೆ" ಎಂದಳು. ರಂಗಮ್ಮನ ಮುಖವು ಪೆಚ್ಚಾಯಿತು. ಉಳಿದವರೆಲ್ಲರೂ ಬಿದ್ದು ಬಿದ್ದು ನಕ್ಕರು.

ರಂಗಮ್ಮನು "ತಮಾಷೆಗೆ ನಾನು ಹಾಗೆ ಹೇಳಿದರೆ ಇವಳು ಹೀಗೆಲ್ಲಾ ಹೇಳ್ತಾಳೆ, ನೋಡಿ ಮೇಡಂ" ಎಂದಳು. ಅವಳ ಕಣ್ಣಿನಿಂದ ನೀರುರುಳುವಂತಿದ್ದಿತು. ಅಲಮೇಲಮ್ಮನವರು ಆದರದಿಂದ ತಮ್ಮ ಪ್ರಿಯ ಶಿಷ್ಯೆಯ ತಲೆಯನ್ನು ಸವರಿ "ನನಗೆ ಹೇಳಿದರೇನಾಯಿತು, ಕಂದ? ನೀನು ಹೇಳಿದ್ದು ನಿಜವೂ ನಿಜ, ಮಾಲಗಣ್ಣಿದ್ದವರೆಲ್ಲರ ಮಾತೂ ಹೇಗೋ ಕಾಣೆ. ನಿನ್ನ ವಿಷಯದಲ್ಲೇನೂ ನೀನು ಹೇಳಿದ್ದು ಖಂಡಿತವಾಗಿಯೂ ನಿಜ. ನೀನು ಕೈಹಿಡಿಯುವವನು ನಿಜವಾಗಿಯೂ ಭಾಗ್ಯಶಾಲಿ. ಇದೇ ರೀತಿ ಹೇಳಿ ಅವಳು ಬಾಯಿ ಮುಚ್ಚುವಂತೆ ಮಾಡು. ಇನ್ನೊಂದು ಮಾತು. ಉತ್ಸವದ ದಿನ ಹತ್ತಿರವಾಗುವ ತನಕ ನಾಟಕವಾಡುವ ವಿಷಯ ಯಾರೊಡನೆಯೂ ತುಟಿಪಿಟಕ್ಕೆನ್ನಬೇಡಿ. ನಿಮ್ಮ ನಿಮ್ಮ ಮನೆಯಲ್ಲೂ ಯಾರಿಗೂ ಹೇಳಬೇಡ. ಒಬ್ಬರಿಗೂ ತಿಳಿಸದೆ ರಹಸ್ಯವಾಗಿಟ್ಟಿದ್ದು ನಿಮ್ಮ ನಿಮ್ಮ ಮನೆಯವರಿಗೂ ಕೂಡ ಆಶ್ಚರ್ಯವಾಗುವ ಹಾಗೆ ಮಾಡೋಣ. ಈಗಲೇ ಊರಿಗೆಲ್ಲಾ ತಿಳಿಸಿ ಡಂಗುರ ಹಾಕಿದರೆ, ಆಮೇಲೆ ಎಲ್ಲರಿಗೂ ಅದರ ವಿಚಾರ ತಂಗಳೂಟವಾಗುತ್ತೆ. ಬಿಸಿ ಬಿಸಿಯಾಗಿದ್ದರೇ ಊಟ ಸೊಗಸು. ಜೋಕೆ, ಯಾರಿಗೂ ತಿಳಿಸಬೇಡಿ. ಭಾಗು, ನೀನು ಬುಡುಬುಡಿಕೆ ಬಾಯಿ

ಯುವಳು" ಎಂದರು. ಭಾಗೀರಥಮ್ಮನು "ನೀವು ಹೇಳಿದಹಾಗೆ ಕೇಳ್ತೀವೆ, ಮೇಡಂ. ನಿಮ್ಮಾಣೆಗೂ, ನಾನು ಕೂಡ ಯಾರಿಗೂ ಹೇಳೋದಿಲ್ಲ" ಎಂದಳು. ಹುಡುಗಿಯರೆಲ್ಲರೂ ತಮ್ಮ ತಮ್ಮ ಮನೆಗಳಿಗೆ ಹೊರಟರು.

೩

ಭಾಗೀರಥಮ್ಮನು ತಮ್ಮ ಮನೆಯ ಬಾಗಿಲಿನ ಬಳಿಗೆ ಬರುವ ವೇಳೆಗೆ ಸರಿಯಾಗಿ ಅವಳ ತಮ್ಮ "ಪಾಚ್ಚು" ಕಿವಿಯ ಸಂದಿಯಲ್ಲಿ ಒಂದು ಸೀಸದ ಕಡ್ಡಿಯನ್ನು ಸಿಕ್ಕಿಕೊಂಡು ಗಭೀರವಾದ ಆಲೋಚನೆಯಲ್ಲಿ ಮಗ್ನನಾಗಿ ಒಳಬಾಗಿಲಿನಲ್ಲಿಯೇ ನಿಂತಿದ್ದನು. ಹುಡುಗನಿಗೆ ಒಂದು ಕಾಲು ಉಳುಕಿ ಅವನು ಕುಂಟುತ್ತಿದ್ದಾಗ ಅವನನ್ನು "ಕುಂಟ ಪಾಚ್ಚ" ಎಂದು ಕರೆದು ಭಾಗೀರಥಮ್ಮನು ಅವನನ್ನು ರೇಗಿಸುತ್ತಿದ್ದ ಹೆಸರೇ ಮುದ್ದಿಗಾಗಿ "ಪಾಚ್ಚು" ಎಂಬ ರೂಪಾಂತರವನ್ನು ಹೊಂದಿ ಅವನ ನಿಜವಾದ ಹೆಸರಿಗಿಂತಲೂ ಅವನಿಗೇ ಅಚ್ಚುಮೆಚ್ಚಾಗಿದ್ದಿತು. ಪಾಚ್ಚು ಏನನ್ನೋ ಜ್ಞಾಪಿಸಿಕೊಳ್ಳುತ್ತಲೂ, ತುಟಿಗಳನ್ನು ಅಲುಗಿಸುತ್ತಲೂ, ಯೋಚಿಸುತ್ತಲೂ ನಿಂತಿದ್ದುದನ್ನು ಕಂಡು ಭಾಗೀರಥಮ್ಮನು "ತನಗೆ ಸಿಕ್ಕಲಾರದ ಸೀಬೆ ಹಣ್ಣು ಕಂಡ ಹಣ್ಣು ಕೋತೀ ತಿಮ್ಮಣ್ಣನ ಹಾಗೆ ಕಣ್ಣು ಕಣ್ಣು ಬಿಡ್ತಾ ನಿಂತಿದ್ದೀಯೆ? ಏನೋ ಪಾಚ್ಚು ನಿನಗೆ ಬಂದಿರುವ ಕಷ್ಟ?" ಎಂದು ಹೇಳಿ ನಕ್ಕಳು.

ಪಾಚ್ಚು "ಅಕ್ಕ, ಅಕ್ಕ, ಒಳ್ಳೆಯ ಸಮಯಕ್ಕೇ ಬಂದೆ. ಅಮರಾ ನಿರ್ಜರಾ ದೇವಾ ಆದಮೇಲೆ ಮುಂದಕ್ಕೇನು ಹೇಳು. ನನ್ನ ಅಮರ ಎಲ್ಲೋ ಹೋಗಿಬಿಟ್ಟಿದೆ. ಇದು ಎಷ್ಟು ಜ್ಞಾಪಿಸಿಕೊಂಡರೂ ಜ್ಞಾಪಕಕ್ಕೇ ಬರೋಹಾಗಿಲ್ಲ, ಶಾಸ್ತ್ರಿಗಳು ಬಂದುಬಿಡ್ತಾರೆ" ಎಂದನು. ಭಾಗೀರಥಮ್ಮನು "ಈಗಿನ ಪದ್ಧತಿಗಳೊಂದೂ ಅಣ್ಣಂಗೆ ಸರಿಬೀಳೋದಿಲ್ಲ. ಶಾಸ್ತ್ರಿಗಳ ಕೈಲಿ ಅಮರ ಹೇಳಿಸಿ ನಿನ್ನ ಪ್ರಾಣ ಹಿಂಡೋದೇಕೋ ಕಾಣೆ. ನೀನು ಕೇಳಿದ್ದು ನಂಗೆ ಬರೋದಿಲ್ಲ ಪಾಚ್ಚು" ಎಂದು ಉತ್ತರ ಹೇಳಿದಳು. ಪಾಚ್ಚುವಿಗೆ ಸ್ವಲ್ಪ ಕಿರಿಕಿರಿಯಾಯಿತು. ಅವನು "ಅಕ್ಕ, ಕೇಳಿದ್ದೊಂದು ಹೇಳೋಕೂ ನಿನಗೆ ಬರೋದಿಲ್ಲ, ನೀನೊಂದು ಶುದ್ಧ ಮಣ್ಣು ಬೊಂಬೆ" ಎಂದನು. ಭಾಗೀರಥಮ್ಮನು ಸಂತೋಷಭರದಲ್ಲಿ "ಮಣ್ಣಿನ ಬೊಂಬೆ

ಯಲ್ಲವ್ರೋ ; ಚಿನ್ನದ ಬೊಂಬೆ. ನಾನು ಚಿನ್ನದ ಬೊಂಬೆ ಹಾಗಿರ್ತೇನೆ, ನಮ್ಮ ಮೇಡಂ. . . .'' ಎಂದು ಹೇಳಿ ಅಷ್ಟರಲ್ಲಿಯೇ ನಾಲಿಗೆಯನ್ನು ಕಚ್ಚಿಕೊಂಡು ಮಾತನ್ನು ನಿಲ್ಲಿಸಿದಳು. ತನ್ನಿಂದಲೇ ಗುಟ್ಟು ರಟ್ಟಾದೀತೆಂಬ ಭಯದಿಂದ ಅವಳು ಒಳಕ್ಕೆ ಹೋದಳು.

ಪಾಚ್ಚುವೂ ಅವಳನ್ನು ಹಿಂಬಾಲಿಸುತ್ತ '' ಹಾಗೇ ಮಾಡು, ಚಿನ್ನದ ಬೊಂಬೆಯೇ ಆಗು. ದೇವರ ಮನೆಯಲ್ಲಿ ಈಗಿರುವ ಅರಿಸಿನ ಬಣ್ಣದ ಮಣ್ಣಿನ ಗೌರೀಗೆ ಬದಲಾಗಿ ನಿನ್ನೇ ಕೂರಿಸಿದರಾಯಿತು'' ಎಂದನು. ಅಷ್ಟರಲ್ಲಿ ಸುಬ್ಬಮ್ಮನವರು ತನ್ನ ಬಳಿಗೆ ಬಂದುದನ್ನು ಕಂಡು ಪಾಚ್ಚು, ''ಅಮ್ಮ, ಅಮ್ಮ, ಇಲ್ಲಿ ಕೇಳಮ್ಮ, ಅಕ್ಕ ಚಿನ್ನದ ಬೊಂಬೆಯಾಗ್ತಾಳಂತೆ, ಮಣ್ಣಿನ ಗೌರಮ್ಮನ ಹತ್ತಿರ ಆ ಚಿನ್ನದ ಬೊಂಬೆಯನ್ನೂ ಕೂರಿಸ ಬೇಕಮ್ಮ, ಬಹಳ ಚೆನ್ನಾಗಿರುತ್ತೆ'' ಎಂದು ಹೇಳಿ ಚಪ್ಪಾಳೆ ಹೊಡೆದು ನಕ್ಕನು. ಸುಬ್ಬಮ್ಮನವರು ''ತಾನೇ ರೂಪವತಿಯೆಂದು ಎಷ್ಟು ಬಿಗು ಮಾನವ್ರೋ ನಮ್ಮ ಭಾಗೂಗೆ, ಪ್ರತಿಷ್ಠೆ ಹುಡುಗಿ'' ಎಂದರು.

ಅಷ್ಟರಲ್ಲಿ ಭಾಗೀರಥಮ್ಮನು ಒಂದು ಕೊಟಡಿಗೆ ಓಡಿ ಹೋಗಿದ್ದಳು. ಅಲ್ಲಿ ಗೋಡೆಯಮೇಲೆ ನೇತುಹಾಕಿದ್ದ ಕನ್ನಡಿಯಲ್ಲಿ ತನ್ನ ಪ್ರತಿಬಿಂಬವನ್ನು ನೋಡಿಕೊಂಡು, ಹುಬ್ಬುಗಳ ಮಧ್ಯದಲ್ಲಿ ಚಿವುಟಿಗೊಳ್ಳುತ್ತ ಅವಳು ''ಇಗೋ, ಇಗೋ, ಈ ನೋವು ಜ್ಞಾಪಕವಿರಲಿ, ಯಾರಿಗಾದರೂ ನಾಟಕದ ವಿಷಯ ಹೇಳಿಬಿಟ್ಟು ರಗಳೆ ಮಾಡೀಯೆ. ಮೇಡಂ ಮೇಲೆ ಆಣೆ ಯಿಟ್ಟಿರೋದು ದಂಡಮಾಡೀಯೆ. ಜೋಕೆ, ಜೋಕೆ, ಹಾಗೆ ಮಾಡಿದರೆ ನಾನು ಬೇರೆ ಸುಮ್ಮನಿರೋದಿಲ್ಲ, ಜೋಕೆ, ಜೋಕೆ'' ಎಂದಳು.

ಗುಟ್ಟನ್ನು ಕಾಪಾಡುವುದು ಭಾಗೀರಥಮ್ಮನಿಗೆ ನಿಜವಾಗಿಯೂ ಕಷ್ಟವಾಯಿತು. ಅಲಮೇಲಮ್ಮನವರು ಆಗಾಗ ಎಚ್ಚರಿಕೆ ಹೇಳುತ್ತಲೇ ಇದ್ದುದರ ಫಲಿತಾಂಶವಾಗಿ ಅವಳು ಮನಸ್ಸನ್ನು ಬಿಗಿಹಿಡಿದು ಗುಟ್ಟನ್ನು ಕಾಪಾಡಿಕೊಂಡು ಬರುತ್ತಿದ್ದಳು. ಆದರೂ ಚಪಲ. ತಮ್ಮ ಅಕ್ಕನ ಮಕ್ಕಳನ್ನು ಮುದ್ದಿಸುವಾಗಲೆಲ್ಲ ''ನೀವೂ ಮುಂದೆ ಚಿನ್ನದ ಬೊಂಬೆ ಗಳಾಗಬೇಕು, ಚಿನ್ನದ ಬೊಂಬೆಗಳಾಗದೆ ಹೋದರೆ ನಾನು ಬಿಡೋದಿಲ್ಲ'' ಎಂದು ಹೇಳಿ ಹೇಳಿ ತನ್ನ ಚಾಪಲ್ಯವನ್ನು ತೀರಿಸಿಕೊಳ್ಳುತ್ತಿದ್ದಳು.

ಸುಬ್ಬಮ್ಮನವರು ಈ ಮಾತುಗಳನ್ನು ಕೇಳಿ ಕೇಳಿ ಸಾಕಾಗಿ ಒಂದು ದಿನ "ಭಾಗು, ಮಕ್ಕಳು ತೊಳೆದ ಮುತ್ತಿನ ಹಾಗಿವೆ, ಚಿನ್ನದ ಬೊಂಬೆಯಾಗ ಬೇಕು, ಚಿನ್ನದ ಬೊಂಬೆಯಾಗಬೇಕು, ಅಂತ ಒರಲು ಸಂತೆ ಹಾಕ್ತಾ ಇರ್ತೀಯೆ ; ಅವೇನು ಮುದ್ದಾಗಿಲ್ಲವೆ? ನೀನೇ ರೂಪವತಿ ಅಂತ ಬಹಳ ಜಂಭ ನಿನಗೆ" ಎಂದರು. ಭಾಗೀರಥಮ್ಮನ ಕಷ್ಟ ಅವರಿಗೆ ಹೇಗೆ ತಿಳಿಯಬೇಕು?

ಪಾಠಶಾಲೆಯಲ್ಲಿ ನಾಟಕದ ಅಭ್ಯಾಸವು ಪ್ರಾರಂಭವಾದಾಗಿನಿಂದ ಭಾಗೀರಥಮ್ಮನಿಗೆ ತಾನು ಓದಿನಲ್ಲಿಲ್ಲದಿದ್ದರೂ ನಾಟಕದಲ್ಲಿಯೂ ಮನೆಯ ಕೆಲಸಗಳಲ್ಲಿಯೂ "ಸೈ" ಎನ್ನಿಸಿಕೊಂಡು ಅಲಮೇಲಮ್ಮನವರನ್ನೂ ತನ್ನ ತಾಯಿತಂದೆಗಳನ್ನೂ ಮೆಚ್ಚಿಸಬೇಕೆಂಬ ಹುರುಡು ಹುಟ್ಟಿತು. ಒಂದು ದಿನ ಅಲಮೇಲಮ್ಮನವರು "ಭಾಗು, ನಿನ್ನ ರುಕ್ಮಾಂಗದನ ಪಾರ್ಟೂ, ರಂಗೂ ಧರ್ಮಾಂಗದನ ಪಾರ್ಟೂ ನೋಡಿ ಗಂಡು ಹುಡುಗರು ಕೂಡ, ಗಂಡು ಪಾರ್ಟೀ ತಾವು ಹಾಗೆ ಮಾಡೋಕಾಗುವುದಿಲ್ಲವೆಂತ ನಾಚಿಕೊಳ್ಳು ವಷ್ಟು ಭರ್ಜರಿಯಾಗುತ್ತಮ್ಮ. ಅವಳ ಅಭಿನಯ ಫಸ್ಟ್. ನಿನ್ನದು ಸೆಕೆಂಡ್. ಚಿನ್ನದ ಬೊಂಬೆ, ಚಿನ್ನದ ಬೊಂಬೆ ಹಾಗಿರುತ್ತೀಯಮ್ಮ. ನಿಮ್ಮಿಂದ ನನಗೂ ಹೆಸರು ಒರುತ್ತೆ" ಎಂದರು. ಆಗ ಭಾಗೀರಥಮ್ಮನು ಸಂತೋಷದಿಂದ ಉಬ್ಬಿ, ವಿಶಾಲವಾಗಿ ಬಾಯ್ದೆರೆದು ಹಿಗ್ಗಿದ ವೈಖರಿಯಲ್ಲಿ ದಂತವೈದ್ಯನು ಅತಿ ಸುಲಭವಾಗಿ ಅವಳಿಗಿರುವ ಹಲ್ಲುಗಳನ್ನೆಲ್ಲ ಎಣಿಕೆ ಮಾಡಬಹುದಾಗಿದ್ದಿತು.

ಇನ್ನುಳಿದಿದ್ದುದು ಮನೆಯ ಕೆಲಸಗಳಲ್ಲಿ ತಾಯಿತಂದೆಗಳ ಮೆಚ್ಚಿಕೆ. ಅವಳ ಮನಸ್ಸು "ಚಿನ್ನದ ಬೊಂಬೆ, ಚಿನ್ನದ ಬೊಂಬೆ" ಎಂದು ಜಪಿಸಿ ಅದಕ್ಕೆ ಸರಿಯಾಗಿ ಅವಳ ಹೃದಯವು ತಾಳ ಹಾಕುತ್ತಿದ್ದ ಉತ್ಸಾಹದಲ್ಲಿ ಅವಳು ಹುಡುಕಿ ಹುಡುಕಿ ಕೆಲಸಗಳನ್ನು ಮಾಡುತ್ತಿದ್ದಳು. ಅಕ್ಕನ ಮಗಳಿಗೆ ಅಭ್ಯಂಜನ ಮಾಡಿಸುವವಳೂ ಅವಳೆ. ಊಟಕ್ಕೆ ಎಲೆ ಹಾಕಿ, ಮಣೆಗಳನ್ನು ಸಿದ್ಧಪಡಿಸುವವಳೂ ಅವಳೆ. ಹಾಲು ಕರೆಯುವವಳೂ ಅವಳೆ. ಬಾಣಂತಿಯಾಗಿದ್ದ ತಮ್ಮ ಅಕ್ಕನ ಸೇವೆ ಮಾಡುವವಳೂ ಅವಳೆ. ಅಗಸರವನು ಮಡಿಯ ಬಟ್ಟೆಗಳನ್ನು ತಂದುಕೊಟ್ಟರೆ ತಂದೆಯ ಅಂಗಿಗಳಲ್ಲಿ ಅವನು ಒಡೆದುಹಾಕಿದ್ದ ಗುಂಡಿಗಳಿಗೆ ಬದಲಾಗಿ ಹೊಸ ಗುಂಡಿಗಳನ್ನು

ಹಾಕುವುದು ಮೊದಲುಗೊಂಡು ಬಗೆ ಬಗೆಯ ಕೆಲಸಗಳನ್ನೂ ಮಾಡು ವವಳೂ ಅವಳೆ. ಎಲ್ಲ ಕೆಲಸಗಳಲ್ಲಿಯೂ ಪ್ರೀತಿ; ಎಷ್ಟು ಕೆಲಸಮಾಡಿದರೂ ತೃಪ್ತಿಯಿಲ್ಲ; ಹೊಸ ಕೆಲಸವು ದೊರೆತರೆ ಅತ್ಯಂತ ಹುಮ್ಮಸ್ಸು; ಹೀಗಿದ್ದಿತು ಭಾಗೀರಥಮ್ಮನ ಕೆಲಸದ ವಿಚಕ್ಷಣೆ.

ಒಂದು ದಿನ "ಕೊನೇ ಮನೆ" ಕಾವೇರಮ್ಮನವರು ಸುಬ್ಬಮ್ಮ ನವರೊಡನೆ "ಮಗಳ ಬಾಣಂತನ ಮಾಡಿ ಗೆದ್ದಿರಿ. ಎರಡನೆ ಮಗಳ ಮದುವೆಯೂ ಮಾಡಿಬಿಟ್ಟರೆ, ಅಲ್ಲಿಗೆ ಗಡ್ಡೆಗೆ ಬಿದ್ದ ಹಾಗೆ" ಎಂದರು. ಸುಬ್ಬಮ್ಮನವರು "ನಾನೇನಮ್ಮ ಬಾಣಂತನಕ್ಕೆ ಕಷ್ಟಪಟ್ಟದ್ದು! ಎಲ್ಲಾ ನಮ್ಮ ಭಾಗೂ ಕೆಲಸ. ಬಾಣಂತಿ ಸೇವೆ, ನನ್ನ ಸೇವೆ ಎರಡೂ ಮಾಡಿದ್ದಾಳೆ. ಅವಳಂಥವಳು ಮನೆಯಲ್ಲಿದ್ದರೆ ಹತ್ತು ಬಾಣಂತನವಾದರೂ ಮಾಡಿ ಅನಾಯಾಸವಾಗಿ ಹೆಸರು ಪಡೆಯಬಹುದು, ನೋಡಿ" ಎಂದರು. ಕಾವೇರಮ್ಮನವರು "ಎಷ್ಟು ಜಾಣೆಯಮ್ಮಾ ನಿಮ್ಮ ಹುಡುಗಿ. ನಮ್ಮ ಗೌರಿ ಬೆಳಗ್ಗೆ ಎಂಟು ಗಂಟೆಯಾದರೂ ರಗ್ಗಿನ ಮುಸುಕು ಬೀರಿಕೊಂಡೇ ಮಲಗಿರ್ತಾಳೆ ನೋಡಿ" ಎಂದರು. ಸುಬ್ಬಮ್ಮನವರು ಹೆಮ್ಮೆಯಿಂದ ಹಿಗ್ಗುತ್ತ, "ನಾನು ಬಹಳ ಮುಂಚೆಯೇ ಏಳ್ತೀನಿ. ಆದರೆ ನಮ್ಮ ಭಾಗು ನನಗಿಂತ ಮುಂಚೆಯೇ ಎದ್ದು ಕೆಲಸ ಮಾಡ್ತಾ ಇರ್ತಾಳೆ. ಬಹಳ ಜಾಣೆ ಯಾಗಿದ್ದಾಳಮ್ಮ. ತನ್ನ ಮದುವೇಲಿ ತಾನೇ ಅಡಿಗೆ ಮಾಡಿಟ್ಟು ಹಸೆ ಮೇಲಕ್ಕೆ ಬರ್ತಾಳೋ ಏನೊ! ಅಂತು, ಕೆಲಸದಲ್ಲಿ ರಥ, ರಥ, ನೋಡಿ" ಎಂದು ಉತ್ತರ ಹೇಳಿದರು.

ಕಾವೇರಮ್ಮನವರ ಹೊಟ್ಟೆಯಲ್ಲಿ ಏಕೋ ಕೊಂಚ ಉರಿಯೆದ್ದಿತು. ಅಷ್ಟರಲ್ಲಿ, ತಮ್ಮ ತಾಯಿ ಸುಬ್ಬಮ್ಮನವರೂ, ಕಾವೇರಮ್ಮನವರೂ ಆಡಿದ ಮಾತುಗಳನ್ನು ಮರೆಯಲ್ಲಿ ನಿಂತು ಕೇಳುತ್ತಿದ್ದ ಭಾಗೀರಥಮ್ಮನು ತಾನು ಮುಡಿದುಕೊಳ್ಳುವುದಕ್ಕಾಗಿ ಮೇಲಕ್ಕೆತ್ತಿದ್ದ ದೊಡ್ಡದೊಂದು ಗುಲಾಬಿ ಹೂವನ್ನು ಹಿಡಿದುಕೊಂಡು ಓಡಿಬಂದು "ಇದನ್ನು ಮುಡಿದುಕೊಳ್ಳಿ ಕಾವೇರಮ್ಮನವರೇ. ಇದು ಪನ್ನೀರು ರೋಜಾ ಜಾತಿಯ ಗುಲಾಬಿ ಹೂವು. ಮೂಗೇ ದಣಿದು ಹೋಗುವಷ್ಟು ಸುವಾಸನೆಯುಳ್ಳ ಸೊಗಸಾದ ಹೂವು" ಎಂದು ಹೇಳಿ ಹೂವನ್ನು ಕೊಟ್ಟಳು. ಹುಡುಗಿಯ ನಡು ಣ

ವನ್ನು ಕಂಡು ಕಾವೇರಮ್ಮನವರ ಹೊಟ್ಟೆಯಲ್ಲಿದ್ದ ಕಿಚ್ಚು ಕೂಡ ಕೊಂಚ ಕಡಮೆಯಾಯಿತು. ಆದರೂ ಅದು ಪೂರ್ತಿಯಾಗಿ ಶಾಂತವಾಗಲಿಲ್ಲ. ಅವರು ಬಲವಂತವಾಗಿ ನಗುತ್ತ "ಎಷ್ಟು ಒಳ್ಳೇ ಗುಣವಮ್ಮಾ. ರತ್ನದಂಥ ಹುಡುಗಿ. ಚೆನ್ನಾಗಿ ಪುಟಕ್ಕಿಟ್ಟ ಅಪ್ಪಟ ಚಿನ್ನದ ಬೊಂಬೆ" ಎಂದರು. ಅವರೂ ಚಿನ್ನದ ಬೊಂಬೆಯೆನ್ನಬೇಕೆ! ಮೊದಲೇ ಚನ್ನಪಟ್ಟಣದ ಬಣ್ಣದ ಬುಗುರಿಯಂತೆ ತಿರುಗುತ್ತಿದ್ದ ಭಾಗೀರಥಮ್ಮನ ಮನಸ್ಸು ಈಗ ಜೀರು ಬುಗುರಿಯೇ ಆಯಿತು.

೪

ಪಾಠಶಾಲೆಯ ವಾರ್ಷಿಕೋತ್ಸವದ ದಿವಸವು ಸಮೀಪಿಸಿದ ಹಾಗೆಲ್ಲ, ಆ ದಿನ ನಡೆಯಬೇಕೆಂದು ಗೊತ್ತಾಗಿದ್ದ ನಾಟಕದ ದೃಶ್ಯಗಳಲ್ಲಿ ಪಾತ್ರಗಳನ್ನು ವಹಿಸುವವರಾಗಿದ್ದ ಭಾಗೀರಥಮ್ಮನೇ ಮುಂತಾದ ಹುಡುಗಿಯರ ಉತ್ಸಾಹವೂ ಸಂತೋಷವೂ ಹೆಚ್ಚಿದುವು. ಆಗ (ಎಂದರೆ ೧೯೧೯ನೆಯ ಇಸವಿಯಲ್ಲಿ) ಬೆಂಗಳೂರು ಮೈಸೂರು ನಗರಗಳನ್ನು ಬಿಟ್ಟು ಇತರ ಊರು ಗಳಲ್ಲಿ ಪಾಠಶಾಲೆಗಳ ವಾರ್ಷಿಕೋತ್ಸವಗಳು ಈಗಿನಂತೆ ವಿಜೃಂಭಣೆಯಿಂದ ನಡೆಯುತ್ತಿರಲಿಲ್ಲ. ಆದಾಗ್ಗೂ ಅಲಮೇಲಮ್ಮನವರು ಸಾಧ್ಯವಾದಷ್ಟು ವಿಜೃಂಭಣೆಯಿಂದ ಪಾಠಶಾಲೆಯ ವಾರ್ಷಿಕೋತ್ಸವವನ್ನು ನಡೆಯಿಸ ಬೇಕೆಂದು ಆಗಿನ ಆ ದಿನಗಳಲ್ಲಿ ಕೂಡ ಉತ್ಸಾಹಪರರಾಗಿದ್ದುದು ಶ್ಲಾಘನೆಗೆ ಅರ್ಹವಾದ ಅಂಶ. ಆಗ ಅದೇ ಊರಿನಲ್ಲಿ ನಾಟಕದ ಸಂಘದವರೂ ಇದ್ದುದ ರಿಂದ, ಅಲಮೇಲಮ್ಮನವರಿಗೆ ಅವರ ಸಹಾಯದಿಂದ ನಾಟಕ ಮಂದಿರವು ಎಲ್ಲ ಸೌಕರ್ಯಗಳೊಡನೆ ದೊರೆಯುವುದಾಗಿದ್ದಿತು. ರುಕ್ಮಾಂಗದ ಪಾತ್ರ ವನ್ನು ಧರಿಸಲು ಭಾಗೀರಥಮ್ಮನಿಗೆ ಬೇಕಾದ ಉಡುಪುಗಳಲ್ಲಿ ಮೊಕಮಲ್ ಅಂಗಿ, ರೇಷ್ಮೆಯ ಪೇಟ ಮುಂತಾದವುಗಳೆಲ್ಲ ದೊರೆಯುವಂತಿದ್ದುವಾದರೂ, ಅವಳು ಧರಿಸಲು ಸರಿಹೋಗುವ ತುರಾಯಿ ಮಾತ್ರ ದೊರೆಯಲಿಲ್ಲ. ರುಕ್ಮಾಂಗದನ ಪಾತ್ರಕ್ಕೆ ತುರಾಯಿ ಬೇಕೆ?—ಎಂದು ಯಾರಾದರೂ ಪ್ರಶ್ನೆ ಮಾಡಿದರೆ ನಾವು ಹೇಳುವುದಿಷ್ಟೆ: ಬೆಂಗಳೂರಿನಂತಹ—ನಾಗರಿಕತೆಯಿಂದ ತುಂಬಿರುವುದಾಗಿ ನಾವುಗಳು ಭಾವಿಸಿರುವ—ದೊಡ್ಡ ಪಟ್ಟಣದಲ್ಲಿ ತುಳಸಿ ತೋಟದ ಶ್ರೀರಾಮದೇವರ ಉತ್ಸವದಲ್ಲಿ ಶ್ರೀರಾಮಚಂದ್ರ ವಿಗ್ರಹಕ್ಕೆ

ಹಸಿರು ಮೊಕಮಲಿನ ಷರಾಯಿ ಹಾಕುವಾಗ, ಷರಾಯಿ ಹಾಕದೆ ರುಕ್ಮಾಂಗದ ನಾಟಕವಾಗಲಿ, ಇತರ ಯಾವ ನಾಟಕವಾಗಲಿ, ನಡೆಯುವ ಬಗೆ ಹೇಗೋ ನಮಗೆ ತಿಳಿಯದು.

ಅಲಮೇಲಮ್ಮನವರು ಭಾಗೀರಥಮ್ಮನನ್ನು ಕುರಿತು "ನಾಟಕದ ದಿನ ಇನ್ನೂ ಒಂದು ವಾರದಷ್ಟು ದೂರವಿದೆ. ನಿಮ್ಮ ತಂದೆ ಹೇಗೂ ಹಣ ಗಾರರಾದ ಲಾಯರು. ಒಂದು ಭರ್ಜರಿ ಪಾಪ್ಲಿನ್ ಷರಾಯಿ ಹೊಲಿಸಿ ಬಿಡಮ್ಮ. ನಿನ್ನ ಸೊಗಸು ನೋಡಿ ನಮ್ಮ ಕಣ್ಣುಗಳೆಲ್ಲ ಸಾರ್ಥಕವಾಗಲಿ" ಎಂದು ಹೇಳಿದರು. ಎಗರುವ ಕರುವಿಗೆ ಎಳೆಗರಿಕೆಯು ದೊರೆತ ಹಾಗಾ ಯಿತು. ಆ ದಿನ ಭಾನುವಾರವೂ ಆಗಿದ್ದಿತು. ಆದಕಾರಣ, ತಮ್ಮ ತಂದೆಯು ಮನೆಯಲ್ಲಿ ವಿರಾಮವಾಗಿ ಕಾಲವನ್ನು ಕಳೆಯುವವರಾಗಿದ್ದ ಅಂಶವು ಭಾಗೀರಥಮ್ಮನ ಉಲ್ಲಾಸವನ್ನು ಹೆಚ್ಚಿಸಿತು.

ಅಂದು ಮಧ್ಯಾಹ್ನದ ಮೇಲೆ ಭಾಗೀರಥಮ್ಮನು ಕೈಯಲ್ಲಿ ಒಂದು ದಂತದ ಬಾಚಣಿಗೆಯನ್ನೂ ಕಾಮಿನಿಯಾ ಎಣ್ಣೆಯ ಸೀಸೆಯನ್ನೂ ಹಿಡಿದು ಕೊಂಡು ತಮ್ಮ ತಂದೆಯ ಸಮೀಪಕ್ಕೆ ಹೋದಳು. ನರಸಿಂಹಯ್ಯನವರು ಮಗಳನ್ನು ಕುರಿತು ಆದರದಿಂದ "ಏನು, ಸವಾರಿ ಇಲ್ಲಿಗೆ ಚಿತ್ತೈಸಿದ್ದು?" ಎಂದು ಕೇಳಿದರು. ಭಾಗೀರಥಮ್ಮನು ನಗುತ್ತ "ಹೋಗಣ್ಣ. ಸವಾರಿ ಗಿವಾರಿ ಅನ್ನಬೇಡ. ನಿನ್ನ ತಲೆ ಬಾಚೋಣವೆಂತ ಬಂದೆ. ಕಾಮಿನಿಯಾ ತೈಲ ಹಚ್ಚಿ ದಂತದ ಬಾಚಣಿಗೆಯಲ್ಲಿ ಬಾಚಿದರೆ ಬಹಳ ಸೊಗಸಾಗಿರುತ್ತಣ್ಣ" ಎಂದಳು. ನರಸಿಂಹಯ್ಯನವರು "ನನಗೇಕಮ್ಮ ಇದೆಲ್ಲಾ? ಇಷ್ಟಕ್ಕೂ ಹೊಸ ಹೊಸ ಕೆಲಸ ಹುಡುಕುವುದೇ ತಾನೆ ನಿನ್ನ ಯೋಚನೆ? ಹೋಗಲಿ ಬಾಚಮ್ಮ. ಎಣ್ಣೆ ಮಾತ್ರ ಹೆಚ್ಚಾಗಿ ಸವರಬೇಡ" ಎಂದರು.

ಭಾಗೀರಥಮ್ಮನು ತಂದೆಯ ತಲೆಯನ್ನು ಬಾಚುತ್ತ "ಏನಣ್ಣ, ತೆಂಗಿನ ಜುಂಗಿನ ಹಾಗಿದೆ ನಿನ್ನ ತಲೆ ಕೂದಲು? ಅಮ್ಮನ ಕೂದಲು ನರಿಯುಪ್ಪ. ಒಳ್ಳೆ ರೇಷ್ಮೆ ಹಾಗಿದೆ. ಇನ್ನು ಮೇಲೆ ಕಾಮಿನಿಯಾ ಎಣ್ಣೆ ಹಚ್ಚಿ ಬಾಚಿ ನೋಡೋಣ. ನಿನ್ನ ತಲೆಕೂದಲು ಮೃದುವಾಗದೆ ಹೋಗಲಿ. ವೃತ್ತಾಂತ ಪತ್ರಿಕೆಗೆ ಬರೀತೀನಿ, ಕಾಮಿನಿಯಾ ಎಣ್ಣೆಯವರ ಮಾತೆಲ್ಲಾ ಸುಳ್ಳು.

ನಮ್ಮ ತಂದೆ ತಲೆಕೂದಲು ಚಕಚಕಿಸಲಿಲ್ಲ. ರೇಷ್ಮೆ ಹಾಗೆ ಬೆಳೆಯಲಿಲ್ಲ—ಅಂತ. ನೀನೂ ಕ್ರಾಪ್ ಬಿಡಿಸಿದ್ದರೆ ಚೆನ್ನಾಗಿತ್ತಣ್ಣ'' ಎಂದಳು. ನರಸಿಂಹಯ್ಯನವರು ''ಈ ಬಗೆ ಉಪಚಾರ ನೋಡಿದರೆ ಸ್ವಲ್ಪ ಅನುಮಾನ. ಅಮ್ಮಾವರಿಗೆ ನನ್ನಿಂದ ಏನೋ ಕೆಲಸವಿರಬೇಕು'' ಎಂದರು. ಭಾಗೀರಥಮ್ಮನು ಅದೇ ತಕ್ಕ ಸಮಯವೆಂದು ಭಾವಿಸಿ ''ಕೆಲಸವಿದೆಯಣ್ಣ. ನಿನ್ನ ಕೇಳದೆ ಎದುರು ಮನೆ ಡಾಕ್ಟರನ್ನೋ ಆಚೆ ಬೀದಿ ಶಾಸ್ತ್ರಿಗಳನ್ನೋ ಕೇಳಲೇನು? ಅಣ್ಣ, ಅಣ್ಣ, ನನಗೊಂದು ಪಾಪ್ಲಿನ್ ಷರಾಯಿ ಹೊಲಿಸಿ ಕೊಡಣ್ಣ'' ಎಂದಳು. ನರಸಿಂಹಯ್ಯನವರು ನಕ್ಕು ''ಇದೂ ಒಳ್ಳೇ ಆಸೆ. ಹೆಣ್ಣು ಹುಡುಗಿಗೆ ಷರಾಯಿ ಏಕಮ್ಮ? ಅದೆಲ್ಲಾ ಬಾರದು. ಸುಮ್ಮನಿರು'' ಎಂದರು.

ಅಷ್ಟು ಹೊತ್ತಿಗೆ ಸರಿಯಾಗಿ ಬೀದಿಯಲ್ಲೊಬ್ಬ ಹುಡುಗನು ಗಟ್ಟಿಯಾಗಿ ''ಬಾರಮ್ಮ ಬಾರೆ ನೋದರೀ'' ಎಂದು ಹಾಡಿಕೊಂಡು ಹೋಗುತ್ತಿದ್ದ ಧ್ವನಿಯು ಕೇಳಿಸಿತು. ತಂದೆಯೂ ಮಗಳೂ ಇಬ್ಬರೂ ನಕ್ಕರು. ನರಸಿಂಹಯ್ಯನವರು ''ಎಷ್ಟು ಒಳ್ಳೆಯ ಹಾಡು. ಸಿಕ್ಕಿದವರೆಲ್ಲಾ ಹುಚ್ಚು ಹುಚ್ಚಾಗಿ ಹೇಳಿ ಹಾಳುಮಾಡುತ್ತಿದ್ದಾರೆ. ಆ ನಾಟಕ ಇನ್ನೊಂದು ಸಲ ನೋಡಬೇಕು. ಆ ಹಾಡು ಕೇಳಬೇಕು'' ಎಂದರು. ಭಾಗೀರಥಮ್ಮನು ''ನಾಟಕ ಇರೋದು ಅಷ್ಟು ಒಳ್ಳೆಯದೇನಣ್ಣ?'' ಎಂದು ಕೇಳಿದಳು. ನರಸಿಂಹಯ್ಯನವರು ''ಹೌದಮ್ಮ. ನಾಟಕ ಬೆಳೆದರೇ ನಾಗರಿಕತೆ ಬೆಳೆಯೋದು'' ಎಂದು ಉತ್ತರ ಕೊಟ್ಟರು. ಭಾಗೀರಥಮ್ಮನು ''ನಮ್ಮ ಮೇಡಂ ನಮ್ಮ ಕೈಲಿ ನಾಟಕ ಆಡಿಸಬೇಕೆಂದಿದ್ದಾರೆ. ಅದಕ್ಕೇ ಅಣ್ಣ, ನಾನು ಷರಾಯಿ ಕೇಳಿದ್ದು. ಹೊಲಿಸಿಕೊಡಣ್ಣ'' ಎಂದಳು. ನರಸಿಂಹಯ್ಯನವರು ಅಪ್ರತಿಭರಾಗಿ ''ಏನೆಂದೆ?'' ಎಂದು ಕೇಳಿದ ರಭಸಕ್ಕೆ ಭಾಗೀರಥಮ್ಮನು ಬೆಚ್ಚಿದಳು.

ಅಷ್ಟರಲ್ಲಿ ಸುಬ್ಬಮ್ಮನವರು ಅಲ್ಲಿಗೆ ಬಂದು ''ನೀವು ಏನೇ ಹೇಳಿ. ಗಂಡಸರು ಬಹಳ ಒರಟು, ನೋಡಿ. ನೀವು ಆಡಿದ ಮಾತಿಗೆ ಭಾಗು ಬೆಚ್ಚಿದಳು. ಷರಾಯಿ ಹೊಲಿಸಿ ಕೊಡಿ. ಚಿಕ್ಕವಯಸ್ಸು. ಆಡಲಿ. ನಾವೂ ಹೋಗಿ ನೋಡೋಣ'' ಎಂದರು. ನರಸಿಂಹಯ್ಯನವರು ''ಈಗಿನ

ಕಾಲದ ಈ ಕುಣಿತಗಳೆಲ್ಲ ನನಗೆ ಸರಿಬೀಳೋದಿಲ್ಲ. ನನ್ನ ಮಗಳು ಷರಾಯಿ ಹಾಕಿಕೊಳ್ಳುವುದೆಂದರೇನು? ನಾಟಕದಲ್ಲಿ ಕುಣಿಯುವುದೆಂದರೇನು? ಅದೊಂದೂ ಖಂಡಿತ ಕೂಡದು" ಎಂದರು. ಭಾಗೀರಥಮ್ಮನು "ಈಗ ತಾನೆ ಹೇಳಿದೆಯಲ್ಲಣ್ಣ, ನಾಟಕ ಬೆಳೆದರೇ ನಾಗರಿಕತೆ ಬೆಳೆಯೋದೆಂತ. ನಿಮ್ಮನ್ನು ಸಂತೋಷಪಡಿಸಬೇಕೆಂತ ಬೆನ್ನು ಮುರಿಯುವಂತೆ ಕೆಲಸ ಮಾಡಿದ್ದೇನಲ್ಲಣ್ಣ. ನಾಟಕದಲ್ಲಿ ಭರ್ಜರಿ ಪಾರ್ಟು ಕೊಟ್ಟಿದ್ದಾರೆ ನಮ್ಮ ಮೇಡಂ. ರುಕ್ಮಾಂಗದನ ಪಾರ್ಟು. ಚಿನ್ನದ ಬೊಂಬೆ ಹಾಗಿರ್ತೇನಂತೆ ನಾನು. ನಾಟಕದ ದಿನ ನೀವೆಲ್ಲಾ ಬನ್ನಿ. ಸಂತೋಷಪಡಿಸಬೇಕೆಂತ ಆಸೆಯಣ್ಣ" ಎಂದಳು. ನರಸಿಂಹಯ್ಯನವರು ರೇಗಿ "ಅದೆಲ್ಲಾ ಕೂಡದು. ಬಾಯಿಮುಚ್ಚು. ಹೆಣ್ಣು ಹುಡುಗಿ. ಗಂಡುವೇಷವಂತೆ. ನಾಟಕವಂತೆ. ಷರಾಯಂತೆ" ಎಂದರು.

ಭಾಗೀರಥಮ್ಮನು ಜೋಲು ಮೋರೆ ಹಾಕಿಕೊಂಡು "ಹೋಗಲಣ್ಣ, ಷರಾಯಿ ಬೇಡ. ನಿನ್ನ ಜರತಾರಿ ಪಂಚೆಯನ್ನೋ ರೇಷ್ಮೆ ಮಗುಟವನ್ನೋ ಉಟ್ಟುಕೊಂಡು ಪಾರ್ಟು ಮಾಡ್ತೀನಣ್ಣ" ಎಂದಳು. ಸುಬ್ಬಮ್ಮನವರು "ಒಂದು ದಿನ, ಅದೂ ನಾಟಕದಲ್ಲ, ಷರಾಯಿ ಹಾಕಿಕೊಳ್ಳಲೇಳಿ. ಪಾಪ, ಹುಡುಗಿಗೆ ಆಸೆ, ಅವರ ಮೇಡಂ ಹೇಳಿದ್ದಾರಂತೆ. ಇಷ್ಟಕ್ಕೂ ಆ ದಿನ ರೇಷ್ಮೆ ಚಡ್ಡಿ ಹಾಕಿಕೊಂಡು ಎಣ್ಣೆಗೆಂಪಿನ ಮೊಕಮಲ್ ಅಂಗಿಗಳನ್ನು ತೊಟ್ಟುಕೊಂಡು ಮ್ಯಾಜಿಸ್ಟ್ರೇಟರ ಹುಡುಗಿಯರು ಅವರ ತಂದೆ ಸಂಗಡ ದೇವಸ್ಥಾನಕ್ಕೆ ಬಂದಿದ್ದಾಗ, ನೀವು ಆ ಹುಡುಗಿಯರ ತಲೆಸವರಿದ್ದೆಷ್ಟು. ನಗೂ ಬರಿಸಿಕೊಂಡು ನಗುತ್ತಾ, 'ನಿಮ್ಮ ಮಕ್ಕಳಿಗೆ ರೇಷ್ಮೆ ಚಡ್ಡಿ ಬಲು ಸೊಗಸಾಗಿ ಒಪ್ಪುತ್ತೆ ಸಾರ್' ಅಂದದ್ದೆಷ್ಟು. ಅದೆಲ್ಲಾ ಜ್ಞಾಪಿಸಿಕೊಳ್ಳಿ ಅಂದರೆ; ನಮ್ಮ ಹುಡುಗಿಯೂ ಅದರ ಆಸೆ ತೀರಿಸಿಕೊಳ್ಳಲಿ" ಎಂದರು. ನರಸಿಂಹಯ್ಯನವರು ನಸೇಪುರಾ. ಅವರು ಮತ್ತಷ್ಟು ರೇಗಿ "ಅವರು ಚಿಕ್ಕ ಹುಡುಗಿಯರು. ನೀನೂ ಬುದ್ಧಿಗೇಡಿಯಾಗಿ, ಕುಣಿಯುವ ಕಾಲಿಗೆ ಗೆಜ್ಜೆ ಕಟ್ಟಬೇಡ. ಸಾಕು ಸುಮ್ಮನಿರು" ಎಂದರು. ಸುಬ್ಬಮ್ಮನವರು "ಈ ಸ್ವಲ್ಪ ಮಾತಿಗೆ ಇಷ್ಟೇಕೆ ಕೋಪ? ಅವರು ಚಿಕ್ಕ ಹುಡುಗಿಯರು; ನಿತ್ಯ ಚಡ್ಡಿ ಹಾಕ್ಕೊಳ್ತಾರೆ. ನಮ್ಮ ಭಾಗು ದೊಡ್ಡ ಹುಡುಗಿ; ನಾಟಕಕ್ಕಾಗಿ

ಒಂದು ದಿನ ಷರಾಯಿ ಹಾಕಿಕೊಳ್ಳುತ್ತೆ. ಅಲ್ಲಿಗಲ್ಲಿಗೆ ಸರಿ ತಾನೆ?'' ಎಂದು ಕೇಳಿದರು. ನರಸಿಂಹಯ್ಯನವರು ಮೊದಲಿಗಮ್ಮ ಡಿಯಾಗಿ ರೇಗಿದರು. ಭಾಗೀರಥಮ್ಮನು ಅಳತೊಡಗಿದಳು.

ಭಾಗೀರಥಮ್ಮನ ಸಂತೋಷಕ್ಕಾಗಿ ಸುಬ್ಬಮ್ಮನವರು ಒಂದು ಪಾಪ್ಲಿನ್ ಷರಾಯಿ ಹೊಲಿಸಿಕೊಟ್ಟರು. ನರಸಿಂಹಯ್ಯನವರಿಗೆ ಅದನ್ನು ತಿಳಿಸಿರಲಿಲ್ಲ. ಷರಾಯಿ ದರ್ಜಿಯವನಿಂದ ಬಂದಾಗ ನರಸಿಂಹಯ್ಯನವರು ಕೋರ್ಟಿಗೆ ಹೋಗಿದ್ದರು. ಆ ದಿನ ಭಾರಿ ಮೊಕದ್ದಮೆಯೊಂದು ನಡೆಯ ಬೇಕಾಗಿದ್ದಿತು. ಕೋರ್ಟಿನಿಂದ ಬರುವುದು ಹೊತ್ತಾಗುವುದೆಂದೂ ತಿಳಿಸಿದ್ದರು. ಸುಬ್ಬಮ್ಮನವರು ದರ್ಜಿಯವನನ್ನು ಕಳುಹಿಸಿ, ''ಬಾರೆ ಭಾಗು, ಷರಾಯಿ ಹಾಕಿಕೊ, ಅದರ ಮೇಲೆ ಪಾಚ್ಛ್ ಮೊಕಮಲಿನ ಅಂಗಿ ಹಾಕಿಕೊ. ತಲೆಗೆ ನಿವಕ್ಕೆ ಅವರ ರುಮಾಲು ಇಟ್ಟುಕೊ, ನೋಡೋಣ'' ಎಂದರು. ತಮ್ಮನ ಅಂಗಿ ಅಕ್ಕನಿಗೆ ಸರಿಹೋದ ಬಗೆ ಹೇಗೆಂದು ಯಾರೂ ಸಂಶಯಪಡಬೇಕಾಗಿಲ್ಲ. ''ಬೆಳೆಯುವ ಹುಡುಗ, ನೋಡಿ ಹೊಲಿಯಪ್ಪ'' ಎಂದು ತನಗೆ ಬಂದಿದ್ದ (ಸುಬ್ಬಮ್ಮನವರ) ಅಪ್ಪಣೆಯ ಪ್ರಕಾರ, ಒಂಬತ್ತು ವರುಷ ವಯಸ್ಸಿನ ಪಾಚ್ಛು ಹದಿಮೂರನೆಯ ವಯಸ್ಸಿನಲ್ಲಿ ಬೇಕಾದರೂ ಹಾಕಿಕೊಳ್ಳಲಾಗುವಂತೆ ಧಾರಾಳ ಬುದ್ಧಿಯಿಂದ ದರ್ಜಿಯು ಅಂಗಿಯನ್ನು ಹೊಲಿದಿದ್ದನು.

ಒಂಬತ್ತು ವರುಷಗಳ ವಯಸ್ಸಿನ ಹುಡುಗರು ಮೊಕಮಲಿನ ಅಂಗಿಯನ್ನು ಹಾಕಿಕೊಳ್ಳುವುದು ಬೆಂಗಳೂರು ಮೈಸೂರು ನಗರಗಳಲ್ಲಿ ಅಸಂಭವವಾಗಿದ್ದರೂ, ೧೯೧೯ನೆಯ ಇಸವಿಯಲ್ಲಿ ಇತರ ಸ್ಥಳಗಳಲ್ಲಿ ಅದೇನೂ ಅಸಂಭವವಾಗಿರಲಿಲ್ಲ. ಮಗಳ ಅಲಂಕಾರವನ್ನು ನೋಡಿ ಸುಬ್ಬಮ್ಮನವರೂ ಅವರ ಇತರ ಮಕ್ಕಳೂ ಆನಂದಪಟ್ಟರು. ಸುಬ್ಬಮ್ಮ ನವರು ''ಮುದ್ದಾಗಿದೆಯಮ್ಮ'' ಎನ್ನುವ ಹೊತ್ತಿಗೆ ಸರಿಯಾಗಿ ನರಸಿಂಹಯ್ಯನವರು ನಡುವೆಯಿಂದಲೇ ''ನೀನು ಹೀಗೆ ಮುದ್ದುಮಾಡಿ ಕುಣಿಸಿದರೆ ಮುದ್ದಾಗಿರದೆ ಏನು'' ಎಂದು ರೇಗುತ್ತ ಬಂದು ಭಾಗೀ ರಥಮ್ಮನ ಬೆನ್ನಿನಮೇಲೆ ಗುದ್ದಿದರು. ಆ ಬಳಿಕ ನಡೆದ ಹಗರಣವನ್ನು

ವರ್ಣಿಸುವುದಕ್ಕಿಂತ ಊಹಿಸಿಕೊಳ್ಳುವುದೇ ಮೇಲು. ಮೊಕದ್ದಮೆಯು ನಡೆಯದೆ ಹೋದುದೇ, ಅವರು ಬೇಗ ಮನೆಗೆ ಬಂದುದಕ್ಕೆ ಕಾರಣ.

ನರಸಿಂಹಯ್ಯನವರು ಅಷ್ಟಕ್ಕೇ ಸುಮ್ಮನಾಗಲಿಲ್ಲ. ಷರಾಯಿ ಹೊಲಿಸಿದವರಾರೆಂದೂ ಅವರು ಕೇಳಲಿಲ್ಲ. ಅಲಮೇಲಮ್ಮನವರೇ ಅದಕ್ಕೆಲ್ಲ ಕಾರಣವೆಂದು ಅವರ ಮನಸ್ಸಿಗೆ ಸಿರ್ಧರವಾಗಿದ್ದಿತು. ಅವರು ತಮ್ಮ ಸ್ನೇಹಿತರು ನಾಲ್ಕೈದು ಮಂದಿಗಳನ್ನು ಕರೆದುಕೊಂಡು, ಅದೇ ಊರಿನಲ್ಲಿದ್ದ ವಿದ್ಯಾಭ್ಯಾಸದ ಅಧಿಕಾರಿಯವರಲ್ಲಿಗೆ (ಇನ್‌ಸ್ಪೆಕ್ಟರವರಲ್ಲಿಗೆ) ಹೋಗಿ ಮದುವೆಯಾಗುವ ವಯಸ್ಸಿನ ಹೆಣ್ಣುಮಕ್ಕಳನ್ನು ನಾಟಕದಲ್ಲಿ ಕುಣಿಸಿದರೆ ಹಿಂದೂ ಧರ್ಮವೇ ಮುಳುಗಿ ಹೋಗುವುದೆಂದೂ, ಆ ಹುಡುಗಿಯರನ್ನು ಯಾರೂ ಮದುವೆ ಮಾಡಿಕೊಳ್ಳದೆ ಹೋಗಬಹುದೆಂದೂ, ದೂರು ಹೇಳಿದರು; ಅಲ್ಲದೆ, ಹುಡುಗಿಯರನ್ನು ನಾಟಕದಲ್ಲಿ ಕುಣಿಸಿದ ಮರುದಿನ ದಿಂದ ಒಬ್ಬರೂ ತಮ್ಮ ಮಕ್ಕಳನ್ನು "ಸ್ಕೂಲಿಗೇ" ಕಳುಹಿಸುವುದಿಲ್ಲ ವೆಂದೂ ತಿಳಿಸಿಬಿಟ್ಟರು.

ಅದರ ಪರಿಣಾಮವಾಗಿ, ರುಕ್ಮಾಂಗದ ನಾಟಕದ ದೃಶ್ಯಗಳನ್ನು ಪಾಠಶಾಲೆಯಲ್ಲಿಯೇ ಆಡಿಸಬೇಕೆಂದೂ, ರುಕ್ಮಾಂಗದ ಧರ್ಮಾಂಗದ ಪಾತ್ರಗಳವರೂ ಸೀರೆಗಳನ್ನುಟ್ಟುಕೊಂಡೇ 'ಪಾರ್ಟು' ಮಾಡಬೇಕೆಂದೂ, ಬೇಕಾದರೆ ಅವರು ಭಾರಿ ಭಾರಿ ಸೀರೆಗಳನ್ನುಟ್ಟು, ಗಂಡುವೇಷವೆಂದು ಗೊತ್ತಾಗುವುದಕ್ಕಾಗಿ ಸೆರಗಿನ ಮೇಲೆ ಬಿಳಿಯ ಒಲ್ಲಿಗಳನ್ನು ಪಟ್ಟಿಹಿಡಿದು ಹೊದೆದುಕೊಂಡಿರಬಹುದೆಂದೂ ಗೊತ್ತಾಯಿತು. ಭಾಗೀರಥಮ್ಮನು ಪಾತ್ರ ವಹಿಸುವುದಂತು ಅವಳ ಕನಸಿನಲ್ಲಿ ಮಾತ್ರ ಸಾಧ್ಯವಾಗ ಬಹುದಾಗಿದ್ದಿತು. ಅವಳು ವಹಿಸಬೇಕಾಗಿದ್ದ ರುಕ್ಮಾಂಗದನ ಪಾತ್ರವು ಸಾತಿಯ ಪಾಲಿಗೆ ಬಂದಿತು. ಅಲಮೇಲಮ್ಮನವರ ಉತ್ಸಾಹ ಭಂಗಕ್ಕೆ ಪರಿಮಿತಿಯೇ ಇರಲಿಲ್ಲ. ಅವರು ನಿರ್ವಾಹವಿಲ್ಲದೆ ಯಂತ್ರದ ಬೊಂಬೆಯಂತೆ ಕೆಲಸಮಾಡುತ್ತಿದ್ದರು. ಪಾತ್ರಗಳನ್ನು ಧರಿಸತಕ್ಕವರಿಗೆ, ಆಗಿನ ಪರಿಸ್ಥಿತಿ ಯಲ್ಲಿಯೂ ಅವರು ಉತ್ಸಾಹವನ್ನು ತುಂಬಲು ಪ್ರಯತ್ನಿಸುತ್ತಿದ್ದರು. ಭಾಗೀರಥಮ್ಮನು ಗೋಳಾಡುತ್ತ "ನಾನು ಇನ್ನೂ ಏಕೆ ಬದುಕಿದ್ದೀನಿ, ಮೇಡಂ?" ಎಂದು ಹೇಳಿದಾಗಿನ ಅವಳ ಮುಖದ ಚಿತ್ರವು ಅಲಮೇಲಮ್ಮ

ನವರ ಮನಸ್ಸಿನೆದುರಿಗೆ ಬಂದಾಗಲೆಲ್ಲ ಅವರು ಕಂಬನಿದುಂಬುತ್ತಿದ್ದರು. ಅವರು ಎಷ್ಟು ಸಮಾಧಾನ ಹೇಳಿದರೂ ಭಾಗೀರಥಮ್ಮನು ಸಮಾಧಾನ ಹೊಂದಲಿಲ್ಲ.

೫

ಹುಡುಗಿಯರು ನಾಟಕವಾಡಿದ ದಿನ ಧರ್ಮಾಂಗದನ ಪಾತ್ರವನ್ನು ವಹಿಸಿದ್ದ ರಂಗಮ್ಮನ ಅಭಿನಯವನ್ನೂ ವಾಗ್ಧೋರಣೆಯನ್ನೂ ನೋಡಿ ಪ್ರೇಕ್ಷಕರೆಲ್ಲರೂ ಬೆರಗಾದರು. ಆ ತರುವಾಯ ನಡೆದ ಅಧ್ಯಕ್ಷ ಭಾಷಣ ಮುಂತಾದವು ನಮಗೆ ಅಪ್ರಕೃತ. ಆಗ್ಗೆ ಅಲ್ಲಿಗೆ ಬಂದಿದ್ದ ನಾಟಕ ಸಂಘದ ಯಜಮಾನರು ಎದ್ದುನಿಂತು "ಬಣ್ಣವಿಲ್ಲದೆ, ಗಂಡುವೇಷದ ಡ್ರೆಸ್ಸಿಲ್ಲದೆ, ಧರ್ಮಾಂಗದನ ಪಾತ್ರವನ್ನು ಅಭಿನಯಿಸಿದ ಹುಡುಗಿಯ ಕೌಶಲವನ್ನು ನೋಡಿ ನಮ್ಮಲ್ಲಿ ಹುಡುಗರ ಪಾತ್ರಗಳನ್ನು ವಹಿಸುವುದರಲ್ಲಿ ಪ್ರಸಿದ್ಧರಾಗಿರುವಂಥ ಬಾಲಕರು ಕೂಡ ನಾಚಿಕೊಳ್ಳಬೇಕಾಗಿದೆಯೆಂದು ನಿಷ್ಪಕ್ಷಪಾತ ಬುದ್ಧಿಯಿಂದ ಅನುಭವದಾರನಾದ ನಾನು ಹೇಳುತ್ತೇನೆ. ಅಭಿನಯವು ಇಷ್ಟು ಚೆನ್ನಾಗಿರುವುದೆಂದು ನಾನು ನಿರೀಕ್ಷಿಸಿರಲಿಲ್ಲವಾದಕಾರಣ, ನಾನು ಬರಿಯ ಕೈಯಲ್ಲಿ ಬರಬೇಕಾಯಿತು. ನಾನು ಆ ಹುಡುಗಿಗೊಂದು ಬೆಳ್ಳಿಯ ಕಪ್ ಮತ್ತು ಸಾಸರ್ ಇನಾಮಾಗಿ ತರಿಸಿ ಕೊಡಬೇಕೆಂದಿದ್ದೇನೆ. ಅಧ್ಯಕ್ಷರ ಅನುಮತಿಯಾಗಬೇಕೆಂದು ಪ್ರಾರ್ಥನೆ" ಎಂದು ಮುಂತಾಗಿ ಭಾಷಣ ಮಾಡಿದರು. ಚಪ್ಪಾಳೆಗಳ ಸುರಿಮಳೆಯಾಯಿತು.

ಭಾಗೀರಥಮ್ಮನು ಕಣ್ಣೀರು ಸುರಿಸುತ್ತ ಕುಳಿತಿದ್ದಳು. ಪ್ರೇಕ್ಷಕರೆಲ್ಲರೂ ಹೊರಟುಹೋದ ಮೇಲೆ ಅಲಮೇಲಮ್ಮನವರು ಆದರದಿಂದ ರಂಗಮ್ಮನ ಬೆನ್ನಿನಮೇಲೆ ಕೈಹಾಕಿ "ಎಷ್ಟು ಸೊಗಸಾಗಿ ಅಭಿನಯಮಾಡಿದೆಯಮ್ಮ, ಅರಗಿಣಿಯಂತಾಡಿಬಿಟ್ಟೆಯಲ್ಲೇ ತಾಯಿ. ಭಾಗೂ ಮಾತ್ರ ರುಕ್ಮಾಂಗದ ಪಾತ್ರ ವಹಿಸಿ ನೀವೆಲ್ಲರೂ ಬಣ್ಣಹಾಕಿಸಿಕೊಂಡು ಮೊದಲು ನಾನು ಯೋಚಿಸಿದ್ದಂತೆ ನಾಟಕವಾಗಿದ್ದರೆ ಇನ್ನೂ ಹೇಗಿರುತ್ತಿತ್ತೊ! ಚಿಕ್ಕವರಿಗಾಗಿ ನಾಟಕಗಳು ಇನ್ನೂ ಏರ್ಪಟ್ಟಿಲ್ಲದ ಈ ಸ್ಥಿತಿಯಲ್ಲೂ ಭಾವಗಳು ಪೂರ್ತಿಯಾಗಿ ನಿಮಗೆ ಅರ್ಥವಾಗದ ನಾಟಕವೂ ಇಷ್ಟು ಚೆನ್ನಾಗಿ ಆಯಿತಲ್ಲ" ಎಂದರು. ಅಷ್ಟರಲ್ಲಿ ಕಂಬನಿದುಂಬಿ ತಮ್ಮ ಬಳಿಗೆ ಬಂದು

ನಿಂತ ಭಾಗೀರಥಮ್ಮನ ತಲೆಯನ್ನು ಸವರಿ "ಅಳಬೇಡ, ಕಂದ. ನಿನಗಿಂತ ನಮ್ಮ ನಷ್ಟ ಹೆಚ್ಚು. ಅಡಿ ಫಲವಿಲ್ಲ ತಾಯಿ, ನಿನ್ನ ದುಃಖ ನಾನು ಬಲ್ಲೆ" ಎಂದರು. ರಂಗಮ್ಮನೂ ಇತರ ಹುಡುಗಿಯರೂ ಪ್ರೀತಿಯಿಂದ ಸಮಾಧಾನ ಹೇಳಿದರು. ಭಾಗೀರಥಮ್ಮನು ರೋದಿಸುತ್ತ "ಎದುರು ಮನೆ ಡಾಕ್ಟರ ಮಗಳು ಕೂಡ ಸತ್ತುಹೋದಳು. ನಾನೇಕೆ ಸಾಯಲಿಲ್ಲ, ಮೇಡಂ?" ಎಂದಳು. ಅಲಮೇಲಮ್ಮನವರು ವಿಧ ವಿಧವಾಗಿ ಸಂತೈಸಿದರು.

ಮಾರನೆಯ ದಿನ ಬೆಳಗ್ಗೆ ಭಾಗೀರಥಮ್ಮನು ಮಂಕಾಗಿ ಎಳೆಬಿಸಿಲಿನಲ್ಲಿ ಕುಳಿತಿದ್ದಳು. ಅವಳಲ್ಲಿ ಅನುಕಂಪ ಬುದ್ಧಿಯಿಂದ ಸುಬ್ಬಮ್ಮನವರೂ ಆಗಾಗ ಸಮಾಧಾನ ಹೇಳುತ್ತಿದ್ದರು. ಆದರೂ ಭಾಗೀರಥಮ್ಮನು ಮೇಲಕ್ಕೇಳಲಿಲ್ಲ. ಕಾಫಿಯೂ ಬೇಡವೆಂದಳು. ಒಂಬತ್ತು ಗಂಟೆಯ ವೇಳೆಗೆ ಮನೆಯಲ್ಲಿಯೇ ಇದ್ದ ತಮ್ಮ ತಂದೆಯ "ಆಫೀಸು" ಕೊಟಡಿಗೆ ಹೋದಳು. ನರಸಿಂಹಯ್ಯನವರು ಆ ಕೊಟಡಿಯಲ್ಲಿ ತುಂಬಿದ್ದ ಕಕ್ಷಿಗಾರರೆದುರಿಗೆ ತಮ್ಮ ವಾಗ್ಝರಿಯನ್ನು ಪ್ರದರ್ಶಿಸುತ್ತ ಒಂದು ಮೊಕದ್ದಮೆಯ ಸಂಬಂಧದಲ್ಲಿ ತಾಳ್ಮೆ ಶಾಂತಿಗಳ ಮೇಲೆ ಒಬ್ಬ ಕಕ್ಷಿಗಾರನಿಗೆ ನೀತಿಬೋಧೆ ಮಾಡುತ್ತಿದ್ದರು. ಭಾಗೀರಥಮ್ಮನು ಮೇಜಿನ ಮೇಲಿದ್ದ "ಬಿಗ್ ಬೆನ್" ಗಡಿಯಾರವನ್ನು ತಂದೆಯ ಕೈಗೆ ಕೊಟ್ಟು "ಇದರ ಮೇಲು ಮುಖದ ತಗಡಿನಲ್ಲಿ ಇಳಿಜಾರಿನ ಕಡೆ ಮುಖ ನೋಡಿಕೊಳ್ಳಣ್ಣ" ಎಂದು ಹೇಳಿ ನಕ್ಕಳು. ಮಗಳ ಮನಸ್ಸು ನೊಂದಿದ್ದುದು ನರಸಿಂಹಯ್ಯನವರಿಗೂ ಗೊತ್ತು. ಆದಕಾರಣ ಅವರು ಅವಳಿಗೆ ಅಸಮಾಧಾನವಾಗಕೂಡದೆಂಬ ಭಾವನೆಯಿಂದ ಅವಳು ಹೇಳಿದಂತೆ ಮಾಡಿ "ನನ್ನ ಮುಖ ಇದರಲ್ಲಿ ಬಹಳ ವಕ್ರವಾಗಿ ಹೇಗೆ ಹೇಗೋ ಅಸಹ್ಯವಾಗಿ ಕಾಣುತ್ತಮ್ಮ" ಎಂದು ಹೇಳಿ ನಕ್ಕರು. ಭಾಗೀರಥಮ್ಮನು "ಹೌದಣ್ಣ, ಅದರಲ್ಲಿ ನಿನ್ನ ಮುಖ ಎಷ್ಟು ವಕ್ರವಾಗಿ ಕಾಣುತ್ತೋ ಅದಕ್ಕಿಂತ ಸಾವಿರ ಪಾಲು ನಿನ್ನ ಮನಸ್ಸು ವಕ್ರ; ಕಲ್ಲಿಗಿಂತ ಕಠಿಣ" ಎಂದಳು. ನರಸಿಂಹಯ್ಯನವರು ಅವಮಾನವನ್ನು ತಾಳಲಾರದೆ "ಏನೆಂದೆ?" ಎಂದು ಗರ್ಜಿಸಿದರು. ಭಾಗೀರಥಮ್ಮನು ಮುಖವನ್ನು ಸೊಟ್ಟುಮಾಡಿ ಅಣಕಿಸಿ "ಅನಂದೆ" ಎಂದು ಹೇಳಿ ಮನೆಯೊಳಕ್ಕೆ ಹೋಗಿ ಮಲಗಿದಳು. ತಾಳ್ಮೆ ಶಾಂತಿಗಳ ಮೇಲೆ ನೀತಿ

ಬೋಧೆ ಮಾಡುತ್ತಿದ್ದುದರಿಂದ ನಿರ್ವಾಹವಿಲ್ಲದೆ ಕಕ್ಕಿಗಾರರೆದುರಿಗೆ ನರಸಿಂಹಯ್ಯನವರು ತಾತ್ಕಾಲಿಕವಾಗಿ ತಮ್ಮ ಮನಸ್ಸಿಗೆ ಸ್ಮರಣೆಯ ತೆರೆಯನ್ನೆಳೆದಿದ್ದರು. ಅತ್ತ, ಮಗಳೇಕೆ ಮಲಗಿದಳೆಂದು ಸುಬ್ಬಮ್ಮನವರಿಗೆ ದಿಗಿಲಾಯಿತು. ಮೈ ಮುಟ್ಟಿ ನೋಡಿದರೆ ಭಾಗೀರಥಮ್ಮನಿಗೆ ಜ್ವರ.

ಎಷ್ಟೆಷ್ಟು ಬಗೆಗಳಿಂದ ವೈದ್ಯ ಮಾಡಿಸಿದರೂ ಭಾಗೀರಥಮ್ಮನ ವಿಷಮಶೀತಜ್ವರವು ಗುಣವಾಗಲಿಲ್ಲ. ಸನ್ನಿಯಾಗಿ ಜ್ಞಾನವೂ ತಪ್ಪಿ ಹೋಯಿತು. ಅವಳು ಮನಸ್ವಿಯಾಗಿ ಮಾತನಾಡುತ್ತಿದ್ದಳು. ಮುಖ್ಯ ವಾಗಿ "ಚಿನ್ನದ ಬೊಂಬೆಯಾಗಲಿಲ್ಲ," "ಯಾರೋ ತಪ್ಪಿಸಿಬಿಟ್ಟರು," "ನನ್ನ ಹಾಗೆ ಚಿನ್ನದ ಬೊಂಬೆ ಮಾಡಿಸಿ ಗೌರಮ್ಮನ ಹತ್ತಿರ ಇಡಿಸುವು ದಾಗಿ ಪಾಚ್ಚು ಹೇಳಿದ್ದ," "ಪಾಚ್ಚು ಸುಖವಾಗಿರಲಿ," "ಅಮ್ಮ, ಚಿನ್ನದ ಬೊಂಬೆಯಾದರೂ ಮಾಡಿಸಮ್ಮ" ಎಂಬಿವೇ ಅವಳು ಪದೇ ಪದೇ ಆಡುತ್ತಿದ್ದ ಮಾತುಗಳು. ಸನ್ನಿಯು ಇಳಿಯಲೇ ಇಲ್ಲ. ಭಾಗೀ ರಥಮ್ಮನು ವಿಷಮಶೀತಜ್ವರಕ್ಕೆ ಬಲಿಯಾದಳು. "ಚಿನ್ನದ ಬೊಂಬೆ, ಚಿನ್ನದ ಬೊಂಬೆ" ಎಂಬಿವೇ ಅವಳ ಕೊನೆಯ ಮಾತುಗಳು.

---

# "ಈ ಹುಚ್ಚು ಉಂಟೆ?"

ನನ್ನ ಭಾವನೆಯಲ್ಲಿ ನಮ್ಮ ತಾಲ್ಲೂಕು ಕಸಬೆಯು ಈ ಪ್ರಪಂಚಕ್ಕೇ ಚಿನ್ನದ ಕಲಶದಂತಿರುವ ಊರು. ನಾನು ಅನೇಕ ಊರುಗಳನ್ನು ನೋಡಿದ್ದೇನೆ, ಎಲ್ಲಿಯೂ ನನಗೆ ಇದನ್ನು ನೋಡಿದಾಗಿನಷ್ಟು ಆನಂದವಾಗಲಿಲ್ಲ. ಊರಿನಲ್ಲಿ ವರುಷಕ್ಕೆ ಆರು ತಿಂಗಳಕಾಲ ಕುಡಿಯುವ ನೀರಿಗೇ ಎಷ್ಟೋ ಕಷ್ಟ. ಆದರೂ, ನಾನೇನೋ ನನ್ನ ಅಭಿಪ್ರಾಯವನ್ನು ಬದಲಾಯಿಸುವುದಿಲ್ಲ. ಗಿರಿಭಟ್ಟರು ಅಲ್ಲಿ ಪ್ರಖ್ಯಾತರು; ತುಂಬಿದ ಕೊಡ; ತುಂಬ ದೊಡ್ಡ ಮನುಷ್ಯರು; ಪರೋಪಕಾರ ಬುದ್ಧಿಯುಳ್ಳವರು; ಅವರಲ್ಲಿ ವಿದ್ಯೆಗೆ ತಕ್ಕಹಾಗೆ ವಿನಯವೂ ತುಂಬಿದೆ. ಹೆಚ್ಚೇಕೆ? ಈ ಊರು ಅಡಕೆಯಮರವಾದರೆ, ಗಿರಿಭಟ್ಟರ ಯಶಸ್ಸು ಅದಕ್ಕೆ ಹಬ್ಬಿಕೊಂಡಿರುವ ವೀಳೆಯದೆಲೆಯ ಬಳ್ಳಿ. ರಂಗಪ್ಪನು ಗಿರಿಭಟ್ಟರಿಗೆ ಬಹಳ ಬೇಕಾದವನು. ನನಗೂ ಅವನಿಗೂ ದೂರಸಂಬಂಧ. ನೆಂಟರಲ್ಲಿ ಅವನಿಗೆ ಬಹಳ ಅಕ್ಕರೆ. ನಾನು ಹೋದಾಗಲೆಲ್ಲ ಅವನ ಮನೆಯಲ್ಲಿಯೇ ಬಿಡಾರ. ಈ ಸಾರಿಯೂ ನಾನು ಅಲ್ಲಿಯೇ ಇಳಿದಿದ್ದೆ. ನಿನ್ನೆಯ ದಿನ ರಾತ್ರಿ ನೀಲಕಂಠೇಶ್ವರ ದೇವಸ್ಥಾನದಲ್ಲಿ ಸಂಗೀತ ಗೋಷ್ಠಿ.

ಸಂಗೀತವನ್ನು ಕೇಳುವುದೆಂದರೆ ನನಗೆ ನಾಲ್ಕು ಕಿವಿಗಳಿದ್ದಹಾಗೆ. ನಾನು ಬೇಡವೆಂದರೂ ನನ್ನ ತಲೆಯು ಕಸರತ್ತಿಗೆ ಆರಂಭಮಾಡುತ್ತದೆ. ಸಂಗೀತವನ್ನು ಕೇಳಲು ನಾನೂ ರಂಗಪ್ಪನೂ ಅಲ್ಲಿಗೆ ಹೋಗಿದ್ದೆವು. ಹಾಡುಗಾರಿಕೆಯು ಒಂದೆರಡು ಗಂಟೆಗಳಕಾಲ ನಡೆದಮೇಲೆ ಕಲ್ಯಾಣಿ ರಾಗದ ಆಲಾಪನೆಯು ಪ್ರಾರಂಭವಾಯಿತು. ರಂಗಪ್ಪನ ಕಣ್ಣುಗಳಿಂದ ಬಳಬಳನೆ ನೀರು ಸುರಿಯತೊಡಗಿತು. ಸುತ್ತುಮುತ್ತಲೂ ಕುಳಿತಿದ್ದವರು ಬೆಕ್ಕಸಬೆರಗಾಗಿ ಅವನನ್ನೇ ನೋಡುತ್ತಿದ್ದರು. ಸಂಗೀತದ ಸೊಗಸೇ ಅವನ ನೀರವರೋದನಕ್ಕೆ ಕಾರಣವಾಗಿರಬೇಕೆಂದು ನಿರ್ಧರಿಸಿ, ಅವರೆಲ್ಲರೂ ಮತ್ತಷ್ಟು ಹೆಚ್ಚಾಗಿ ಗಮನಕೊಟ್ಟು ರಾಗಾಲಾಪನವನ್ನು ಕೇಳತೊಡಗಿ

ದರು. ತಾವು ದೊಡ್ಡವರೆಂದು ಭಾವಿಸಿಕೊಂಡಿದ್ದ ಕೆಲವರಂತು ಸಾಮಾನ್ಯನಾದ ರಂಗಪ್ಪನೇ ಆನಂದಬಾಷ್ಪವನ್ನು ಸುರಿಸಿದ ಮೇಲೆ ತಾವು ಸುಮ್ಮನಿರುವುದು ಸರಿಯಲ್ಲವೆಂದು ಭಾವಿಸಿದರು. ಸಂಗೀತವು ತಿಳಿಯದೆ ಹೋದರೂ ನಿರ್ವಾಹವಿಲ್ಲದೆ ಅವರೂ ತಲೆಯನ್ನು ತೂಗುತ್ತಿದ್ದರು.

ಇದೆಲ್ಲದರ ಪರಿಣಾಮವಾಗಿ ಸಂಗೀತಗಾರನು ಮತ್ತಷ್ಟು ಹುರಿಗೊಂಡು ಉತ್ಸಾಹದಿಂದ ಹಾಡತೊಡಗಿದನು. ರಂಗಪ್ಪನು ಕಣ್ಣೀರು ಸುರಿಸುತ್ತಿದ್ದುದಕ್ಕೆ ಮತ್ತಾವುದೋ ಕಾರಣವಿರಬೇಕೆಂಬುದಾಗಿ ನನ್ನ ಮನಸ್ಸಿಗೆ ತೋರಿತು. ಅಷ್ಟರಲ್ಲಿ ಬಾಲಕನೊಬ್ಬನು ಮೃದಂಗದವನ ಬಳಿಗೆ ಹೊರಟನು. ಸಂಗೀತಗಾರನ ಮಧುರಧ್ವನಿಯನ್ನೇ ಆಲಿಸಿ ಕೇಳುತ್ತಿದ್ದ ಆ ಪುಟ್ಟಹುಡುಗನಿಗೆ ಮುಂದೆಹೋಗಲು ಮನಸ್ಸಿಗೆ ಆಸೆ; ಆದರೆ ಸಂಕೋಚವೂ ಲಜ್ಜೆಯೂ ಅದಕ್ಕೆ ಅವಕಾಶಕೊಡುವಹಾಗಿಲ್ಲ. ಅಷ್ಟರಲ್ಲಿ ಅವನಿಗೆ ಮೃದಂಗದ ಆಶ್ರಯವು ಸಿಕ್ಕಿತು. ನೀರಿನಲ್ಲಿ ಮುಳುಗಿಹೋಗುತ್ತಿದ್ದವನ ಕೈಗೆ ಬುರುಡೆಯು ಸಿಕ್ಕಿದಂತಾಯಿತು. ಹುಡುಗನು ಮೃದಂಗದ ಬಾರುಗಳನ್ನು ಸವರುತ್ತ ತನ್ನ ಮನಸ್ಸನ್ನು ಸಂತೈಸಿಕೊಂಡನು. ಅಲ್ಲದೆ ಅವನು ಮತ್ತಷ್ಟು ಮನಗೊಟ್ಟು ಸಂಗೀತವನ್ನು ಕೇಳುತ್ತಿದ್ದನು.

ಸಂಗೀತಗಾರನ ಬಳಿಗೆ ಹೋಗುವ ಸಾಹಸಕ್ಕೆ ಪ್ರಾರಂಭಿಸಿ ಅದು ಸಾಗದೆ ಹೋಯಿತೆಂಬ ಹೀನಾಯದಿಂದ ತಲೆ ತಗ್ಗಿಸಿ ನಿಂತಿದ್ದ ಆ ಹುಡುಗನ ಇಂಗಿತವನ್ನರಿತು, ಸಭೆಯವರೆಲ್ಲರೂ ಅವನ ಕಡೆಗೇ ದೃಷ್ಟಿಸಿ ನೋಡುತ್ತಿದ್ದರು. ಸಂಗೀತಸುಧೆಯ ಜೊತೆಗೆ ಲಾವಣ್ಯಲಹರಿಯೂ ಸೇರಿದಂತೆ ತೋರುತ್ತಿದ್ದ ಆಗಿನ ಅಚ್ಚರಿಯ ದೃಶ್ಯವೇ ಅದಕ್ಕೆ ಕಾರಣ. ಬಾಲಕನ ಸೌಂದರ್ಯದ ದೆಸೆಯಿಂದ ಅವನ ಮುಖದ ಮೇಲೆ ಬಿದ್ದ ಬೆಳಕಿಗೂ ಒಂದು ವಿಧದ ಅಪೂರ್ವಕಾಂತಿ; ಒಂದು ವಿಧದ ಸಾರ್ಥಕ್ಯ. ಗುಂಡಗೆ ಅಂದವಾಗಿರುವ ಬಟ್ಟತಲೆ. ಮರಿದುಂಬಿಗಳ ನೆನಪನ್ನು ತರುತ್ತ, ಹಣೆಯ ಮೇಲೆ ಹಾರಾಡುತ್ತ, ಹರಿದಾಡುತ್ತ, ಅವನ ಮುಖದಕಡೆಗೆ ಇಣಿಕಿ ನೋಡುವಂತೆ ತೋರುತ್ತಿದ್ದ ಅಚ್ಚುಕಟ್ಟಾದ ಮುಂಗುರುಳು. ವಿಶಾಲವಾದ ಹಣೆ. ತಿದ್ದಿಬರೆದಂತಿದ್ದ ಹುಬ್ಬುಗಳು. ಅಗಲವಾದ ಕಣ್ಣುಗಳು. ತುಂಬ ಬೆಲೆಬಾಳುವ ವಜ್ರದೊಳಗೆ ಬಳುಕುತ್ತ ಬಳುಕುತ್ತ ಕಣ್ಮನಗಳನ್ನು

ಸೆರೆಗೊಳ್ಳುವಂತೆ ತೋರುವ ಸೀರೋಟದಂತಿರುವ ಕಣ್ಣಿನ ಕಾಂತಿ, ತುಂಬಿದ ಕೆನ್ನೆಗಳು, ವಿಧಾತನ ಶಿಲ್ಪಚಾತುರ್ಯಕ್ಕೆ ಎದುರಿಲ್ಲವೆಂಬುದನ್ನು ನೆನಪಿಗೆ ತರುವ ಅಂದವಾದ ಬಾಯಿ, ಮುಖಕ್ಕೆ ತಕ್ಕ ಪ್ರಮಾಣದಲ್ಲಿ ಒಪ್ಪುವ ಕಿವಿ ಮೂಗುಗಳು, ಸರಿಯಾದ ಪ್ರಮಾಣದಲ್ಲಿರುವ ದುಂಡಾದ ಕೈ ಕಾಲುಗಳು, ಎತ್ತರಕ್ಕೆ ತಕ್ಕಷ್ಟು ದಪ್ಪವಿರುವ ದೇಹಕಟ್ಟು, ದಂತದಲ್ಲಿ ಕಡೆದ ಬೊಂಬೆಗೆ ಎಳೆಗೆಂಪಿನ ರಸದಲ್ಲಿ ಮೆರುಗಿಟ್ಟಿರುವರೋ ಎಂಬಂತೆ ತೋರುವ ಮೈಬಣ್ಣ, ಒಟ್ಟಿನಲ್ಲಿ ಶೈಶವದ ಸೌಕುಮಾರ್ಯವೇ ಆಕೃತಿಯನ್ನು ತಳೆದು ಬಂದಂತೆ ತೋರುವ ಚೆಲ್ವಿಕೆ—ಇವುಗಳಿಂದ ಕೂಡಿದ್ದ ಆ ಬಾಲಕನನ್ನೇ ಸಭಿಕರೆಲ್ಲರೂ ದೃಷ್ಟಿಸಿ ನೋಡುತ್ತಿದ್ದರು. ಅವನ ತಲೆಯಮೇಲಿದ್ದ ಜರಿಯಹೂವಿನ ಕೆಂಪು ಟೋಪಿಯು, ಅವನು ಧರಿಸಿದ್ದ ಕಪ್ಪು ಮಕಮಲಿನ ಅಂಗಿ ಷರಾಯಿಗಳೂ ಅವನ ಸೊಬಗನ್ನು ಮತ್ತಷ್ಟು ಹೆಚ್ಚಿಸುವಂತಿದ್ದುವು. ಎಳೆಬಿಸಿಲಿನಲ್ಲಿ ನಾಗರಮುರಿಯು ತನ್ನ ಪುಟ್ಟಹೆಡೆಯನ್ನು ತೂಗುವಂತೆ, ಬಾಲಕನು ಆಗಾಗ ತಲೆತೂಗುವುದನ್ನು ನೋಡಿ ಅವರೆಲ್ಲರೂ ಮುಗ್ಧರಾದರು.

ಅಷ್ಟರಲ್ಲಿ ಹುಡುಗನು ತನ್ನ ಕೈಯಿಂದ ಮೃದಂಗವನ್ನು ಒಮ್ಮೆ ಸದ್ದುಮಾಡಿದನು. ರಾಗಾಲಾಪನೆಯು ಮುಗಿಯುತ್ತ ಬಂದಿತೆಂಬುದನ್ನು ಅರಿತು ಆಗಿನಕಾಲಕ್ಕೆ ಸರಿಯಾಗಿ ಬಾಲಕನು ತನಗೆ ತೋರಿದಂತೆ ಮೃದಂಗ ಧ್ವನಿ ಮಾಡಿದುದಕ್ಕಾಗಿ, ಅವನದು ಅದ್ಭುತ ಚೇತನವೆಂದು ಕೊಂಡಾಡಿ ಸಭಿಕರೆಲ್ಲರೂ ಚಪ್ಪಾಳೆ ಹೊಡೆದರು. ಬಾಲಕನು ಮೃದಂಗವನ್ನು ಬಾರಿಸಿದುದು ಕಾಕತಾಳ ನ್ಯಾಯದಂತೆ ಸರಿಹೋಯಿತೋ, ಇಲ್ಲವೇ ಆ ವಯಸ್ಸಿನಲ್ಲಿಯೇ ಅದ್ಭುತವಾದ ಸಂಗೀತ ರಸಾಸ್ವಾದನ ಶಕ್ತಿಯು ರೂಪುಗೊಂಡಿದ್ದಿತೋ—ಅದು ಭಗವಂತನಿಗೇ ಗೊತ್ತು. ಅವನ ವರ್ತನೆಯನ್ನು ನೋಡಿ ಸಂಗೀತಗಾರನೂ, ಪಿಟೀಲಿನವನೂ, "ಭೇಷ್ ಭೇಷ್!" ಎಂದರು. ಮೃದಂಗದವನಿಗಂತು ಅದುವರೆಗೂ ಹೊರಗಿನ ಪ್ರಪಂಚದ ಪ್ರಜ್ಞೆಯೇ ಇರಲಿಲ್ಲ. ಅವನ ಮನಸ್ಸು ಎಲ್ಲಿಯೋ ತೇಲಿಹೋಗಿದ್ದಿತು. ಹುಡುಗನನ್ನು ನೋಡಿದಾಗ ಅವನಿಗೆ ಯಾವುದೋ ದುಃಖಕರವಾದ ನೆನಪು ಬಂದುದೇ ಅದಕ್ಕೆ ಕಾರಣವಿರಬೇಕೆಂದು ನನ್ನ ಊಹೆ. ಇಲ್ಲದೆ ಹೋಗಿದ್ದರೆ ಅವನು ಮಂಕು ಕವಿದವನಂತೆ ಕುಳಿತುಕೊಳ್ಳುತ್ತಿರಲಿಲ್ಲ. ಅವನ ಮನಸ್ಸಿನ ಭಾವವು

ಸೌಂದರ್ಯ ಪುತ್ಥಳಿಗಳನ್ನು ಕಳೆದುಕೊಂಡ ಹತಭಾಗ್ಯರಿಗೆ ಮಾತ್ರವೇ ಅನುಭವಕ್ಕೆ ಬರುವಂಥದು. ಚಪ್ಪಾಳೆಯ ಸುರಿಮಳೆಯ ಮಧ್ಯದಲ್ಲಿ ಅವನು ಬೆಚ್ಚಿಬಿದ್ದವನಂತೆ ಬಾಹ್ಯಪ್ರಪಂಚಕ್ಕೆ ಬಂದು, ತನ್ನ ಬಳಿಯಲ್ಲಿ ನಿಂತಿದ್ದ ಆನಂದವಲ್ಲರಿಯ ಬೆನ್ನನ್ನು ತಟ್ಟಿ ತಾನು ಧನ್ಯನೆಂದು ಭಾವಿಸಿಕೊಂಡನು.

ಆ ವೇಳೆಗೆ ರಂಗಪ್ಪನ ಕಣ್ಣೀರು ಮತ್ತಷ್ಟು ಹೆಚ್ಚಾಗಿದ್ದಿತು. ಅವನು ಹುಡುಗನನ್ನು ಬಾಚಿ ತಬ್ಬಿಕೊಂಡು ದೇವಸ್ಥಾನದ ಪ್ರಾಕಾರಕ್ಕೆ ಎತ್ತಿಕೊಂಡು ಹೋದನು. ಮತ್ತೊಬ್ಬರ ಮನೆಯ ಹುಡುಗನನ್ನು ಅವನು ಹೀಗೇತಕ್ಕೆ ಕರೆದುಕೊಂಡು ಹೋದನೆಂದು ಆಶ್ಚರ್ಯಹೊಂದಿ ನಾನೂ ಅಲ್ಲಿಗೆ ಹೋದೆನು. ಪಲ್ಲವಿಯನ್ನು ಹಾಡುವ ಗರಡಿಯ ನಾಮು ನಡೆಯುವಾಗ ಸಂಗೀತ ಕಛೇರಿಯಿಂದ ಎದ್ದುಹೋದರೆ, ನನ್ನಂತಹವರಿಗೆ ಹೆಚ್ಚು ನಷ್ಟವೇನೂ ಇಲ್ಲ. ರಂಗಪ್ಪನು ಹುಡುಗನನ್ನು ಅಪ್ಪಿ ಹಿಡಿದಿದ್ದ ಬಗೆಯನ್ನು ನೋಡಿದಾಗ ಅವನು ಹಿಂದಿನ ಜನ್ಮದಲ್ಲಿ ಬೆಕ್ಕಾಗಿದ್ದನೆಂದು ನನಗೆ ತೋರಿತು. ಬೆಕ್ಕು ತನ್ನ ಮರಿಯನ್ನು ಬಲವಾಗಿಯೂ ಕಚ್ಚಿ ಹಿಡಿದಿರುತ್ತದೆ. ಅಲ್ಲದೆ ಮರಿಗೆ ನೋವಾಗದಂತೆ ಎಚ್ಚರಿಕೆಯಿಂದಲೂ ಎತ್ತಿಕೊಂಡು ಹೋಗುತ್ತದೆ. ಹುಡುಗನು ತನ್ನ ಹೃದಯದೊಳಕ್ಕೇ ಸೇರಿಹೋಗುವಂತೆ ರಂಗಪ್ಪನು ಪ್ರೇಮಭರದಿಂದ ಅವನನ್ನು ತೋಳುಗಳ ಮಧ್ಯದಲ್ಲಿ ಒತ್ತಿಬಿಡುವನೋ ಎನ್ನುವಂತೆ ತೋರುತ್ತಿದ್ದಿತು.

ಆದರೂ ಹುಡುಗನ ಮುಖದಲ್ಲಿ ನಗೆಮಲ್ಲಿಗೆಯು ಸೂಸುತ್ತಿದ್ದಿತು. ರಂಗಪ್ಪನನ್ನು ಕುರಿತು "ಬಿಡೋ ನನ್ನ. ತಾತ್ನ ಹತ್ತಿರ ಹೋಗಬೇಕು. ಬೆಳಗ್ಗೆ—ಮತ್ತೇ—ತಿಂಡಿ ಕೊಟ್ಟೆಯಲ್ಲ. ಇನ್ನು ಕೇಳಬ್ಯಾಡ—ಅಂತಾನೂ ಹೇಳಿದ್ದೆಯಲ್ಲಾ. ನಾನು ಅದನ್ನ (ಆ-ಎಂದು ಬಾಯಿ ತೋರಿಸಿ) ಈ ಬಾಯಿಂದ (ಹೊಟ್ಟೆಯನ್ನು ಬೆರಳಿನಿಂದ ನಿರ್ದೇಶಿಸಿ) ಈ ಹೊಟ್ಟೇ ಒಳಕ್ಕೆ ಸೇರಿಸ್ದೆ. ಹೊಟ್ಟೇಗೇ ಆ ತಿಂಡಿಯು ಇನ್ನೂ ಬೇಕಂತೆ. ಊಟವಾದಾಗಿನಿಂದಲೂ ಅದು ಕೇಳ್ತಾಲೇ ಇದೆ. ನಾನು ಬಂದಿದ್ದೆ. ನೀನು ಮನೇಲೇ ಇರ್ಲಿಲ್ಲ. ನೀನು ಇನ್ನಷ್ಟು ಕೊಡ್ದೇ ಇದ್ದರೆ ಅದು ನಿನ್ನ ಜೊತೇ ಠೂ ಮಾಡಿಬಿಡತ್ತಂತೆ. ನಾನೂ ನಿನ್ನ ಜೊತೆ ಠೂ" ಎಂದು ರಂಗಪ್ಪನಿಗೆ

ತಿಳಿಸಿದನು. ನಾವಿಬ್ಬರೂ ನಕ್ಕೆವು. ರಂಗಪ್ಪನು "ನಾಳೆ ಬೆಳಗ್ಗೆ ತಿಂಡಿ" ಎಂದು ತನ್ನ ನ್ಯಾಸವನ್ನು ಕೆಳಕ್ಕಿಳಿಸಿದನು. ಹುಡುಗನು ಜಿಂಕೆಯು ಮರಿಯಂತೆ ನೆಗೆದು "ಬೆಳಗ್ಗೆ ಬರ್ತೀನಿ. ಕೊಡದೇ ಇದ್ರೆ ನಿನ್ನ ಜೊತೇ 'ಠೂ, ಠೂ, ಠೂ'" ಎಂದು ಹೇಳಿ ಒಳಕ್ಕೆ ಓಡಿಹೋದನು. ರಂಗಪ್ಪನು ಕಣ್ಣೀರನ್ನು ಸುರಿಸಿದುದಕ್ಕೆ ನಾನು ಕಾರಣವನ್ನು ಕೇಳಿದುದೇ ತಡ; ಮತ್ತೂ ಅವನು ಬಿಕ್ಕಿ ಬಿಕ್ಕಿ ಅಳಲಾರಂಭಿಸಿದನು. ಆಗ್ಗೆ ಹೆಚ್ಚೇನನ್ನೂ ಪ್ರಶ್ನೆಮಾಡದೆ ನಾನು ಸುಮ್ಮನಾದೆನು. ನಿನ್ನೆಯದಿನ ರಾತ್ರಿ ಮನೆಗೆ ಹಿಂತಿರುಗಿದ ಮೇಲೂ ನಾನು ಸುಮ್ಮನಿದ್ದೆನು. ಈ ದಿವಸ ರಂಗಪ್ಪನನ್ನು ಕೇಳಿ ಎಲ್ಲ ಸಂಗತಿಗಳನ್ನೂ ತಿಳಿದುಕೊಂಡೆನು. ಹಿಂದಿನ ಸಂಗತಿಗಳ ನೆನಪೇ ರಂಗಪ್ಪನು ಅತ್ತುದಕ್ಕೆ ಕಾರಣವೆಂದು ಗೊತ್ತಾಯಿತು. ಅವುಗಳನ್ನು ತಮಗೂ ಅರಿಕೆ ಮಾಡಿಬಿಡುತ್ತೇನೆ. ಅವು ಕೆಲವು ವರುಷಗಳ ಹಿಂದೆ ನಡೆದ ಹಳೆಯ ಸಂಗತಿಗಳಾದರೂ ತಾವು ಆದರದಿಂದ ಲಾಲಿಸಬೇಕೆಂಬುದೇ ನನ್ನ ಬಿನ್ನಹ.

ಒಂದು ದಿವಸ ಮಧ್ಯಾಹ್ನದ ಮೇಲೆ ಸುಮಾರು ಎರಡು ಗಂಟೆಯ ಹೊತ್ತಿನಲ್ಲಿ, ಗಿರಿಭಟ್ಟರು ತಮ್ಮ ಮನೆಯ ಹಜಾರದಲ್ಲಿ ಗೋಡೆಯನ್ನೊರಗಿ ಕೊಂಡು ಮಂದಲಿಗೆಯ ಮೇಲೆ ಕುಳಿತಿದ್ದರು. ಅವರ ಬಳಿಯಲ್ಲಿ ಗುಲಾಬಿಯ ಬಣ್ಣದ ರೇಷ್ಮೆಯನ್ನುಪಯೋಗಿಸಿ ರಟ್ಟುಹಾಕಿದ್ದ ಸಚಿತ್ರ ಭಗವದ್ಗೀತೆಯ ಪ್ರತಿ. ಮುದ್ದಾದ ಪುಸ್ತಕ. ಅಂದವಾದ ದೇವ ನಾಗರಿಯ ಅಕ್ಷರಗಳು. ಸೊಗಸಾದ ಮುದ್ರಣ. ಆ ಪುಸ್ತಕವು ಅಂದು ತಾನೆ ಅವರ ಮನೆಗೆ ಬಂದಿದ್ದಿತು. ಭಟ್ಟರು ಅದರ ಅಂದಚಂದಗಳನ್ನು ನೋಡುತ್ತಿದ್ದರು. ಅವರಿಗೆ ಅದೇ ತಾನೆ ಊಟವಾಗಿದ್ದ ಕಾರಣ, ಹಾಗೆಯೇ ಸ್ವಲ್ಪ ತೂಕಡಿಕೆಗಾರಂಭವಾಗಿ ನಿದ್ರೆಯ ಜೋಂಪು ಹತ್ತಿತು. ಸ್ವಲ್ಪ ಹೊತ್ತಿನೊಳಗಾಗಿ ಅವರಿಗೆ ಎಚ್ಚರವಾಯಿತು. ಆಗ ಅವರು ಪಶ್ಚಾತ್ತಾಪದ ಧ್ವನಿಯಿಂದ "ನಾನು ಎಂಥಾ ಕೆಲಸ ಮಾಡಿದೆ! ಕೈಯಲ್ಲಿ ಸ್ವಾಮಿಯ ಗ್ರಂಥವನ್ನು ಹಿಡಿದೂ, ನಿದ್ದೆಮಾಡಿ ಪುಸ್ತಕಕ್ಕೆ ಅಮಾಂಗಲ್ಯ ಮಾಡಿದೆ ನಲ್ಲಾ! ತಪ್ಪಾಯಿತು, ತಪ್ಪಾಯಿತು" ಎಂದುಕೊಂಡು, ಪುಸ್ತಕವನ್ನು ಕಣ್ಣಿಗೊತ್ತಿಕೊಂಡರು. ಬಳಿಕ—ನಿದ್ರೆಬಂದಿದ್ದಾಗ ತಿಳಿಯದೆ ಉಜ್ಜಿಕೊಂಡು

ಹಣೆಯ ಅಕ್ಷತೆಯೇನಾದರೂ ಉದುರಿಹೋಗಿದೆಯೋ ಏನೋ ಎಂದು ಹಣೆಯನ್ನು ಮುಟ್ಟಿ ನೋಡಿಕೊಂಡರು.

ಒಡನೆಯೇ ಅವರು "ಎಲೇ, ಎಲೇ, ಇಲ್ಲಿ ಬಾ, ಸ್ವಲ್ಪ" ಎಂದು ಕೂಗಿದರು. ಶುದ್ಧಾಚಮನಕ್ಕೆ ನೀರನ್ನು ತರಹೇಳಲು ಅವರು ತಮ್ಮ ಹೆಂಡತಿಯನ್ನು ಕರೆದರು. ಪಾರ್ವತಮ್ಮನವರು ಬರುವುದು ಸ್ವಲ್ಪ ತಡವಾಯಿತು. ಅದನ್ನು ನೋಡಿ, "ನಿನಗೆ ಈಚೆಗೆ ನನ್ನಲ್ಲಿ ಗೌರವವೇ ಕಡಮೆಯಾಗಿ ಹೋಯಿತು. ನಾನು ಕೂಗಿದ ಕೂಡಲೆ, ಮೊದಲಿನ ಹಾಗೆ ನೀನು ಬರೋದೇ ಇಲ್ಲ. ನಾನು ಶಾಸ್ತ್ರವಿರುದ್ಧವಾಗಿ ನಿನ್ನನ್ನು ಮದುವೆಯಾದ ತಪ್ಪಿನ ಫಲ. ನೀನೇನು ಮಾಡೀಯೆ?" ಎಂದು ಹೇಳಿ, ಭಟ್ಟರು ಸ್ವಲ್ಪ ನಕ್ಕರು. ಶಾಸ್ತ್ರವಿರುದ್ಧವಾದ ಮದುವೆಯೆಂಬುದರ ಅರ್ಥವೇನೆಂಬುದಾಗಿ ಪಾರ್ವತಮ್ಮನವರು ಪ್ರಶ್ನೆಮಾಡಿದರು. ಗಿರಿಭಟ್ಟರು "ಅದೇ! ಬೆಟ್ಟದ ಹೆಸರಿರೋಳು, ನದಿಯ ಹೆಸರಿರೋಳು ಮುಂತಾದೋರನ್ನೆಲ್ಲಾ ಮದುವೆಯಾಗಬಾರದೆಂತ ಶಾಸ್ತ್ರದಲ್ಲಿ ಹೇಳಿದೆ. ನಿನ್ನ ಹೆಸರಿಗೂ, ಪರ್ವತಕ್ಕೂ ಸಂಬಂಧವಿದೆ" ಎಂದರು. ಪಾರ್ವತಮ್ಮನವರೂ ಸೋಲಲಿಲ್ಲ. "ಗಿರೀ ಎಂದರೂ ಪರ್ವತವೇ ತಾನೇ! ನಿಮ್ಮ ಹೆಸರು ನೀವು ನೋಡಿಕೊಳ್ಳದೆ ಈ ಆಕ್ಷೇಪಣೆಯೇ? ಮನೆಗೆ ಸೊಸೆ ಬಂದಿದ್ದಾಳೆ. ಇನ್ನೂ ಈ ಹುಡುಗಾಟದ ಮಾತುಗಳೆ?" ಎಂದು ಉತ್ತರ ಕೊಟ್ಟು ಅವರೂ ನಕ್ಕರು. ಪಾರ್ವತಮ್ಮನವರು ನೀರನ್ನು ತಂದುಕೊಟ್ಟರು. ಶುದ್ಧಾಚಮನ ಮಾಡಿದ ಬಳಿಕ ಭಟ್ಟರು, "ನಿನ್ನ ಮುದ್ದಿನ ಮಗನಿಗೇನು, ಇವತ್ತು ಎಂದೂ ಇಲ್ಲದ ಓಡಾಟ! ಅವನ ಹುಚ್ಚು ಗೊತ್ತೇ ಇದೆ. ಯಾರೋ ಸಂಗೀತಗಾರರೋ, ಜಾಗಟೆ ಬಾರಿಸೋರೋ, ಪಿಳ್ಳಂಗೋವಿ ಊದೋರೋ ಬಂದಿರಬಹುದು; ಅಥವಾ ಬರುವುದರಲ್ಲಿರಬಹುದು. ನಮ್ಮ ದೇವರ ಸತ್ಯ ನನಗೆ ಗೊತ್ತಿಲ್ಲವೆ?"

**ಪಾರ್ವತಮ್ಮನವರು.**—"ಅವನು ನನಗೆ ಮಾತ್ರವೇ ಮುದ್ದಿನ ಮಗನೆ? ನೀವೂ ಮುದ್ದಿಸಿದರೆ ಬೇಡವೆಂದಿದೆಯೇ? ತಂದೆಯಂತೆ ಮಗ, ಗುರುವಿನಂತೆ ಶಿಷ್ಯ. ಗೊತ್ತೇ ಇದೆ. ಹಿಂದೆ ವೇದವನ್ನ ಕಲಿಯುವ ಹುಚ್ಚು ಹಿಡಿದು, ಮನೆಯಲ್ಲಿ ಹೇಳದೆ ಕೇಳದೆ ನೀವು ಮೈಸೂರಿಗೆ

ಓಡಿಹೋಗಿ ಪಾಠಶಾಲೆಗೆ ಸೇರಲಿಲ್ಲವೆ? ಇದನ್ನು ನೀವೇ ಹೇಳಿದ್ದೀರಿ. ತಂದೆಯು 'ದೂರದ ಊರು; ಹೋಗಬೇಡ' ಎಂದರೂ ನೀವು ಕೇಳಿದಿರಾ? ನಿಮ್ಮ ಮಗನಿಗೆ ಸಂಗೀತದಲ್ಲಿ ಆಸಕ್ತಿ ಹುಟ್ಟಿದೆ.''

**ಗಿರಿಭಟ್ಟರು.**—''ಇಂಥಾ ಎಷ್ಟು ಸಂಗೀತ ಶಾಸ್ತ್ರಗಳನ್ನು ಹಾಕಿದರೆ ಒಂದು ವೇದವಾದೀತು? ಮುಖ್ಯವಾಗಿ ಹುಡುಗ ವೇದವನ್ನು ಪೂರ್ತಿ ಕಲಿಯದೆ ಕೆಟ್ಟುಹೋಗುತ್ತಾನೆ. ದಿನಕ್ಕೆ ಎರಡೇ ಗಂಟೆ ಹೇಳಿಸಿಕೋತಾನೆ. ನನಗೆ ಬರುವಷ್ಟನ್ನೂ ಅರೆದು ಹುಯ್ಯೋಣವೆಂದರೆ ಮಾರ್ಗವಿಲ್ಲ. ವೇದಕ್ಕಿಂತ ಸಂಗೀತವೆ? ಸಾಮಗಾನಕ್ಕಿಂತಲೂ ಇನ್ನು ಗಾನವೆ?''

**ಪಾರ್ವತಮ್ಮನವರು.**—(ನಕ್ಕು) ''ಸಾಮಗಾನವಲ್ಲ. ಸಾಮ ರೋದನವೆನ್ನಿ. ಮೊನ್ನೆ ಸಾಹುಕಾರ ಶಾಮಣ್ಣನವರ ಮನೇಲಿ ಮುಂಜಿಯಾದಾಗ ಪುರೋಹಿತರು ಅಳುವುದು ಪೂರೈಸುತ್ತೆಯೇ ಅನ್ನಿಸಿಬಿಟ್ಟಿತು. ಬೆಟ್ಟದ ಸಂದಿಗೆ ಕೈಸಿಕ್ಕಿಸಿಕೊಂಡರೆ ಅರಚಿ ಅಳೋಕೆ ಸರಿಯಾದ ವೇದ ಅಂದರೆ ಸಾಮವೇದ. ಅದಕ್ಕೂ ಸಂಗೀತಕ್ಕೂ ಚೆನ್ನಾಗಿ ಗಂಟು ಹಾಕಿದಿರಿ. ಮೊನ್ನೆ ನಮ್ಮ ಮಗು 'ಕೊಳಲನೂದುವ ಚದುರನ್ಯಾರೇ ಪೇಳಮ್ಮಯ್ಯಾ' ಅಂತ ಹಾಡಿದನಲ್ಲಾ. ಅದನ್ನು ಕೇಳಿ, ಎಷ್ಟು ಜನ ಹಿಗ್ಗಿದರು! ಅವನು 'ನಾದದಿ ತುಂಬಿತು ಗೋವರ್ಧನಗಿರಿ। ಯಾದವಕುಲ ಜನಾವರಿಸಿತು ಖಗಗಣ' ಎಂಬುದನ್ನೂ, 'ಮೇವು ಮರೆತವಾ ಗೋವುಗಳೆಲ್ಲವು। ಸಾವಧಾನದಿ ಹರಿದಳು ಯಮುನಾ' ಎಂಬುದನ್ನೂ ಹಾಡಿದಾಗ ನೀವು ಕೂಡ ತಲೆದೂಗಿ, 'ಅಯ್ಯೋ ಕೃಷ್ಣ' ಎಂದಿರಿ. ಗೋವರ್ಧನಗಿರಿ ಕೊಳಲು ನಾದದಲ್ಲಿ ತುಂಬಿತೋ ತುಂಬಲಿಲ್ಲವೋ ನಾನು ಕಾಣೆ. ನಮ್ಮ ಹುಡುಗ ತನ್ನ ಕೋಗಿಲೆ ಕಂಠದಲ್ಲಿ ಅದನ್ನು ಹೇಳಿದಾಗ ನನ್ನ ಮನಸ್ಸೇನೋ ನಾದದಿಂದ ತುಂಬಿ ತುಳುಕಿ ಹೋಯಿತು.''

ಪಾರ್ವತಮ್ಮನವರು ಹೀಗೆ ಹೇಳುತ್ತಿದ್ದುದನ್ನು ಕೇಳಿ ಅವರ ಸೊಸೆಯು ಆನಂದದಿಂದ ಹಿಗ್ಗುತ್ತ ನಡುಮನೆಯಿಂದ ಈಚೆಗೆ ಇಣಿಕಿ ನೋಡಿದಳು. ಒಡನೆಯೇ ನಾಚಿಕೆಯಿಂದಲೋ, ಅತ್ತೆಮಾವಂದಿರು ಕಂಡಾರೆಂಬ ಭಾವನೆಯಿಂದಲೋ ಅವಳು ತಲೆಯನ್ನು ಒಳಕ್ಕೆಳೆದು

ಕೊಂಡಳು. ಗಿರಿಭಟ್ಟರಿಗೆ ಸಂಗೀತದ ಮೇಲೆ ದ್ವೇಷವಿಲ್ಲ. ವೇದಕ್ಕಿಂತ ಅದು ಕೀಳೆಂಬುದು ಮಾತ್ರವೇ ಅವರ ಅಭಿಪ್ರಾಯ. ಅವರ ಮಗನಾದ ತಮ್ಮಾಭಟ್ಟನು ಸಂಗೀತಗಾರರು ಯಾರೇ ಊರಿಗೆ ಬಂದರೂ ಅವರ ಹಿಂದೆ ಓಡಾಡಿ, ಅವರನ್ನು ವಿಶೇಷ ಮನ್ನಣೆಯಿಂದ ಕಾಣುತ್ತಿದ್ದುದು ಮಾತ್ರ ಭಟ್ಟರಿಗೆ ಸರಿಬೀಳುತ್ತಿರಲಿಲ್ಲ. ಅವನು ಪೌರೋಹಿತ್ಯ ಮಾಡಿಸಿದ ಕಡೆ ಅವನಿಗೆ ಎಷ್ಟು ಸಂಭಾವನೆಯು ಬಂದಿತೆಂಬ ಲೆಕ್ಕವನ್ನೇ ಅವರು ಕೇಳುತ್ತಿರಲಿಲ್ಲ. ಅವನು ಆ ಹಣವನ್ನು ಕೂಡಿಟ್ಟುಕೊಂಡಿದ್ದು ಸಂಗೀತ ಕಚೇರಿ ಮುಂತಾದವುಗಳಿಗೆ ವೆಚ್ಚ ಮಾಡುತ್ತಿದ್ದನು. ಅದರಿಂದ ಅವರ ಮನಸ್ಸಿಗೆ ಅಸಮಾಧಾನ. ಆದರೂ ಹದಿನಾರು ವರುಷ ವಯಸ್ಸಾದ ಮೇಲೆ ಮಗನನ್ನೂ ಮಿತ್ರನಂತೆ ಕಾಣಬೇಕೆಂಬ ಶಾಸ್ತ್ರವಿಧಿಗೆ ಕಟ್ಟುಬಿದ್ದು ಗಿರಿ ಭಟ್ಟರು ನಿರ್ವಾಹವಿಲ್ಲದೆ ಸುಮ್ಮನಿರುತ್ತಿದ್ದರು. ಗಿರಿಭಟ್ಟರಿಗೆ ಒಂದು ಶಂಕೆಯೂ ಇದ್ದಿತು. ತಮ್ಮ ಹಣವು ಮಾತ್ರ ತಮ್ಮಾಭಟ್ಟನಿಗೆ ಸಿಕ್ಕಿ ಬಿಟ್ಟರೆ, ಸಂಗೀತಗಾರರ ದಂಡನ್ನು ಆಂಬೊಡೆಗಳ ರಾಸಿಯ ಮೇಲೆ ಕುಳ್ಳಿರಿಸಿ ಹಾಲುಕೀರಿನ ಮಡುವಿನಲ್ಲಿ ಮುಳುಗಿಸುವುದಕ್ಕೇ ಅವನು ಅದೆಲ್ಲವನ್ನೂ ವೆಚ್ಚ ಮಾಡಿಬಿಡುವನೆಂಬುದೇ ಅವರ ಶಂಕೆ. ಆದಕಾರಣ ಆಸ್ತಿಯಲ್ಲಿ ಅರ್ಧಭಾಗವನ್ನು ಹೆಂಡತಿಯ ಹೆಸರಿಗೂ, ಉಳಿದ ಅರ್ಧಭಾಗ ವನ್ನು ಸೊಸೆಯ ಹೆಸರಿಗೂ ಉಯಿಲು ಬರೆದಿಡಬೇಕೆಂದೂ ಸಹ ಅವರು ಸಂಕಲ್ಪಮಾಡಿದ್ದರು. ಈ ವಿಷಯವು ಹಾಗಿರಲಿ. ನಾನು ಮೇಲೆ ಅರಿಕೆ ಮಾಡಿದಂತೆ ಭಟ್ಟರಿಗೂ ಅವರ ಹೆಂಡತಿಗೂ ಸಂಭಾಷಣೆಯು ನಡೆದುದು ಸೋಮವಾರದ ದಿನ. ತಮ್ಮಾಭಟ್ಟನ ಸಡಗರವೂ ಆ ದಿನವೇ ಮೊದಲಾಗಿದ್ದಿತು.

ಮಂಗಳವಾರ ಬೆಳಗಿನಿಂದಲಂತು, ಅವನ ಸಡಗರವು ಮತ್ತಷ್ಟು ಹೆಚ್ಚಿತು. ರಂಗಪ್ಪನೂ ಕಿಟ್ಟಯ್ಯನೂ ಅವನಿಗೆ ಹಿಮ್ಮೇಳವಾಗಿ ನಿಂತಿದ್ದರು. ತಮ್ಮಾಭಟ್ಟನು ಯಾವ ಕೆಲಸವನ್ನು ಹಿಡಿದರೂ ರಂಗಪ್ಪನು ಅವನಿಗೆ ಬಲಭುಜದಂತಿದ್ದನು. ಬುಧವಾರದ ದಿನ ಘನ ಸಂಗೀತ. ಅದಕ್ಕಾಗಿ ವಿಜೃಂಭಣೆಯಿಂದ ಏರ್ಪಾಡು ಮಾಡುವ ಸಡಗರ. ಸಂಗೀತ ವೆಂದರೂ ಸಾಮಾನ್ಯ ಸಂಗೀತವಲ್ಲ. ಶ್ರೀಮನ್ ಮಹಾರಾಜರವರ

ಆಸ್ಥಾನ ವಿದ್ವಾಂಸರಲ್ಲಿ ಹೆಸರಾದವರೊಬ್ಬರ ಸಂಗೀತ. ಅವರ ಬಂಧು ಗಳೊಬ್ಬರು ಈ ಊರಿನಲ್ಲಿದ್ದರು. ಅವರು ಆಗಾಗ ಬಂದುಹೋಗುವ ಪದ್ಧತಿ. ಅವರು ಬಂದಾಗಲೆಲ್ಲ ಸಂಗೀತವು ನಡೆಯುವುದು. ಆದರೆ, ಕೆಲವರಿಗೆ ಮಾತ್ರವೇ ಅದನ್ನು ಕೇಳುವ ಭಾಗ್ಯವಿದ್ದಿತು ; ಆಪ್ತವರ್ಗದವರಿಗೆ ಮಾತ್ರವೇ ಅಗ್ಗೆ ಅವಕಾಶ. ಆಗ ತಮ್ಮಾಭಟ್ಟನ ಸಂತೋಷಕ್ಕೆ ಪಾರವೇ ಇಲ್ಲ. ಹಸಿದ ಹುಲ್ಲೆಯ ಕರುವಿಗೆ ಎಳೆಯ ಗರಿಕೆಯು ಸಿಕ್ಕಿದಹಾಗೆ.

ತಮ್ಮಾಭಟ್ಟನು ಅವರನ್ನು "ಗುರುಗಳೇ, ಗುರುಗಳೇ" ಎಂದು ಸಂಬೋಧಿಸುತ್ತಿದ್ದನು. ಭಟ್ಟನು ಅವರ ಸಂಗೀತಕ್ಕೆ ಮನಸೋತು ಅವರನ್ನು ಹಾಗೆ ಕರೆಯುತ್ತಿರಲಿಲ್ಲ. ಅವರ ಗುಣಕ್ಕೋಸ್ಕರ ಅವನು ಅವರನ್ನು ಹಾಗೆ ಕರೆಯುತ್ತಿದ್ದನು. ಪಿಟೀಲು ಅಯ್ಯಣ್ಣನು ಒಂದು ದಿನ ಕಾಂಭೋಜಿ ರಾಗವನ್ನು ಬಾರಿಸಿದ, ಈ ವಿದ್ವಾಂಸರೆದುರಿಗೆ. ಅವರಿಗೆ ಆನಂದವಾಯಿತು. ಅವರು ಹಾಕಿಕೊಂಡಿದ್ದುದು ಮಲ್ಲಿನ ಹೊಸ ಷರಟು. ಬಡವನಾದ ಅಯ್ಯಣ್ಣನದು ಕೊಳಕಿನಿಂದ ತುಂಬಿದ ಹರಕು ಷರಟು. ಅವರು ಈ ಹೊರಗಿನ ವೇಷಕ್ಕೆ ಬೆಲೆಯನ್ನು ಕೊಡದೆ, ಅಯ್ಯಣ್ಣನನ್ನು ಬಾಚಿ ತಬ್ಬಿಕೊಂಡರು. ನೋಡಿದರೆ ಅವರ ಕಣ್ಣಿನಲ್ಲಿ ನೀರು. ಅವರು "ಆನಂದರಸವು ಹೃದಯವನ್ನೇ ತುಂಬಿ ಕಣ್ಣಿಗೂ ಹರಿದು ಕೋಡಿಬೀಳು ವಂತೆ ಮಾಡಿದ ಪುಣ್ಯಾತ್ಮ! ನೀನು ನೂರು ವರುಷ ಬಾಳು ನಮ್ಮಪ್ಪ" ಎಂದು ಹರಸಿದರು. ಅಲ್ಲದೆ, ಮರುದಿವಸವೇ ಅವರು ಅಯ್ಯಣ್ಣನಿಗೆ ಹೊಸ ಬಟ್ಟೆಗಳನ್ನು ತರಿಸಿಕೊಟ್ಟರು. ಬಡವರು, ಬಲ್ಲಿದರು, ಬಲ್ಲವರು ಎಂಬ ಮೂರು ಬಕಾರಕ್ಕೂ ಈಚೆಗೆ ಕೀಲುತಪ್ಪಿ ಹೋದುದೇ ನಮ್ಮ ದೇಶದ ಕಷ್ಟಗಳಿಗೆ ಕಾರಣವೆಂಬುದಾಗಿ ತಮ್ಮಾಭಟ್ಟನು ಆಗಾಗ ಹೇಳುತ್ತಲೇ ಇದ್ದನು. ಅವನು ಬಕಾರಕ್ಕಿದ್ದ ಅಂದಿನ ಸಾಮರಸ್ಯವನ್ನು ಕಂಡು ತಲೆದೂಗಿದನು.

ಅಯ್ಯಣ್ಣನು ಸಾಮಾನ್ಯ ಮನುಷ್ಯನೆಂದು ಯಾರೂ ಭಾವಿಸ ಕೂಡದು. ಅವನು ಬಹಳ ಬುದ್ಧಿವಂತ: ಆದರೆ ತೀರ ಬಡವ. ಅವನು ಗಂಧರ್ವ ವೇದವಾದ ಸಂಗೀತವನ್ನು ಮಾರಿ ಹೊಟ್ಟೆಯನ್ನು ಹೊರೆದುಕೊಳ್ಳುವುದು ಮಹಾಪಾಪವೆಂದೆಣಿಸಿದ್ದನು. ಬಡತನವನ್ನಪ್ಪಿ

ಭಿಕ್ಷಾನ್ನದಿಂದ ಜೀವಿಸುತ್ತಿದ್ದನು. ಮದರಾಸಿನಿಂದ ಬಂದಿದ್ದ ದೊಡ್ಡ ಭಾಗವತರೊಬ್ಬರ ಸಂಗೀತಕ್ಕೆ ಕೂಡ ಪಿಟೀಲನ್ನು ಬಾರಿಸಿ "ಸೈ" ಎನ್ನಿಸಿ ಕೊಂಡಿದ್ದವನು ಅಯ್ಯಣ್ಣ. ಅಯ್ಯರ ಭಾವನಿಗೆ ನಮ್ಮ ಕಸಬೆಯಲ್ಲಿಯೇ ಕೆಲಸವಿದ್ದಿತು. ಅವರ ಸಂಗೀತ ಕಚೇರಿಯು ನಡೆದ ದಿನ (ಶಾಪದಿಂದ) ಭೂತವಾಗಿದ್ದ ಯಾವನೋ ಗಂಧರ್ವನು ಅಯ್ಯಣ್ಣನ ಮೇಲೆ ಆವೇಶ ವಾಗಿರಬೇಕು. ಇಲ್ಲವಾದರೆ ಮರದ ಮುರುಕಿನಮೇಲೆ ತಂತಿಗಳಲ್ಲಿ ಹಾಗೆ ನಾದವು ಹೊರಡುತ್ತಿರಲಿಲ್ಲ. ಸಂಗೀತವು ಮುಗಿದಮೇಲೆ ಕೆಲವರು ವಿಮರ್ಶಕರು "ನಮ್ಮೂರ ಅಯ್ಯಣ್ಣನ ಪಿಟೀಲಿಗೆ ಹಾಡಿದರು. ಅವನನ್ನೇ ನೋಲಿಸಲಿಲ್ಲ. ಅಯ್ಯರ ಸಂಗೀತ ಅಷ್ಟೇನೂ ಹೆಚ್ಚಿನದಲ್ಲವೆಂದು ತೋರುತ್ತೆ" ಎಂದರು. ಅಯ್ಯರವರ ಹಿಂದೆ ಕುಳಿತೇ ಹಾಗೆನ್ನಬೇಕೆ? ಅಯ್ಯರು ಸ್ವಲ್ಪ ರೇಗಿ, "ಸ್ನೇಹಿತರ ಬಲವಂತಕ್ಕೆ ಇಲ್ಲಿ ಹಾಡಿದೆ. ನನಗೆ ತಂಜಾವೂರಿನಲ್ಲಿ ಕೂಡ ತೋಡಾ ಬಂದಿದೆ. ನೀವೇನೂ ಹೊಸದಾಗಿ ಸರ್ಟಿಫಿಕೇಟು ಕೊಡಬೇಕಾಗಿಲ್ಲ. ನನ್ನ ಜೊತೆಗೆ ಪಿಟೀಲು ಬಾರಿಸಿದ ಇಂಥಾ ರತ್ನ ಈ ಊರಿನಲ್ಲಿದೆಯಲ್ಲಾ ಎಂತ ಆನಂದಪಡಿರಿ" ಎಂದರು. ಇದರ ಫಲಿತಾಂಶವಾಗಿ, ಅಯ್ಯಣ್ಣ ಭಿಕ್ಷಾನ್ನಕ್ಕೆ ಬಂದರೆ "ಕೋಟೆಯ ಕೋಣ"ನೆಂದು ಕರೆದು ತಂಗಳು ಸಾರು ಹಾಕುತ್ತಿದ್ದ ಮನೆಯವರೂ ಸಹ, ಅವನಿಗೆ ಆದರವನ್ನು ತೋರಿಸಿ ಬಿಸಿಯ ಅಡಿಗೆಯ ಭಿಕ್ಷವನ್ನು ನೀಡಲಾರಂಭಿಸಿದರು. ಇದು ಹಾಗಿರಲಿ. ಮೇಲೆ ಹೇಳಿದಂತೆ ಆಸ್ಥಾನ ವಿದ್ವಾಂಸರ ಸದ್ಗುಣಕ್ಕೆ ಮನಸೋತು, ತಮ್ಮಾಭಟ್ಟನು ಅವರನ್ನು "ಗುರುಗಳೇ" ಎಂದು ಕರೆಯಲಾರಂಭಿಸಿದ್ದನು. ಗುರುಶಿಷ್ಯರ ದಯದಿಂದ ಅಯ್ಯಣ್ಣನು ಭಿಕ್ಷಾನ್ನಕ್ಕೆ ಹೋಗುವುದು ತಪ್ಪಿತು.

ಅಂತಹ "ಗುರು"ಗಳ ಸಂಗೀತಸುಧೆಯನ್ನು ಊರಿನವರೆಲ್ಲರೂ ಸೇವಿಸಿ ತೃಪ್ತರಾಗುವಂತೆ ಮಾಡಬೇಕೆಂಬುದು ತಮ್ಮಾಭಟ್ಟನ ಉದ್ದೇಶ. ಅದಕ್ಕೋಸ್ಕರವೇ ನೀಲಕಂಠೇಶ್ವರನ ದೇವಸ್ಥಾನಕ್ಕೆ ನಾರಣೆಕಾರಣೆಗಳು. ಬುಧವಾರದ ದಿನ ಸಂಗೀತ ಕಚೇರಿ. "ಗುರು"ಗಳ ಯೋಗ್ಯತೆಗೆ ತಕ್ಕಷ್ಟು ವಿಜೃಂಭಣೆಯಿಂದ ಅದನ್ನು ನಡೆಯಿಸುವ ಸಡಗರ. ತಮ್ಮಾಭಟ್ಟನೂ ಅವನ ಗೆಳೆಯರಿಬ್ಬರೂ ಸೇರಿ ಎಲ್ಲ ಪರಿಕರಣಗಳನ್ನೂ ಅಣಿಮಾಡಿಕೊಂಡರು.

ವೀಳೆಯದೆಲೆಯನ್ನೂ ಹೂವನ್ನೂ ಮೈಸೂರಿನಿಂದ ತರಿಸುವ ಏರ್ಪಾಡು ಕೂಡ ನಡೆಯಿತು. ಮೂವರು ಉತ್ಸಾಹಸಂಪನ್ನರು ಸೇರಿದ ಮೇಲೆ ಕೇಳತಕ್ಕುದೇನಿದೆ? ಮಂಗಳವಾರದ ದಿನ ಉರಿಬಿಸಿಲಿನಲ್ಲಿಯೂ ಅವರ ಓಡಾಟವೇ. ಒಬ್ಬೊಬ್ಬರೂ ಒಂದೊಂದು ಕೆಲಸಕ್ಕೆ ಹೋಗಿದ್ದರು. ತಮ್ಮಾಭಟ್ಟನು ದೂರದಲ್ಲಿ ರಂಗಪ್ಪನನ್ನು ಕಂಡು, ಅವನ ಬಳಿಗೆ ದುಡ ದುಡನೆ ಓಡಿ, "ರಂಗಪ್ಪ, ರಂಗಪ್ಪ, ಏನಾಯಿತು? ಹಣ್ಣೋ, ಕಾಯೋ?" ಎಂದನು.

**ರಂಗಪ್ಪ.**—"ಒಳ್ಳೇ ಸಹವಾಸವಪ್ಪ ನಿನ್ನದು! ನಾನು ಹತ್ತಿರಕ್ಕೆ ಬರುವಷ್ಟರಲ್ಲಿಯೇ ಅವಸರವೆ? ಬೊಜ್ಜು ಮೈಯನ್ನು ಹೊರಲಾರದೆ ಹೊತ್ತುಕೊಂಡು ಓಡಿಬಂದಿದ್ದೀಯೆ! ಸಾಹುಕಾರರ ಮನೆಯ ಜಮಖಾನ ಸಿಕ್ಕುವಂತಿಲ್ಲ."

**ತಮ್ಮಾಭಟ್ಟ.**—"ಅವರ ಮನೆಯ ಜಮಖಾನ ಸಿಕ್ಕಿದ್ದರೆ ಬಹಳ ಚೆನ್ನಾಗಿತ್ತು. ಅಖಂಡವಾಗಿ ಹಾಸಬಹುದಾಗಿತ್ತು. ಸಬ್-ರಿಜಿಸ್ಟ್ರಾರರ ಮನೆಯಲ್ಲಿ ಒಂದು ಜಮಖಾನವಿದೆಯಂತೆ. ಅವರ ಹೆಂಡತಿಗೂ ನಮ್ಮ ತಾಯಿಗೂ ಪರಿಚಯ ಚೆನ್ನಾಗಿದೆ. ಅದನ್ನು ತರಿಸೋಣ. ನೀನು ದಿಂಬುಗಳ ಬೇಟೆಗೆ ಹೊರಡು. ಒಟ್ಟಿಯು ಮಾಸಿಲ್ಲದ ದಿಂಬುಗಳಿಗೇ ಹುಡುಕಾಡಬೇಡ, ಮಾಸಿದ್ದರೆ, ನಮ್ಮ ಪಂಚೆಗಳನ್ನೇ ಅವಕ್ಕೆ ಸುತ್ತಿಟ್ಟು ಬಿಡೋಣ. ನಾಡಿದ್ದು ಕೆರೆಗೆ ಹೋಗಿ ಒಗೆದರಾಯಿತು. ನಾಳೆಯ ದಿನದ ಕೆಲಸವೊಂದು ಗುರುಗಳ ಯೋಗ್ಯತೆಗೆ ತಕ್ಕಹಾಗೆ ನಡೆದರೆ ಸಾಕು. ಇಷ್ಟು ನಡೆಯಿಸಿಕೊಡು ದೇವರೇ ಎಂತ ನಾನು ಮೊರೆಯಿಡುತ್ತಾ ಇದ್ದೇನೆ."

**ರಂಗಪ್ಪ.**—"ಭಟ್ಟ! ನಾನೂ ನೀನೂ ಸೇರಿದರೆ ಒಂದು ರಾತ್ರಿಯಲ್ಲೇ ಒಂದು ಮನೆಯನ್ನು ಕಟ್ಟಿಬಿಡಬಹುದು. ಇದಿರಲಿ. ನಾಳೇ ಅಯ್ಯಣ್ಣ ಏಟೀಲೇನೋ ಎಳೆದು ಕೆಡವಿಬಿಡುತ್ತಾನೆ. ಮೊದಲೇ ಅವನು ಬರಹುಚ್ಚಿನ ಮನುಷ್ಯ. ಇನ್ನು ನಾಳೆ ಕೇಳಬೇಕೆ? ಹಸಿದ ಬೆಕ್ಕಿಗೆ ಬೆಣ್ಣೆಯೇ ಸಿಕ್ಕಿದ ಹಾಗೆ. ಮೃದಂಗದೋನದೇ ನನಗೆ ಯೋಚನೆ."

**ತಮ್ಮಾಭಟ್ಟ.**—"ಅವನೂ ತುಂಬ ಉತ್ಸಾಹದಲ್ಲಿದ್ದಾನಯ್ಯ. ಇದರ ಮೇಲೆ ಒಳ್ಳೆಯ ವಿನಯವಂತ. ನಾಳೆ ಮೃದಂಗ ಬಾರಿಸೋದೆ

ಕನಕಾಭಿಷೇಕವೆಂತ ತಿಳಿದಿದ್ದಾನೆ! ಇಂಥ ಸುಯೋಗ ಒದಗಿಸಿಕೊಟ್ರಲ್ಲಾ ಎಂದು ಹೇಳಿ ನನಗೆ ಕೈ ಮುಗಿದ. ನಾನು ಅವನ ಬೆನ್ನು ತಟ್ಟಿದೆ. 'ನೀನು ಗುರುಗಳೆದುರಿಗೆ ಮೃದಂಗ ಬಾರಿಸಿದ ದೊಡ್ಡ ಹೆಸರು, ನಿನಗೊಬ್ಬನಿಗೇ ಅಲ್ಲಯ್ಯ, ಇಂಥವನು ನಮ್ಮೂರಿನಲ್ಲಿದ್ದಾನಲ್ಲಾ ಎಂತ ನಾವೂ ಹಿಗ್ಗಬೇಕು' ಎಂದೆ. ಇಷ್ಟರಮೇಲೂ ಅವನು ಸ್ವಲ್ಪ ಊನವಾಗಿ ಮೃದಂಗವನ್ನು ಬಾರಿಸಿದನೆನ್ನು. ಅದರಲ್ಲೇನು ತಪ್ಪು? ನಡೆಯುವವನು ಎಡವಿದರೆ ಮುಳುಗಿಹೋದ್ದೇನು? ಕಷ್ಟಪಡದೆ—ಉಳಿಯ ಪೆಟ್ಟು ಬೀಳದೆ—ಯಾವುದೂ ಸಾಗದು. ಗುರುಗಳೂ ಎಷ್ಟು ಕಷ್ಟಪಟ್ಟಿದ್ದಾರೋ! ವಿದ್ಯೆಯೆಂದರೆ, ಅದೂ ಒಂದು ತಪಸ್ಸು. ಬೆಟ್ಟದ ಕುಂಭಿಯನ್ನು ತಲಪುವುದು ಬಾಯಿಮಾತೆ?''

ಆ ಬಳಿಕ ತಮ್ಮಾಭಟ್ಟನು ಮನೆಗೆ ಹೋದನು. ಸಾಲದ ಪತ್ರವನ್ನು ಬರೆಯಿಸಿಕೊಂಡು ಹಣವನ್ನು ಕೊಡಲು ಗಿರಿಭಟ್ಟರು ಶಾನುಭೋಗರ ಮನೆಗೆ ಹೋಗಿದ್ದರು. ಅತ್ತೆ ಸೊಸೆಯರಿಬ್ಬರೂ ಗೋಧಿಯನ್ನು ಬೀಸುತ್ತಿದ್ದರು. ತನಗೆ ಎಷ್ಟು ಶಕ್ತಿಯಿರುವುದೆಂಬುದನ್ನು ಸೊಸೆಗೆ ಮಂದಟ್ಟು ಮಾಡಿಕೊಡುವುದಕ್ಕಾಗಿ ಅತ್ತೆಯು ಬಿರುಸಿನಿಂದ ಬೀಸತೊಡಗಿದಳು. ಸೊಸೆಯೂ ಹಿಂದೆ ಬೀಳಲಿಲ್ಲ. ತನಗೆ ಕೆಲಸದಲ್ಲಿ ಎಷ್ಟು ಉತ್ಸಾಹವೆಂಬುದನ್ನು ತೋರ್ಪಡಿಸಿಕೊಳ್ಳಲು ಅವಳೂ ಎಳೆದೆಳೆದು ಬೀಸತೊಡಗಿದಳು. ''ತಡೆಯಲಾರೆ, ತಾಯಿಯರಿರಾ!'' ಎಂದು ಹೇಳುವುದೋ ಎನ್ನುವಹಾಗೆ ಬೀಸುವಕಲ್ಲು ರಾಗವನ್ನು ತೆಗೆದು ಗಿರಗಿರನೆ ಸುತ್ತುತ್ತಿದ್ದಿತು. ಅತ್ತೆ ಸೊಸೆಯರ ಹುಮ್ಮಸ್ಸಿನ ದೆಸೆಯಿಂದ ಬೀಸುವ ಕಲ್ಲಿನ ಗೂಟವೇ ಕಿತ್ತುಹೋಯಿತು. ಒಂದೊಂದು ಗೋಧಿಯು ಎರಡೆರಡೇ ಭಾಗವಾಯಿತು. ಇದನ್ನು ಕಂಡು ಅತ್ತೆ ಸೊಸೆಯರಿಬ್ಬರಿಗೂ ನಗು. ಇಬ್ಬರದೂ ತಪ್ಪೆಂದು ಇಬ್ಬರಿಗೂ ಗೊತ್ತು. ಅತ್ತೆಯು 'ಇನ್ನು ಸರಿಯಾಗಿ ಬೀಸೋಣಮ್ಮ' ಎಂದು ಹೇಳಿ ಕಲ್ಲಿಗೆ ಗೂಟವನ್ನು ಪಟ್ಟಿದರು. ಅಷ್ಟರಲ್ಲಿ ಗಂಡನು ಬಂದುದನ್ನು ನೋಡಿ ನವವಧುವಾದ ಸೀತಮ್ಮನು ಸರಕ್ಕನೆ ಎದ್ದು ನಿಂತಳು. ಒಂದೆರಡು ನಿಮಿಷದಲ್ಲಿಯೇ ಮತ್ತೆ ಬೀಸುವಕಲ್ಲಿನ ರಾಗಕ್ಕೆ ಪ್ರಾರಂಭವಾಯಿತು.

ಪಾರ್ವತಮ್ಮನವರು, "ಮಗು! ಇದೇನು, ಇಷ್ಟೊಂದು ಓಡಾಟ?" ಎಂದರು. ತಾಯಿಯ ಬಳಿಯಲ್ಲಿ ಸಾವಧಾನದಿಂದ ಕುಳಿತು ಜಮುಖಾನದ ಜಪಮಾಡಲು ಬಂದಿದ್ದ ತಮ್ಮಾಭಟ್ಟನಿಗೆ ಸರಿಯಾದ ಸನ್ನಿವೇಶವೇ ಸಿಕ್ಕಿದ ಹಾಗಾಯಿತು. ವೈದ್ಯನನ್ನು ಕರೆದು ಬರಲು ಹೊರಟವರೆದುರಿಗೆ ಪೂರ್ಣ ಕುಂಭಗಳು ಬಂದಂತಾಯಿತು. ಭಟ್ಟನು ಪದ್ಮಾಸನವನ್ನು ಹಾಕಿ ಕುಳಿತೇಬಿಟ್ಟನು. ಸೊಸೆಯು ಅತ್ತೆಗೆ ಗೋಚರವಿಲ್ಲವೆಂದು ತಿಳಿದು, ಗಂಡನ ಮುಖವನ್ನು ನೋಡಿ ಮುಗುಳು ನಗೆಯನ್ನು ಬೀರಲಾರಂಭಿಸಿದಳು. ಅತ್ತೆಯು ಅದನ್ನು ಕಂಡೂಕಾಣದಂತೆ ನಟಿಸಿ, "ನನಗೇ ಟೋಪಿ ಹಾಕುತ್ತಾಳಲ್ಲ" ಎಂದುಕೊಳ್ಳುತ್ತಿರುವರೋ ಎಂಬಂತೆ ನಗುತ್ತಿದ್ದರು. ತಮ್ಮಾಭಟ್ಟನ ಉತ್ಸಾಹಕ್ಕೆ ಎಣೆಯೇ ಇಲ್ಲ. ದೇವರ ಪೂಜೆಯ ಮಂತ್ರವನ್ನು ಕಲಿತ ಬ್ರಹ್ಮಚಾರಿಯು ಮೊಟ್ಟಮೊದಲನೆಯ ಸಾರಿ ದೇವತಾರ್ಚನೆ ಮಾಡಿ ಹಿರಿಯರಿಗೆ ತೀರ್ಥವನ್ನು ಕೊಡುವಾಗ ಹೆಮ್ಮೆಯಿಂದ ನಡಗರಪಡುವ ಹಾಗೆ ತಮ್ಮಾಭಟ್ಟನೂ ಉಬ್ಬಿಉಬ್ಬಿ, "ಅಮ್ಮಾ! ನಾಳೆ ನಮ್ಮ ಗುರುಗಳ ಸಂಗೀತ. ಅವರ ವಿಷಯ ಆಗಾಗ ನಿನಗೆ ಹೇಳಿಯೇ ಇದ್ದೀನಿ. ನೀವಿಬ್ಬರೂ ಬನ್ನಿ" ಎಂದನು.

**ಪಾರ್ವತಮ್ಮನವರು.**—"ಹೀನವಿದ್ಯೆ ಸಂಗೀತ; ವೇದವಾದರೆ ಹೆಚ್ಚು. ವೇದವನ್ನೇ ಕಲಿಯುವುದನ್ನು ಬಿಟ್ಟು ಸಂಗೀತಕ್ಕೆ ಹೀಗೇಕೆ ಕುಣಿಯುತ್ತೀಯೋ ಮಗು?"

**ತಮ್ಮಾಭಟ್ಟ.**—"ವೇದವನ್ನೂ ಕಲಿಯುತ್ತಿದ್ದೇನಲ್ಲ. ಸದಾ ಅದನ್ನೇ ಹಿಡಿದರೆ ತಲೆಯೇ ಚಿಟ್ಟು ಹಿಡಿದುಹೋಗುತ್ತೆ. ಇತರ ಹವ್ಯಾಸಗಳೂ ಇರಬೇಕಮ್ಮ. ವೇದಕ್ಕೆ ವೇದ ಹೆಚ್ಚು. ಸಂಗೀತಕ್ಕೆ ಸಂಗೀತ ಹೆಚ್ಚು. ಇವಕ್ಕೆ ಹೋಲಿಕೆ ಎಲ್ಲಿ? ದೇವರ ಮುಂದೆ 'ಸಂಗೀತಮವಧಾರಯ' ಎಂದು ಹೇಳಿ ಸಂಗೀತ ಸೇವೆಯನ್ನು ಸಮರ್ಪಿಸುವುದಿಲ್ಲವೆ? ವಿದ್ಯಾಭಿಮಾನಿಯಾದ ವಾಣಿಯ ಕೈಯಲ್ಲಿಯೇ ವೀಣೆಯಿಲ್ಲವೆ? ವಾಸುದೇವನೇ ವೇಣುವನ್ನು ಬಾರಿಸಲಿಲ್ಲವೆ? ತುಂಬುರು ನಾರದರು ಸ್ವಾಮಿಯ ಬಳಿಯಲ್ಲಿ ಗಾನಮಾಡುವುದಿಲ್ಲವೆ? ಹೀಗಿರುವಾಗ ಸಂಗೀತವು ಹೀನ ವಿದ್ಯೆಯೆಂದರೇನಮ್ಮ?"

**ಪಾರ್ವತಮ್ಮನವರು.**—"ಸಂಗೀತವನ್ನು ಕೇಳಿದರೆ ನಿನಗೆ ಹೇಗಾಗುವುದೋ ಮಗು?"

**ತಮ್ಮಾಭಟ್ಟ.**—"ಅದನ್ನು ಹೇಳತೀರದಮ್ಮ. ಸಂಗೀತವನ್ನು ಕೇಳುವಾಗ ನನ್ನ ಆತ್ಮವು ಹೇಗಿರುತ್ತೆ, ಬಲ್ಲೆಯಾ? ಒಂದು ಅತಿ ಸೂಕ್ಷ್ಮವಾದ ರಸಬುರುಡೆಯಿರಬೇಕು. ಅದು ಬಹಳ ಹಗುರವಾಗಿರಬೇಕು. ಸಂಗೀತಲಹರಿಯೆಂಬ ಮಂದಮಾರುತನ ಆಂದೋಳನಕ್ಕೆ ತಕ್ಕಹಾಗೆ ಅದು ನಾದ ನಭೋಮಂಡಲದಲ್ಲಿ ನರ್ತನ ಮಾಡಬೇಕು. ತನ್ನ ನರ್ತನದ ಗತಿಗೆ ತಕ್ಕಹಾಗೆ, ಆಯಾ ರಾಗದ ರಸಕ್ಕೆ ಸರಿಹೋಗುವ ಬಣ್ಣಗಳಿಂದ ದೇದೀಪ್ಯಮಾನವಾಗಿ ಅದು ನಭೋಮಂಡಲವನ್ನು ಬೆಳಗಿಸಬೇಕು. ತಾನು ಹೀಗೆ ಮಾಡುತ್ತಿರುವುದು ಅದಕ್ಕೆ ಗೊತ್ತಾಗಿರಬೇಕು. ಸಂಗೀತವನ್ನು ಕೇಳುವಾಗ ನನ್ನ ಜೀವವು ಅಂಥ ರಸಬುರುಡೆಯಾಗಿರುವುದಮ್ಮ. ಇದಿರಲಿ. ಮೊನ್ನೆ ನೋಡು. ಗುರುಗಳು 'ಶೃಂಗಾರಲಹರೀ ಶ್ರಿತಜನ ಶುಭಕರಿ' ಎಂಬ ಕೀರ್ತನೆಯನ್ನು ನೀಲಾಂಬರಿ ರಾಗದಲ್ಲಿ ಹಾಡಿದರು. ಆಗ ನಾನು ನಿನ್ನ ಮೂರ್ತಿಯನ್ನೇ ಮನಸ್ಸಿನಲ್ಲಿ ಧರಿಸಿ ಭಕ್ತಿಯಿಂದ ತಲೆದೂಗುತ್ತಿದ್ದೆ. ಆ ನೀಲಾಂಬರಿ ರಾಗದಲ್ಲಿ ಎಷ್ಟು ಸೊಗಸಮ್ಮ. ನಿನ್ನ ಗುಣವು ಎಷ್ಟು ಹೆಚ್ಚೋ, ಆ ರಾಗವೂ ಅಷ್ಟು ನಯ!"

**ಪಾರ್ವತಮ್ಮನವರು.**—"ನಾನು ಬೀಸುವಕಲ್ಲನ್ನು ತಿರುಗಿಸುತ್ತಿದ್ದಹಾಗೆಯೇ ನೆನೆಸಿಕೊಂಡೆಯೋ?"

**ತಮ್ಮಾಭಟ್ಟ.**—"ಹೋಗಮ್ಮ, ನೀನು ನಗುತ್ತೀಯೆ. ಕಂಡ ದೇವರನ್ನು ನೆನೆಸಿಕೊಳ್ಳದೆ ಕಾಣದ ದೇವರನ್ನು ನೆನೆಸಿಕೊಳ್ಳಬೇಕೆ? ನನಗೇನೋ ಆಗ ನಿನ್ನನ್ನೇ ಕಣ್ಣೆದುರಿಗೆ ತಂದು ನಿಲ್ಲಿಸಿದಹಾಗಿತ್ತು."

ತಮ್ಮ ಮಗನ ಮಾತುಗಳನ್ನು ಕೇಳಿ ಪಾರ್ವತಮ್ಮನವರಿಗೆ ಬಹಳ ಸಂತೋಷವಾಯಿತು. ಯಥಾಕಾಲದಲ್ಲಿ ಜಮಖಾನವೂ ಬಂದಿತು. ಭಟ್ಟನ ಮುಖವು ಊರಗಲವಾಯಿತು. ಹುಡುಗರು ಗೆದ್ದ ಗೋಲಿಯನ್ನು ಬಾಚಿಕೊಂಡು ಜೇಬಿಗೆ ಸೇರಿಸುವಹಾಗೆ, ಅವನು ಅದನ್ನು ಸರಕ್ಕನೆ ಬೆನ್ನಿಗೆ ಸೇರಿಸಿಕೊಂಡು ಹೊರಟುಹೋದನು. ಎಲ್ಲವೂ ಸರಿಹೋಯಿತು.

ಆದರೇನು? ತಮ್ಮಾಭಟ್ಟನು ಸಂಗೀತವನ್ನು ಕೇಳುವುದಕ್ಕಿಲ್ಲದಂತೆ ಅಡಚಣೆ ಯೊದಗಿತು. ಕಪಿನಿಗೌಡನೆಂಬವನೊಬ್ಬನು ಅಂದು ಸಾಯಂಕಾಲ ಗಿರಿಭಟ್ಟರಿಗೆ ಒಂದು ಕಾಗದವನ್ನು ತಂದುಕೊಟ್ಟು, "ಬುದ್ಧೀ! ಆಚೆ ಊರು ರಾಮಣ್ಣೋರು, ಈ ಕಾಗಜ ನಿಮುಗೆ ಕೊಡೋ ಅಂತ ಜವಾ ಬಂದಿ ದಿನ ಕೊಟ್ರು. ಈಗ್ಗೆ ನಾಲ್ಕೈದು ದಿನದ ಕೆಳಗೆ. ಇವತ್ತು ಸಂಜೇ ಒಳಗಾಗಿ ತಲುಪಿಸಿದ್ರೆ ಸರೀ ಅಂತ ಹೇಳಿದ್ರು. ಸಂಗೆ ಇನ್ನೂ ಮುಂಚೆ ಬರೋಕೆ ಆಗ್ಲಿಲ್ಲ" ಎಂದನು. (ಆ ವೇಳೆಗೆ ಗಿರಿಭಟ್ಟರೊಡನೆ ಪಾರ್ವತಮ್ಮ ನವರು ಸಂಗೀತದ ಸುದ್ದಿ, ಜಮುಖಾನದ ಮಾತು, ಇವೆಲ್ಲವನ್ನೂ ಹೇಳಿ ದ್ದರು.) ರಾಮಣ್ಣನವರು ಗಿರಿಭಟ್ಟರ ಗೃಹಸ್ಥರ ಗುಂಪಿಗೆ ಸೇರಿದವರು. ಅವರ ಮನೆಯಲ್ಲಿ ಮರುದಿವಸ ಶ್ರಾದ್ಧ. ಅವರಿರುವುದು ಹದಿನೈದು ಮೈಲಿಗಳ ದೂರದ ಊರಿನಲ್ಲಿ. ಗಿರಿಭಟ್ಟರು ರೋಗದಿಂದೆದ್ದು ಕೆಲವು ದಿನಗಳಾಗಿದ್ದುವು. ಅವರು ಹೋಗುವ ಹಾಗಿರಲಿಲ್ಲ. ಇದರ ಮೇಲೋ ಅವರು ಮರುದಿನ ಗಿರಿಜವಿಲಾಸ ಗೋಪಾಲರಾಯರ ಮನೆಯಲ್ಲಿ ಶ್ರಾದ್ಧ ಮಾಡಿಸಲು ಒಪ್ಪಿಕೊಂಡಿದ್ದರು. ರಾಯರಿಗೆ ವಿಲಾಸೆಯ ಬಿಂಕ; ಚಿಕ್ಕ ವಯಸ್ಸಿನ ತಮ್ಮಾಭಟ್ಟನ ಕಾಲನ್ನು ತೊಳೆದ ನೀರನ್ನು ತಲೆಗೆ ಪ್ರೋಕ್ಷಿಸಿ ಕೊಳ್ಳಲು ಅವರು ಒಪ್ಪಿದರೂ, ಅವರ ವಿಲಾಸೆಯು ಅದಕ್ಕೆ ಅವಕಾಶ ಕೊಡದು. ಆದುದರಿಂದ ಗಿರಿಭಟ್ಟರೇ ಶ್ರಾದ್ಧಕ್ಕೆ ಬರಬೇಕೆಂಬುದು ಅವರ ಇಚ್ಛೆ. ಭಟ್ಟರೂ ಮಾತು ಕೊಟ್ಟಿದ್ದರು.

ದೂರದ ಊರಿಗೆ ತಮ್ಮಾಭಟ್ಟನೇ ಹೊರಡಬೇಕೆಂದು ನಿರ್ಧಾರ ವಾಯಿತು. ಮಗನು ಸಂಗೀತವನ್ನು ಕೇಳದಂತೆ ವಿಘಾತವನ್ನೊಡ್ಡಲು ಭಟ್ಟರಿಗೆ ಇಷ್ಟವಿಲ್ಲ. ಆದರೆ ಬ್ರಾಹ್ಮಣ್ಯವನ್ನುಳಿಸಬೇಕಾದ ವಿಷಯ. ಇದರ ಮೇಲೋ, ದೂರದ ಊರಿಗೆ ಹೋಗಿ ಪೌರೋಹಿತ್ಯ ಮಾಡಿಸಲು ಯಾರೂ ಸಿಕ್ಕುವ ಹಾಗಿಲ್ಲ. ಅಂತು, ತಮ್ಮಾಭಟ್ಟನು ಹೊರಡಬೇಕಾಯಿತು. ಅವನು "ಮುಳುಗಿಹೋದವನಂತೆ" ತನ್ನ ಕೊಟಡಿಯಲ್ಲಿ ಕುಳಿತುಬಿಟ್ಟನು. ಸೀತಮ್ಮನು ಅವನ ಒಳಗೆ ಬಂದು ಬಹುವಾಗಿ ಸಮಾಧಾನವನ್ನು ಹೇಳಿದಳು. ಕೊನೆಗೆ, "ರಾಮದೇವರು ತಂದೆಯ ಮಾತಿಗೋಸ್ಕರ ಮುತ್ತಿನಂಥ ರಾಜ್ಯವನ್ನೇ ಬಿಟ್ಟು ಅರಣ್ಯಕ್ಕೆ ಹೋದರು. ಹದಿನಾಲ್ಕು

ವರುಷ ಕಾಡಿನಲ್ಲಿದ್ದರು. ನೀವು ಸಂಗೀತವನ್ನು ಬಿಟ್ಟು, ಒಂದು ದಿನದ ಮಟ್ಟಿಗೆ ಪರಸ್ಥಳಕ್ಕೆ ಹೋಗಿ ಬರಬಾರದೆ?'' ಎಂದಳು.

ತಮ್ಮಾಭಟ್ಟನು ನಿಟ್ಟುಸಿರನ್ನು ಬಿಟ್ಟು, ''ನೀನು ಚೆನ್ನಾಗಿ ಒಂದೇ ಮಾತಿನಲ್ಲಿ ಬುದ್ಧಿಯನ್ನು ಕಲಿಸಿದೆ'' ಎಂದನು. ಸೀತಮ್ಮನು ಅಳುತ್ತ ''ನಾನು ಚಿಕ್ಕವಳು. ಕ್ಷ–ಮಿ–ಸಿ–ಬಿ–ಡಿ. ನನ್ನಾಣೆಗೂ ನಾ–ನು–ಬು–ದ್ಧಿ–ಹೇ–ಳ–ಲಿ–ಲ್ಲ'' ಎಂದಳು. ತಮ್ಮಾಭಟ್ಟನು ''ಅಯ್ಯೋ ಪೆಚ್ಚು ಹುಡುಗಿ! ನಾನು ನಿನ್ನನ್ನು ಹೊಗಳಿದರೆ ನೀನು ಅಳುತ್ತೀ. ವಿನೋದದ ಮಾತಿಗೆ ವಿಪರೀತದ ಅರ್ಥ ಮಾಡಿಬಿಡೋದೆ? ನಿನ್ನಂಥ ಹುಡುಗಿಯನ್ನೇ ಕಾವ್ಯಗಳಲ್ಲಿ ಮುಗ್ಧೆಯೆಂದು ಕರೆಯುವುದು. ಇದೂ ಒಂದು ಬೈಗುಳವೆಂದು ಕೊಳ್ಳಬೇಡ. ಮುಗ್ಧೆಯೆಂದರೆ, ಕಪಟವನ್ನರಿಯದ, ಹೆಚ್ಚು ತಿಳಿವಳಿಕೆ ಯಿಲ್ಲದ, ಸರಳಸ್ವಭಾವದ, ಪುಟ್ಟ ಜಾಜಿಯ ಹೂವನ್ನು ಹೋಲುವ, ನಿನ್ನಂಥ ಒಳ್ಳೆಯ ಹುಡುಗಿಯೆಂದು ಅರ್ಥ'' ಎಂದು ಹೇಳಿದನು. ಈ ವರ್ಣನೆಯನ್ನು ಕೇಳಿ ಸೀತಮ್ಮನು ನಕ್ಕುಬಿಟ್ಟಳು. ಅವಳು ಅತ್ತುದು ಎಷ್ಟು ಬೇಗಲೋ, ನಕ್ಕುದೂ ಅಷ್ಟೇ ಬೇಗ. ಸೀತಮ್ಮನು ಪ್ರೀತಿಯಿಂದ ಭಟ್ಟನ ಬೆನ್ನಿನ ಮೇಲೆ ಕೈಯನ್ನಿಟ್ಟು ''ಸುಳ್ಳುಗಾರ ಹೊಗಳುಭಟ್ಟರೆಂದರೆ ನಿಮ್ಮಂಥವರೇ ಇರಬೇಕು. ನೀವು ಕಟ್ಟುಕಥೆಗಳನ್ನು ಬರೆಯಲು ತಕ್ಕವರು. ನಾಳೆ ಪುರೋಹಿತರಾಗುತ್ತೀರಷ್ಟೆ?'' ಎಂದಳು. ಬಿಟ್ಟಿದ್ದ ಗ್ರಹಣವು ಮತ್ತೆ ಹಿಡಿಯಿತು. ಅಲ್ಪಸ್ವಲ್ಪ ಮರೆಯಾಗಿದ್ದ ಮನೋವ್ಯಥೆಯು ಮತ್ತೆ ಅವನನ್ನು ಅಪ್ಪಳಿಸಿಕೊಂಡಿತು.

ಮಾರನೆಯ ದಿನ ಸಾಯಂಕಾಲ ಸಂಗೀತ ಕಚೇರಿಯ ಕಲಾಪವು ಪ್ರಾರಂಭವಾಯಿತು. ಅದರ ಸಂಬಂಧದಲ್ಲಿ ಫಲಾಹಾರದ ಏರ್ಪಾಡೂ ನಡೆದಿದ್ದಿತು. ಚಿಗುರುವೀಳೆಯದ ಸೊಂಪಿನ ಮಧ್ಯದಲ್ಲಿ—ಊದಕಡ್ಡಿಯ ಪರಿಮಳದ ಸೊಗಸಿನ ಮಧ್ಯದಲ್ಲಿ—ಅಮಲ್ದಾರರು ಮೊದಲುಗೊಂಡು ಆಕ್ಟ್ರಾಯಿ ಮುತ್ಸದ್ದಿ ಅಚ್ಚಪ್ಪನವರೆಗೂ ಎಲ್ಲರೂ ಅಂದಿನ ವಿತರಣೆಯನ್ನು ಹೊಗಳಿದರು. ಎಲ್ಲರ ಬಾಯಿಯಲ್ಲಿಯೂ ತಮ್ಮಾಭಟ್ಟ, ರಂಗಪ್ಪ, ಕಿಟ್ಟಯ್ಯ, ಈ ಮೂವರು ರಸಿಕತೆಯ ಪ್ರಸ್ತಾಪವೇ. ಭಟ್ಟನು ಊರಲ್ಲಿಲ್ಲದ ಕಾರಣ ವನ್ನು ರಂಗಪ್ಪನು ತಿಳಿಸಿದಮೇಲೆ ಅವನ ಹೊಗಳಿಕೆಯನ್ನು ಮತ್ತಷ್ಟು

ಹೆಚ್ಚುಮಾಡಿ ಎಲ್ಲರೂ ಪೇಚಾಡಿದರು. ಗಿರಿಜಮ್ಮನ ಗೋಪಾಲರಾಯರ ಮನೆಯಲ್ಲಿ ಶ್ರಾದ್ಧವನ್ನು ಮುಗಿಸಿಕೊಂಡು ಗಿರಿಭಟ್ಟರೂ ದೇವಸ್ಥಾನಕ್ಕೆ ಬಂದರು. ಮೂಡಿಯಲ್ಲಿಯೇ ಅವರು ಒಂದು ಕಂಬವನ್ನು ಒರಗಿಕೊಂಡು ದೂರವಾಗಿ ಕುಳಿತರು. ಮಗನ ಹೊಗಳಿಕೆಯನ್ನು ಕೇಳಿ ಅವರಿಗೂ ಆನಂದ. "ಪಾಪ! ಇಷ್ಟು ಕಲಾಪವನ್ನು ಹೂಡಿಯೂ ಹುಡುಗ ಹೊರಟುಹೋಗಬೇಕಾಗಿ ಬಂತು. ನಾನೂ ಸಂಗೀತಕ್ಕೆ ಹೋಗಬೇಕು, ಅದು ಅವನ ಕಿವಿಗೆ ಬಿದ್ದರೆ ಅವನಿಗೆ ಸಂತೋಷವಾಗಬಹುದು. ನಮ್ಮ ಹುಡುಗ ಈ ದಿನ ಹುಣ್ಣಿಮೆಯನ್ನು ಕಾಣುವುದಕ್ಕಿಲ್ಲದೆ ಹೋಯಿತು. ರತ್ನ, ರತ್ನದಂಥ ಹುಡುಗ" ಎಂದುಕೊಂಡು ಅವರೂ ಬಂದಿದ್ದರು.

ಸಂಗೀತಗಾರರು ಹಲವು ಕೃತಿಗಳನ್ನು ಮುಗಿಸಿ ಕಲ್ಯಾಣಿರಾಗದ ಆಲಾಪನೆಗೆ ಆರಂಭಿಸಿದ್ದಾರೆ. ಸಂಧ್ಯಾಕಾಲಕ್ಕೆ ವಿಹಾರದ ಮನೋಹರ ವಾದ ವೇಳೆ. ವೇಳೆಗೆ ತಕ್ಕ ರಾಗ. ರಾಗದ ಮಾಧುರ್ಯಕ್ಕೆ ತಕ್ಕಹಾಗಿದ್ದ ಗಂಧರ್ವ ಕಂಠ. ಆ ಕಂಠಕ್ಕೆ ತಕ್ಕಂತಿದ್ದ ವಿದ್ವಾಂಸಿಧಿ. ಪ್ರಾಕಾರದಲ್ಲಿ ಅರಳಿದ್ದ ಪಾರಿಜಾತ ಪುಷ್ಪಗಳ ಪರಿಮಳವನ್ನು ತಂದೊಪ್ಪಿಸುವ ಮಂದ ಮಾರುತ. ಸಭಿಕರೋ ಚಿತ್ರದ ಪ್ರತಿಮೆಗಳಂತೆ ಕುಳಿತು ಸಂಗೀತವನ್ನು ಕೇಳುತ್ತಿದ್ದಾರೆ. ಸಂಗೀತ ವಿದ್ವಾಂಸರು ಆದರಿಂದ ಉತ್ತೇಜಿತರಾಗಿ ತಮ್ಮ ಗಂಧರ್ವ ಕಂಠದಲ್ಲಿ ವರಸೆ ವರಸೆಯಾಗಿ ತಿರುಗಿಸಿ ತಿರುಗಿಸಿ ರಾಗಾಲಾಪನೆ ಮಾಡುತ್ತ ತಮ್ಮ ಕಲಾಕೌಶಲದಿಂದ ಸುಧಾತರಂಗವನ್ನೆಬ್ಬಿಸಿದ್ದಾರೆ. ಶ್ರೋತ್ರೇಂದ್ರಿಯ ಸುಖವನ್ನು ತಾಳಲಾರದೆ, ಸಭಿಕರಿಗೆ ಸುಖವೂ ದುಃಖವಾಗಿ ತೋರುವ ಸ್ಥಿತಿಯು ಒದಗುವುದರಲ್ಲಿದೆ. ಆ ವೇಳೆಗೆ "ಭೇಷ್! ಭೇಷ್! ನೀಲಕಂಠೇಶ್ವರನ ದಯೆ" ಎಂದು ಕೂಗಿಕೊಂಡು (ಏದಿ ಏದಿ ಉಸಿರು ಬಿಡುತ್ತಿದ್ದ) ವ್ಯಕ್ತಿಯೊಂದು ಒಳಗೆ ಪ್ರವೇಶಿಸಿತು. ಎಲ್ಲರೂ ಕಕ್ಕುಬಿಕ್ಕಾಗಿ ನೋಡಿದರು. ನೋಡಿದರೆ ತಮ್ಮಾಭಟ್ಟ. ರಾಗಲಹರಿಯ ಮಧ್ಯದಲ್ಲಿ ಸಂಗೀತಗಾರರ ಮುಖದ ಮೇಲೆ ಮುಗುಳು ನಗೆಯ ಕಾಮನ ಬಿಲ್ಲು ಕ್ಷಣಮಾತ್ರ ಮೂಡಿ, ಒಡನೆಯೇ ಮಾಯ ವಾಯಿತು. ತಮ್ಮಾಭಟ್ಟನೂ ಸಭಿಕರ ಗುಂಪಿನಲ್ಲಿ ಕುಳಿತು, ಭಕ್ತಿಯಿಂದಲೂ ಆನಂದದಿಂದಲೂ ಸಂಗೀತವನ್ನು ಕೇಳತೊಡಗಿದನು.

ಗಿರಿಭಟ್ಟರು ಬುದ್ಧಿಯನ್ನು ಓಡಿಸಿದರು. ಶ್ರಾದ್ಧವನ್ನು ಸಾಂಗವಾಗಿ ಪೂರೈಸಿಕೊಟ್ಟು ನಾಲ್ಕೈದು ಹರದಾರಿಗಳಿದ್ದ ಊರಿನಿಂದ ಬರುವುದು ಅಸಂಭವ. ತಮ್ಮಾಭಟ್ಟನು ಅಲ್ಲಿಗೆ ಹೋಗದೆ ಮೋಸಮಾಡಿರಬೇಕು. ಇಲ್ಲವೇ ವಾಯುವೇಗದಲ್ಲಿ ಮಂತ್ರವನ್ನು ಕೂಗಿ, ಅಪರಾಹ್ನಕಾಲಕ್ಕೆ ಮೊದಲೇ ಅಶಾಸ್ತ್ರೀಯವಾಗಿ ಪಿಂಡಪ್ರದಾನಮಾಡಿಸಿರಬೇಕು. ತಮ್ಮ ವಂಶಕ್ಕೂ, ಕರ್ತನ ವಂಶಕ್ಕೂ ಪಾಪ ಸಂಘಟನೆಮಾಡಿಸಿ, ಅವನು ಓಡಿಬಂದಿರಬೇಕು. ಇದು ಕ್ಷಮೆಗೆ ಅರ್ಹವಲ್ಲದ ಮಹಾಪರಾಧ—ಎಂಬುದಾಗಿ ಅವರ ಅಂತರಾತ್ಮನು ಕ್ಷಣಮಾತ್ರದಲ್ಲಿ ತೀರ್ಪು ಹೇಳಿದನು. ಅಲ್ಲಿ ಕುಳಿತಿರಲು ಅವರಿಗೆ ಇಷ್ಟವಿಲ್ಲ. ಮನೆಗೆ ಹೋಗಲು ಬೀಗದಕ್ಕೈಯಿಲ್ಲ. ಆಟದ ಮಧ್ಯದಲ್ಲಿ ಕೋಡಂಗಿಯು ಬಂದಹಾಗೆ, ಹೆಂಗಸರ ಗುಂಪಿಗೆ ಹೋಗಿ ಪಾರ್ವತಮ್ಮನವರಿಂದ ಅದನ್ನು ತೆಗೆದುಕೊಳ್ಳಲು ಮನಸ್ಸು ಬಾರದು. ಆದಕಾರಣ ಗಿರಿಭಟ್ಟರು ತಳಮಳಗೊಳ್ಳುತ್ತ ಸುಮ್ಮನೆ ಕುಳಿತುಬಿಟ್ಟರು. ಮಗನ ಹಣೆಯಲ್ಲಿ ಅಕ್ಷತೆಯಿಲ್ಲದೆ ಬರಿಯ ಹಣೆಯಾಗಿದ್ದುದನ್ನು ಕಂಡು, ಗಿರಿಭಟ್ಟರು ಕಿಡಿಕಿಡಿಯಾದರು. ಅವರು ಮಗನನ್ನು ಶಪಿಸುತ್ತಿದ್ದರು. ಸಂಗತಿಗಳ ಮೇಲೆ ಸಂಗತಿಗಳನ್ನು ಹಾಕಿ ಹಾಡುತ್ತಿದ್ದ ಸಂಗೀತ ವಿದ್ವಾಂಸರ ಆಯಾಸಕ್ಕಿಂತಲೂ ಕೋಪವನ್ನು ಹೊರಹೊಮ್ಮಿಸುವುದಕ್ಕಿಲ್ಲದೆ ನಿಶ್ಶಬ್ದವಾಗಿ ಮಗನನ್ನು ಶಪಿಸುತ್ತಿದ್ದ ಗಿರಿಭಟ್ಟರ ಆಯಾಸವೇ ಹೆಚ್ಚಿನದಾಗಿದ್ದಿತು.

ಯಥಾಕಾಲದಲ್ಲಿ ಸಂಗೀತವು ಮುಗಿಯಿತು. ಅಮಲ್ದಾರರು ಯಥೋಚಿತವಾಗಿ ಮಾತನಾಡಿ, ಸಂಗೀತ ವಿದ್ವಾಂಸರಿಗೆ ಹಾರವನ್ನು ಹಾಕಿ, ಹಣ್ಣಿನ ತಟ್ಟೆಗಳನ್ನು ಅರ್ಪಿಸಿದರು. ಪಕ್ಕವಾದ್ಯದವರನ್ನೂ ಹೊಗಳಿ, ಅವರ ಕೊರಳಿಗೂ ಅಮಲ್ದಾರರೇ ಹಾರಗಳನ್ನು ಹಾಕಿದರು. ಆ ಬಳಿಕ ಅವರು ಗಿರಿಭಟ್ಟರ ಕಡೆಗೆ ತಿರುಗಿ "ಭಟ್ಟರೆ! ನಿಮ್ಮ ಮಕ್ಕಳು ರಸಿಕತನದ ರಸಘಟ್ಟಿ, ನೋಡಿ. ಅವರು ರತ್ನದಂಥವರು. ಅವರ ಸದ್ಗುಣಗಳನ್ನು ಊರಿಗೆ ಊರೇ ಬಲ್ಲದು. ಅವರ ದೆಸೆಯಿಂದ ನಮಗೆ ಕರ್ಣಾನಂದವಾಯಿತು. ಅವರ ಜೊತೆಯವರಿಬ್ಬರೂ ಸರಿಯಾದವರೇ ಸೇರಿದ್ದಾರೆ, ಸಂತೋಷ, ಸಂತೋಷ" ಎಂದರು.

ಮಗನ ಹೊಗಳಿಕೆಯು ಭಟ್ಟರಿಗೆ ಆಗಿನ ಸ್ಥಿತಿಯಲ್ಲಿ ಕರ್ಣಕಠೋರ ವಾಯಿತು. ಆದರೂ ಯತ್ನವಿಲ್ಲದೆ "ಸ್ವಾಮಿ, ಸ್ವಾಮಿ! ಚಿತ್ತ, ಚಿತ್ತ" ಎಂದು ಹೇಳಿ ಗಿರಿಭಟ್ಟರು ಸುಮ್ಮನಾದರು. ಬಳಿಕ ಒಂದೆರಡು ಕ್ಷಣಕಾಲ ಸುಮ್ಮನಿದ್ದು (ಕೋಪವನ್ನಿಳಿಸಲು ಬಲವಾಗಿ ಉಗುಳನ್ನು ನುಂಗಿ) "ತಾವು ತಾಲ್ಲೂಕು ಧೊರೆಗಳು, ಎಲ್ಲಾ ತಮ್ಮ ಸಂತೋಷ" ಎಂದರು. ನಿಜಸ್ಥಿತಿ ಯನ್ನರಿಯದ ತಮ್ಮಾಭಟ್ಟನಿಗೆ ತಂದೆಯ ಮಾತನ್ನು ಕೇಳಿ ಚತುರ್ಭುಜ ವಾಯಿತು. ಸಂಗೀತಗಾರರೂ ಕಾಲೋಚಿತವಾಗಿ ಭಾಷಣ ಮಾಡಿದರು.

ಸಭಿಕರಲ್ಲಿ ಅನೇಕರು ಹೊರಟುಹೋದರೂ, ಅತ್ತ "ನಾರೀ ನಿವಹ ಪಾರಾವಾರ" ಮಧ್ಯದಲ್ಲಿ ಪಾರ್ವತಮ್ಮನವರ ನಗುವಿನ ಲಹರಿಯು ಇನ್ನೂ ಮುಗಿದಿರಲಿಲ್ಲ.

ಸಂಗೀತ ಕಚೇರಿಯಲ್ಲಿ ಹೆಂಗಸರಿಗೂ ಸ್ಥಳವು ದೊರೆತುದು ಊರಿನಲ್ಲಿ ಅಂದೇ ಮೊಟ್ಟಮೊದಲು. ಅದಕ್ಕಾಗಿ ಹೆಂಗಸರೆಲ್ಲರೂ ತಮ್ಮಾಭಟ್ಟನ ಹೊಗಳಿಕೆಯ ಕಾಣಿಕೆಯನ್ನು ಅವನ ತಾಯಿಗೆ ಸಮರ್ಪಿಸುತ್ತಿದ್ದರು. ಅತ್ತೆ ಸೊಸೆಯರಿಬ್ಬರಿಗೂ ಹೊಟ್ಟೆಯು ಹಿಡಿಯುವಷ್ಟು ಸಂತೋಷ. ಅವರು ಹೊರಡುವುದನ್ನೇ ನಿರೀಕ್ಷಿಸುತ್ತ, ಗಿರಿಭಟ್ಟರು ಬೋನಿಗೆ ಬಿದ್ದ ಮೂಗಿಲಿಯಂತೆ ಅಲ್ಲಲ್ಲಿ ಸುತ್ತಾಡುತ್ತಿದ್ದರು. ಈ ಮಧ್ಯದಲ್ಲಿ "ಗುರು" ಗಳು ತಮ್ಮಾಭಟ್ಟನನ್ನು ಕುರಿತು, "ಹೋಗಿದ್ದ ಕೆಲಸ ಬೇಗ ಮುಗಿಯಿ ತೆಂದು ಕಾಣುತ್ತೆ. ಹೇಗೂ ಬಂದೆಯಲ್ಲ. ಅದೇ ನನಗೆ ದೊಡ್ಡ ಸಂತೋಷ" ಎಂದರು.

ತಮ್ಮಾಭಟ್ಟನ ಮುಖವು ಊರಗಲವಾಯಿತು. ಅವನು "ನಿಮ್ಮ ದಯವಿದ್ದರೆ ಬರದೇ ಏನು, ಗುರುಗಳೇ? ರಾಮಣ್ಣನವರು ಒಂದು ಮಾತು ಹೇಳಿ ಕಳುಹಿಸಿದ್ದರೆ ನನಗೆ ಕಷ್ಟವೇ ತಪ್ಪುತ್ತಿತ್ತು. ಅವರ ಬಂಧುಗಳು ಯಾರಿಗೋ ಕಾಯಿಲೆಯಂತೆ. ಅವರ ಮನೆಯವರೆಲ್ಲರೂ ಮೊನ್ನೆಯೇ ಊರನ್ನು ಬಿಟ್ಟು ಹೊರಟುಹೋಗಿದ್ದರು. ನಾನು ಪೆಚ್ಚು ಮೋರೆ ಹಾಕಿಕೊಂಡು ಹೊರಟೆ. ಅಲ್ಲಿ ಬ್ರಾಹ್ಮಣರದು ಅದೊಂದೇ ಒಕ್ಕಲು. ಅಡಿಗೆಯ ಪ್ರಯತ್ನ ಮಾಡಿದರೆ ಸಂಗೀತ ಹೋಗುತ್ತೆಂದು ದಾಪುಕಾಲು ಹಾಕಿಕೊಂಡು ಬಂದೇ ಬಿಟ್ಟೆ. ಬರುವಾಗ ಹೊಳೆಯಲ್ಲಿ

ಸ್ನಾನಮಾಡಿ ಮಾಧ್ಯಾಹ್ನಿಕವನ್ನೂ ಪೂರೈಸಿದೆ. ಆಗ ಕುಡಿದ ನೀರೇ ಹೊಟ್ಟೆಗೆ ಆಧಾರ. ನನಗೆ ಕಲ್ಯಾಣಿ ರಾಗದಲ್ಲಿ ಪ್ರಾಣ. ಅದನ್ನ ಎಷ್ಟು ಸೊಗಸಾಗಿ ಹಾಡಿಬಿಟ್ಟಿರಿ, ಗುರುಗಳೆ! ನನ್ನ ಕಿವಿಯಲ್ಲಿ ಇನ್ನೂ ಅದೇ ತುಂಬಿದೆ. ಒಟ್ಟು ಮುವ್ವತ್ತು ಮೈಲಿ ನಡೆದ ಆಯಾಸವೂ ಓಡಿಯೇ ಹೋಯಿತು" ಎಂದು ಹೇಳಿದನು.

ಇದನ್ನು ಕೇಳಿ, ಗಿರಿಭಟ್ಟರ ಮನಸ್ಸು ಪಶ್ಚಾತ್ತಾಪದಿಂದ ಬೆಂದು ಹೋಯಿತು. ಕೊನೆಗೆ ಅವರು ದೇವರಿಗೆ ಕೈಮುಗಿದು, "ನೀಲಕಂಠೇಶ್ವರ! ನಿರಪರಾಧಿಯಾದ ಹುಡುಗನಿಗೆ ಶಾಪಹಾಕಿದೆನೇ ನಾನು! ಕ್ಷಮಿಸಿಬಿಡು, ನಮ್ಮಪ್ಪ. ದಯಾನಿಧೇ! ನಿನ್ನ ಲೀಲೆಯನ್ನು ನಾನು ಬಲ್ಲೆನೆ? ಹುಡುಗನಿಗೆ ನೀನೇ ಸಂಗೀತದ ಗೀಳು ಹಿಡಿಸಿದ್ದೀಯೆ. ಯಾರಿಂದ ಯಾವಾಗ ಯಾವ ರೂಪದಲ್ಲಿ ಸೇವೆ ತೆಗೆದುಕೊಳ್ಳಬೇಕೋ ಅದನ್ನು ನೀನೇ ಬಲ್ಲೆ. ನಾನೊಂದು ಪಶು. ಆದರೂ, ನೀನು ಪಶುಪತಿ. ತಿಳಿಯದೆ ಮಾಡಿದ ತಪ್ಪನ್ನು ಮನ್ನಿಸಿ, ಉದ್ಧಾರಮಾಡು" ಎಂದು ಮನಸ್ಸಿನಲ್ಲಿಯೇ ಬೇಡಿಕೊಂಡರು. ಮಗನಿಗೆ ಊಟವಾಗಿಲ್ಲವೆಂಬುದನ್ನು ಕೇಳಿ, ಪಾರ್ವತಮ್ಮನವರಿಗೆ ಮುಳ್ಳಿನ ಮೇಲೆ ನಿಂತಹಾಗಾಯಿತು. ಅವರೂ ಸೀತಮ್ಮನೂ ಮನೆಗೆ ಹೊರಟುಹೋದರು. ಗಿರಿಭಟ್ಟರು ಮಗನ ಬಳಿಗೆ ಬಂದು, ಅವನ ಬೆನ್ನನ್ನು ಸವರಿ, "ಏಳು ಮಗು, ಮನೆಗೆ ನಡಿ, ಮೊದಲು ಊಟಮಾಡು. ರಂಗಪ್ಪನೂ ಕಿಟ್ಟಯ್ಯನೂ ಇಲ್ಲಿನ ಕೆಲಸ ನೋಡಿಕೋತಾರೆ. ಸಂಗೀತದಲ್ಲಿ ಇಷ್ಟವೇನೊ ಇರಬಹುದು. ಆದರೂ ಈ ಹುಚ್ಚು ಉಂಟೆ?" ಎಂದರು. ಸಂಗೀತ ವಿದ್ವಾಂಸರಿಗೆ ಸಂತೋಷ ವ್ಯಸನಗಳೆರಡೂ ಏಕಕಾಲದಲ್ಲಿ ಉಂಟಾಗಿ, ಅವರು ತಲ್ಲಣಗೊಂಡರು.

ಇದೀಗ ಹಿಂದಿನ ಕಥೆ. ನಿಷ್ಕರುಣಿಯಾದ ಯಮನು ತಮ್ಮಾಭಟ್ಟನನ್ನು ಒಂದು ವರ್ಷದ ಹಿಂದೆಯೇ ಕೊಂಡೊಯ್ದನು. ಅದರ ನೆನಪೇ ರಂಗಪ್ಪನ ನಿನ್ನೆ ಅತ್ತುದರ ಕಾರಣ. ಅದೇ ದೇವಸ್ಥಾನ. ಅದೇ ವಿಧದ ಸಾಯಂಕಾಲ. ಅದೇ ವಿಧದ ಕಲ್ಯಾಣಿರಾಗ. ಅದೇ ರಂಗಪ್ಪ. ಆದರೂ ಪ್ರಾಣದಾಯಕವಾದ ತಮ್ಮಾಭಟ್ಟನ ಚೇತನವು ರಂಗಪ್ಪನ ಭಾಗಕ್ಕೆ ಈಗಿಲ್ಲ. ಹೀಗಿರುವಲ್ಲಿ ಅವನು ಕಂಬನಿದುಂಬಿದುದು ಹೆಚ್ಚೆ! ರಂಗಪ್ಪನು

ಇಂದು ಬೆಳಗ್ಗೆ ಈ ಹಿಂದಿನ ಕಥೆಯನ್ನು ಹೇಳಿ ಮುಗಿಸಿ ಮತ್ತೊಮ್ಮೆ ಕಣ್ಣೀರನ್ನು ಸುರಿಸಿ "ಅದು ದೇವಲೋಕದ ಪಾರಿಜಾತ ಪುಷ್ಪ. ಈ ಲೋಕದಲ್ಲಿ ಹೆಚ್ಚು ಕಾಲ ನಿಲ್ಲದೆ ಹೊರಟುಹೋಯಿತು" ಎಂದನು.

ಆ ವೇಳೆಗೆ ತಿಂಡಿಯನ್ನು ಕೇಳಲು ಬಾಲಕನು ಬಂದನು. ರಂಗಪ್ಪನು ಕಣ್ಣೀರು ಬಿಡುತ್ತಿದ್ದುದನ್ನು ನೋಡಿ ಅವನು ಮಂಕಾಗಿ ನಿಂತಿದ್ದು, "ನಿಮ್ಮಮ್ಮ ನಿನ್ನೆಯಿಂದ ನಿನ್ನ ಹೊಡೆದು ಸುಮ್ಮನೆ ಅಳಸ್ತಾ ಇದ್ದಾಳೆ. ಥೂ, ಎಲ್ಲೋ ಕೆಟ್ಟ ಅಮ್ಮ. ನಮ್ಮ ಅಮ್ಮ ಸರಿ. ಹೋಗ್ಲಿ ತಿಂಡಿಕೊಡು" ಎಂದನು. ಆಗಿನ ಸ್ಥಿತಿಯಲ್ಲಿಯೂ ನಮಗೆ ನಗು ಬಂದಿತು. ರಂಗಪ್ಪನು, "ಈ ಮೊಮ್ಮಗನೇ ಗಿರಿಭಟ್ಟರ ಮನೆಗೆ ಹವಳದ ಬಳ್ಳಿ" ಎಂದು ಹೇಳಿ ಅವನನ್ನು ತಬ್ಬಿಕೊಂಡನು. ರಂಗಪ್ಪನ ಮಾತುಗಳು ಆ ವೇಳೆಗೆ ಅವನ ತೊಡೆಯನ್ನೇರಿದ್ದ ಹುಡುಗನಿಗೆ ಅರ್ಥವಾಗಲಿಲ್ಲ. "ತಿಂಡಿ ಕೇಳಿದರೆ ನನ್ನೂ ತಾತನ್ನೂ, ಇಬ್ಬರನ್ನೂ ಬಯ್ತಾಯಾ, ಆ, ಆ, ಆ" ಎಂದು ಹೇಳಿ ಅವನು ತನ್ನ ಪುಟ್ಟ ಕೈಯಿಂದ ರಂಗಪ್ಪನ ಬೆನ್ನಿನ ಮೇಲೆ ಮೂರು ಏಟುಗಳನ್ನು ಕೊಟ್ಟನು. ಆಗ ರಂಗಪ್ಪನಿಗೆ ಎಷ್ಟು ಸಂತೋಷವಾಯಿತೆಂಬುದು ಅವನೊಬ್ಬನಿಗೇ ಗೊತ್ತು. ಇತರರು ಅದನ್ನು ಪೂರ್ತಿಯಾಗಿ ಗ್ರಹಿಸಲು ಶಕ್ಯವಿಲ್ಲ. ಸೇವಕನಿಗೆ ಇನ್ನು ಅಪ್ಪಣೆಯೆ?—ಕೃಷ್ಣಪ್ಪ.

---

# ಕಾಡು ಪಾಪ

೧

ಸುಂದರರಾಯನ ತರ್ಕವೇ ತರ್ಕ. ದೇವರು ತನಗೆ ವಿಶೇಷ ವಿದ್ಯೆಯನ್ನಾಗಲಿ, ಯಥೇಷ್ಟವಾಗಿ ಧನವನ್ನಾಗಲಿ, ಕೊಡದೆ ಅನ್ಯಾಯ ಮಾಡಿದ್ದುದರಿಂದ ಮನುಷ್ಯರಿಗೇ ಆಗಲಿ, ಪ್ರಾಣಿಗಳಿಗೇ ಆಗಲಿ, ತಾನೇಕೆ ದಯೆಯನ್ನು ತೋರಿಸಬೇಕೆಂಬುದು ಆಗಾಗ ಅವನ ಮನಸ್ಸಿಗೆ ತೋರಿಬರುತ್ತಿದ್ದ ಜಿಜ್ಞಾಸೆ. ಅದಕ್ಕೆ ಪ್ರತಿಯಾಗಿ (ಅವನ ಹೆಂಡತಿ) ಗೌರಮ್ಮನು ಎಷ್ಟು ವಿಧಗಳಲ್ಲಿ ಸಮಾಧಾನವನ್ನು ಹೇಳಿದರೂ, "ಮೂರುಕಾಸಿನ ಹೆಂಗಸಿಗೆ ಭಾರಿ ವಿಷಯಗಳೇನು ಗೊತ್ತು?" ಎಂದು ಅವನು ತೀರ್ಪನ್ನು ಹೇಳಿಬಿಡುತ್ತಿದ್ದನು. ತಾನು ಮಾತ್ರ ಈಗ್ಗೆ ಐವತ್ತು ಅರವತ್ತು ವರುಷಗಳ ಹಿಂದೆ ಹುಟ್ಟಿದ್ದರೆ, ಮೂರು ನಾಲ್ಕು ಸಂಸ್ಥಾನಗಳಲ್ಲಿ "ರುಸ್ತುಂ" ದಿವಾನ್‌ಗಿರಿ ಮಾಡಿಬಿಡಬಹುದಾಗಿದ್ದಿತೆಂಬುದು ಅವನ ಮನಸ್ಸಿನಲ್ಲಿದ್ದ ಅಚಲವಾದ ನಂಬಿಕೆ. ಏಕೆಂದರೆ, ಆಗ್ಗೆ—ಅವನ ಭಾವನೆಯಲ್ಲಿ—ಎಫ್.ಎ. ಮುಂತಾದ ಪರೀಕ್ಷೆಗಳು ಅತಿ ಸುಲಭವಾಗಿದ್ದುದರಿಂದ ತಾನು ಮದರಾಸು ಇಂಟರ್ಮೀಡಿಯೇಟ್ ಪರೀಕ್ಷೆಯಲ್ಲಿ ನಾಲ್ಕೈದು ಸಾರಿ "ಶೋಕರ್ ತಿಂದಹಾಗೆ" ಆ ಕಾಲದಲ್ಲಿ ನಡೆಯದೆ, ತನ್ನ ವಿದ್ಯಾಭ್ಯಾಸವು ಸಾಂಗವಾಗಿ ನೆರವೇರುತ್ತಿದ್ದಿತೆಂಬುದು ಅವನ ಸಿದ್ಧಾಂತ. "ಬಿ.ಎ.," "ಎಂ.ಎ.," "ಬಿ.ಎಲ್.," "ಎಂ.ಎಲ್." ಪರೀಕ್ಷೆಗಳು (ರೈಲ್ವೆ ಸ್ಟೇಷನಿನಲ್ಲಿ ಹೆಚ್ಚು ನುಗ್ಗಾಟವಿಲ್ಲದೆ ಮೊದಲನೆಯ ತರಗತಿಯ ಅಥವಾ ಎರಡನೆಯ ತರಗತಿಯ ಪ್ರಯಾಣಕ್ಕೆ "ಟಿಕೀಟು" ತೆಗೆದುಕೊಂಡಹಾಗೆ) ಲೀಲಾಜಾಲವಾಗಿ ನಡೆದುಹೋಗುತ್ತಿದ್ದುವೆಂಬುದು ಅವನ ಭಾವನೆ.

ಈಚೆಗೆ ಕೂಡ, "ಎಂ.ಎ.," "ಎಂ.ಎಲ್." ಪರೀಕ್ಷೆ ಮಾಡಿದವರು ದೊಡ್ಡ ದೊಡ್ಡ ಪದವಿಗಳಿಗೆ ಬಂದಿರುವಲ್ಲಿ, ತಾನು ಬಹು ಕಾಲಕ್ಕೆ ಹಿಂದೆ

ಅದೇ ಪರೀಕ್ಷೆಗಳಲ್ಲಿ ತೇರ್ಗಡೆ ಹೊಂದಿ ಕೆಲಸಕ್ಕೆ ಸೇರಿದ್ದರೆ, ಕನಿಷ್ಠಪಕ್ಷ ಮೂರು ಸಂಸ್ಥಾನಗಳಲ್ಲಾದರೂ ದಿವಾನ್‌ಗಿರಿ ಮಾಡಬಹುದಾಗಿದ್ದಿತೆಂಬುದು ಅವನ ಸಿದ್ಧಾಂತ. ಅಂತು, ಅವನು ತನ್ನ ಮನಸ್ಸಿನ ಸಮಾಧಾನಕ್ಕಾಗಿ ಆಗಾಗ "ವಿಧಿ ವಶದೆ ವಾಲಿಯುಳಿದಂ" ಎಂಬ ಕಂದವನ್ನು ಹೇಳಿಕೊಳ್ಳುತ್ತಿದ್ದ ಹಾಗೆ, ವಿಧಿವಶದಿಂದ ಅವನ ಸ್ಥಿತಿಯು ಹೀಗಾಯಿತು; ಅದು ವಿಧಿಸಂಕಲ್ಪವೆಂದುಕೊಂಡು ಅವನು ತೃಪ್ತಿಪಟ್ಟುಕೊಳ್ಳಲೂ ಇಲ್ಲ. ಮಂತ್ರಿತ್ವ ಮಾಡಲು ಹುಟ್ಟಿದವನು "ದಿವಾನ್‌ಗಿರಿ"ಗೆ ಮಾರ್ಗವಿಲ್ಲದೆ "ರೇಂಜರುಗಿರಿ"ಯಿಂದಲೇ ತೃಪ್ತನಾಗಬೇಕಾಯಿತು.

ದೇವರು ಎಲ್ಲ ರೀತಿಗಳಲ್ಲಿಯೂ ತನಗೆ ಅನ್ಯಾಯ ಮಾಡಿದನೆಂದು ಅವನು ನೀಲಾಂಬರಿ ರಾಗದ ಆಲಾಪನೆಯನ್ನು ಆರಂಭಿಸಿದಾಗಲೆಲ್ಲ ಗೌರಮ್ಮನು ಅವನಿಗೆ ಸಮಾಧಾನ ಹೇಳುತ್ತಿದ್ದಳು. ಒಂದು ದಿನವಂತು, ಕೊಂಚ ಹಗರಣವೇ ನಡೆಯಿತು. ಸುಂದರರಾಯನು ಅಂದು ಎಂದಿನ ನೀಲಾಂಬರಿ ರಾಗದಿಂದಲೇ ತೃಪ್ತನಾಗದೆ, ಅದರ ಜೊತೆಗೆ ವರಾಳಿ ರಾಗಕ್ಕೂ ಉಪಕ್ರಮಿಸಿ, ಉನ್ಮತ್ತನಂತೆ ಪ್ರಲಾಪಿಸಿದನು. ಗೌರಮ್ಮನು ವಾದಿಸಿ ವಾದಿಸಿ ಸಾಕಾಗಿ ಕೊನೆಗೆ "ಏನ್ರಿ, ಹೀಗೆ ಗೋಳಾಡ್ತೀರಿ? ದೇವರು ಕೊಟ್ಟದ್ದೇ ಸಾಕು—ಅಂತ ಸುಖವಾಗಿರದೆ ಹೀಗೆ ಪೇಚಾಡಿದರೆ ಯಾವ ದೇವರಿಗೆ ಪ್ರೀತಿ ಹೇಳಿ. ನಾನು ನಿಮ್ಮ ರೂಪು ಕೂಡ ನೋಡದೆ, ಪಾಲಿಗೆ ಬಂದದ್ದು ಪಂಚಾಮೃತವೆಂತ ಪ್ರೀತಿಸ್ತಾ ಇಲ್ಲವೇ ಹೇಳಿ? ನನ್ನ ಹಾಗೆ ನೀವೂ ರೂಪವಂತರಾಗಿ ಹುಟ್ಟಲಿಲ್ಲವಲ್ಲಾ—ಅಂತ ನಾನೂ ಗೋಳಾಡಿದರೆ ಗತಿಯೇನು?" ಎಂದುಬಿಟ್ಟಳು. ತನಗೆ ಸುಂದರರಾಯನೆಂಬ ಹೆಸರಿದ್ದೂ ತಾನು ಸುಂದರನಾಗಿಲ್ಲವಲ್ಲಾ—ಎಂಬುದಾಗಿ ಎಂದಿನಿಂದಲೋ ಸಂತಪ್ತವಾಗಿದ್ದ ಅವನ ಮನಸ್ಸು ಆಗ ಹೆಡೆಯನ್ನು ಮೆಟ್ಟಿದ ಹಾವಿನಂತಾಯಿತು. ಕೆಳಗಿನ ತರಗತಿಯಲ್ಲಿ ಉಪಾಧ್ಯಾಯರೊಬ್ಬರು ತನ್ನನ್ನು "ಕಾಡು ಪಾಪ, ಕಾಡು ಪಾಪ" ಎಂದು ಕರೆಯುತ್ತಿದ್ದುದೂ, ಹುಡುಗರು ತನ್ನನ್ನು ಹಾಸ್ಯಮಾಡುತ್ತಿದ್ದುದೂ, ಅವನಿಗೆ ನೆನಪಾದುವು. ತನ್ನ ಪತ್ನಿಯೂ, ವಿಧಿಯೂ, ಒಟ್ಟು ಪ್ರಪಂಚವೂ ತನಗೆ ವಿರೋಧವಾಗಿದ್ದಂತೆ ಭಾವಿಸಿ, ಅವನು ತಾಳ್ಮೆ ತಪ್ಪಿ ಆರ್ಭಟಿಸಿದನು.

ಕೋಪದ ಆವೇಗವು ಮದ್ಯಪಾನಕ್ಕೆ ಮಿಗಿಲಾದುದೆಂಬುದು ತಿಳಿದೇ ಇದೆ. ಸುಂದರರಾಯನು ಗೌರಮ್ಮನ ಮೇಲೆ ರೇಗಿ, "ನೀನೇನು ಮಾಡೀಯೆ? ಹಾಲು ತುಪ್ಪದಲ್ಲಿ ಕೈ ತೊಳೆದು ಚಿನ್ನದ ರೇಖು ಕಬಳಿಸಿ ಮೆಲುಕು ಹಾಕಿದ ಕೆಚ್ಚು ನಿನ್ನ ಹೀಗೆ ಕುಣಿಸುತ್ತೆ. ಏನು ಸುಡುಗಾಡು ಸಮಾಜವೋ ನಮ್ಮದು! ಎಲ್ಲಾ ಕಷ್ಟಗಳೂ, ಎಲ್ಲಾ ತೊಂದರೆಗಳೂ ಗಂಡಸರಿಗೆ; ಹೆಂಗಸರು ಮಾತ್ರ ಹಾಯಾಗಿ ಬೊಜ್ಜು ಬೆಳೆಸಿಕೊಂಡು ಕೂತಿರೋದು. ಅಬ್ಬ! ಇವಳ ಜೋಕು ಹೇಗಿದೆ? ನನ್ನೇ ಅಂತಾಳೆ" ಎಂದು ಗರ್ಜಿಸಿದನು. ದೇಹಪುಷ್ಟಿಗೋಸ್ಕರ ತಾನು "ಚಂಚಮು"ರೇಖನ್ನು ತಿಂದುದನ್ನು ಎತ್ತಿಹಾಕಿ, ತನ್ನ ಗಂಡನು ಹಂಗಿಸಿ ಭಂಗಿಸಿದುದು ಗೌರಮ್ಮ ನಿಗೂ ತಡೆಯಲಿಲ್ಲ. ಸುಂದರರಾಯನ ಮಾತುಗಳು ಎಂತಹವರಿಗೂ ಕೋಪವನ್ನುಂಟುಮಾಡತಕ್ಕವುಗಳೇ. ಗೌರಮ್ಮನು, "ಹೆಂಗಸರ ಕಷ್ಟ ಹೆಂಗಸರೇ ಬಲ್ಲರು" ಎಂದು ಮುಂತಾಗಿ ತಾನೂ ಗರ್ಜಿಸಿ ಕಣ್ಣೀರಿನ ಕೋಡಿಯನ್ನು ಹರಿಸಿದಳು. ತಾವಿಬ್ಬರು ಮಾತನಾಡಿದುದೂ ಅನುಚಿತ ವೆಂಬುದು ದಂಪತಿಗಳೀರ್ವರ ಮನಸ್ಸಿಗೂ ಗೊತ್ತಾಯಿತು. ಆದರೆ ತಪ್ಪನ್ನೊಪ್ಪಿಕೊಂಡು ಒಬ್ಬರನ್ನೊಬ್ಬರು ಮಾತನಾಡಿಸಲು ಇಬ್ಬರ ಮನಸ್ಸಿಗೂ ಹೀನಾಯ. ಆ ವೇಳೆಗೆ ಅವರ ಮಗ ಶೇಷುವು ಹೊರಗಿನಿಂದ ಓಡಿಬಂದು ತಾಯಿಯನ್ನಪ್ಪಿದನು.

ಆಗ ಗೌರಮ್ಮನು, "ನೋಡೋ, ಶೇಷು, ನಿನ್ನ ಹೊಡೀಬೇಕಂತೆ. ನಿನ್ನ ಮುದ್ದಾಡಕೂಡದಂತೆ. ನೀನು ತುಂಟನಂತೆ" ಎಂದಳು. ತುಂಟ ನೆಂದರೇನೋ ಶೇಷುವಿಗೆ ತಿಳಿಯದು. ಆದರೂ ಅವನು ತನ್ನ ಪ್ರೌಢಿಮೆ ಯನ್ನು ತೋರಿಸುತ್ತ, ತಂದೆಯನ್ನು ಸಂಬೋಧಿಸಿ, "ನೀನೇ ತುಟ್ಟ, ನೀನೇ ತುಟ್ಟ" ಎಂದು ಹೇಳಿಬಿಟ್ಟನು. ಆದಿಶೇಷನ ಹೆಡೆಗಳಲ್ಲಿ ಅನರ್ಘ್ಯ ವಾದ ಜೀವರತ್ನಗಳಿವೆಯೋ ಇಲ್ಲವೋ ನಾವು ಕಾಣೆವು. ಆದರೂ, ಅವನ ಸಾವಿರ ಹೆಡೆಗಳ ಜೀವರತ್ನಗಳಿಗಿಂತಲೂ ಮಕ್ಕಳ ಮುದ್ದು ಮಾತುಗಳಿಗೆ ಬೆಲೆ ಹೆಚ್ಚೆಂದು ಮಾತ್ರ ಖಂಡಿತವಾಗಿ ಹೇಳಬಹುದು. ಅರ್ಥ ತಿಳಿಯದ ಹಸುಮಕ್ಕಳ ಬೈಗುಳಗಳಿಗೆ ತಾಯಿತಂದೆಗಳ ಭಾವನೆಯಲ್ಲಿ ಇನ್ನೂ ಹೆಚ್ಚು ಬೆಲೆಯೆನ್ನಬಹುದು. ಪ್ರಪಂಚದ ಹೊಗಳಿಕೆಗೆ ಹಿಗ್ಗದ ಹೃದಯವು

ಕೂಡ, ಹಸುಮಕ್ಕಳ ಬೈಗುಳದಿಂದ ಉಬ್ಬಿಹೋಗುವುದು. "ತುಂಟ" ನೆನ್ನುವುದಕ್ಕೆ ಕೂಡ ಬಾರದೆ ಶೇಷುವು "ತುಟ್ಟ"ನೆಂದುದನ್ನೂ, ಮುಯ್ಯಿಗೆ ಮುಯ್ಯಿ ತೀರಿಸಿದಂತೆ ಭಾವಿಸಿದ್ದ ಅವನ ಸಂತೋಷವನ್ನೂ ನೋಡಿ, ಸುಂದರರಾಯನು ತನ್ನ ಆಗಿನ ಸ್ಥಿತಿಯಲ್ಲಿ ಕೂಡ ಗಟ್ಟಿಯಾಗಿ ನಕ್ಕು,—"ತುಂಟ, ತುಂಟ" ಎಂದು ಹೇಳಿ ಗೌರಮ್ಮನು ಎತ್ತಿಕೊಂಡಿದ್ದ ಶೇಷುವಿನ ಮೈದಡವಿದನು. ಶಾಖದಿಂದ ಉಕ್ಕಿ, ನೀರು ಬಿದ್ದೊಡನೆಯೇ ಹಿಂದಕ್ಕೆ ಹೋದ ಹಾಲಿನಂತೆ ದಂಪತಿಗಳೀರ್ವರ ಮನಸ್ಸೂ ಸ್ವಲ್ಪಮಟ್ಟಿಗೆ ಪ್ರಶಾಂತವಾಯಿತು.

ಆದರೆ ಶೇಷುವು ಮಾತ್ರ ತಮ್ಮ ತಂದೆಯು ತನ್ನನ್ನು ಮತ್ತೆರಡು ಬಾರಿ ತುಂಟನೆಂದುದಕ್ಕೆ ಅವನ ಸಂತೋಷವು ಕಾರಣವೆಂಬುದನ್ನರಿಯದೆ, ಅವನನ್ನು ಮುಷ್ಟಿಯಿಂದ ಗುದ್ದಿ, "ನೀನೇ ನೀನೇ, ನೀನೇ ತುಟ್ಟ, ತುಟ್ಟಾ" ಎಂದು ಗಟ್ಟಿಯಾಗಿ ಅಳತೊಡಗಿದನು. ದಂಪತಿಗಳಿಬ್ಬರೂ ಅವನನ್ನು ಸಂತೈಸಲುಪಕ್ರಮಿಸಿದರು. ಸುಂದರರಾಯನು ಗೌರಮ್ಮನ ಮುಖವನ್ನು ನೋಡಿ, "ಇಷ್ಟೂ, ನಿನ್ನಿಂದಲೇ" ಎಂದು ಹೇಳಿ ನಕ್ಕನು. ಗೌರಮ್ಮನು, "ನನ್ನಿಂದಲೇಕೆ, ಎಲ್ಲಾ ನಿಮ್ಮಿಂದಲೇ. ಇಷ್ಟೂ ನಿಮ್ಮಿಂದಲೇ" ಎಂದು ಹೇಳಿ ತಾನೂ ನಕ್ಕಳು. ಸುಂದರರಾಯನು ಮಗುವನ್ನು ಸಂತೈಸಿ, "ನಾನಪ್ಪ ತುಂಟ. ನಾನು ತುಂಟ. ನೀನು ಜಾಣ" ಎಂದು ಶೇಷುವಿನ ತಲೆಯನ್ನು ಸವರಿದನು. ಶೇಷುವಿನ ಮುಖದಲ್ಲಿ ನಗೆಮಲ್ಲಿಗೆಯು ಮೂಡಿತು. ಶೇಷುವು ಚಪ್ಪಾಳೆಯನ್ನು ತಟ್ಟುತ್ತ ಜವಾನ ಕಂಚನು ಹೇಳಿಕೊಟ್ಟಿದ್ದ ಪಾಠವನ್ನೊಪ್ಪಿಸಿ, "ನಾನು ಜಾಣ, ನೀನು ಕೋಣ; ನಾನು ಜಾಣ, ನೀನು ಕೋಣ" ಎಂದು ಹೇಳುತ್ತ, ರಾಗಕ್ಕೂ ತಾಳಕ್ಕೂ ನಿಲುಕದ ಸಂಗೀತ ಲಹರಿಯನ್ನೆಬ್ಬಿಸಿ ತಾಯಿತಂದೆಗಳನ್ನು ಸುಮ್ಮಾನಗೊಳಿಸಿದನು.

ಗೌರಮ್ಮನು ಒಂದು ಕೆನ್ನೆಗೂ, ಸುಂದರರಾಯನು ಮತ್ತೊಂದು ಕೆನ್ನೆಗೂ, ಮಗುವಿಗೆ ಮುತ್ತಿಟ್ಟರು. ಗೌರಮ್ಮನು ಸುಮ್ಮನಿರದೆ, "ಇಂಥ ಮುದ್ದು ಮಗುವಿಗೆ ಬದಲಾಗಿ ಇವರೇನು ಕೊಡಬಲ್ಲರೋ ಕಾಣೆ. ಹಾಲಂತೆ, ತುಪ್ಪವಂತೆ, ಚಿನ್ನದ ರೇಖಂತೆ; ನನ್ನ ಬೈತಾರೆ.

ಸರಿಯಾಗಿ ನೋಡಿದರೆ ಇವರ ಮೇಲೇ ನನ್ನ ಬಾಕಿಯಿದೆ'' ಎಂದಳು. ಹೋಗಿದ್ದ ಮೋಡವು ಮತ್ತೆ ಕವಿಯುವಂತಾಯಿತು. ಸುಂದರರಾಯನು ''ಮತ್ತೆ ಅದರ ಸುದ್ದಿಯನ್ನೇ ಎತ್ತಬೇಡ. ನನ್ನ ಮನಸ್ಸೇ ಹಿಡಿತ ತಪ್ಪಿ ಮತ್ತೆ ಎಲ್ಲಿಗೋ ಹೊರಟುಹೋಗುತ್ತೆ'' ಎಂದನು. ಗೌರಮ್ಮನು ''ಪಾಪ! ಪಾಪ! ಅದು ಇದ್ದ ಕಡೆ ಇರಲಿ. ಎಲ್ಲೋ ಹೊರಟು ಹೋಗಿ ಯಾಕೆ ಇಲ್ಲದ ತಾಪತ್ರಯಪಡಬೇಕು. ಸದ್ಯ ಇದ್ದ ಕಡೇಲೇ ಇರಲಿ'' ಎಂದು ಉತ್ತರ ಹೇಳಿದಳು; ಅಲ್ಲದೆ ಶೇಷುವನ್ನು ಮತ್ತಷ್ಟು ಹೆಚ್ಚಾಗಿ ಬಿಗಿದಪ್ಪಿದಳು.

೨

ಆ ವೇಳೆಗೆ ಸರಿಯಾಗಿ ಕೆಂಚನು ಓಡಿಬಂದನು. ಅವನ ಹೆಸರೇನೋ ಕೆಂಚ. ಆದರೆ, ಪ್ರಪಂಚದಲ್ಲಿ ಎಲ್ಲಿ ನೋಡಿದರೂ ಅವನಷ್ಟು ಕಪ್ಪಗಿರುವವರು ಬೇರೆ ಸಿಕ್ಕುವ ಹಾಗಿಲ್ಲ. ಹೆಸರು ಸಂಪತ್ಕುಮಾರಾಚಾರ್ಯನಾದರೆ ಜೇಬಿನಲ್ಲಿ ಹಣವಿರಬೇಕೆಂದು ಬಯಸುವುದು ಎಲ್ಲಿಯ ನ್ಯಾಯ? ಕೆಂಚನು ಸುಂದರರಾಯನೊಡನೆ—''ಬುದ್ಧಿ, ಹುಲಿ, ಹುಲಿಹಂಗಾಡ್ತದೆ; ನಾಯಿ, ಯಾವುದೋ ನಾಯಿ. ಬಚ್ಚಲು ಮನೆ ಮೂಲೆ ಸೇರ್ಕೊಂಡು ಬುಟ್ಟದೆ. ಈಚೆಗೂ ಬರಾಕಿಲ್ಲ. ಮನುಸನ ಮೋರೆ ಕಂಡೇ ಅಂದರೆ ಬೊಗಳಿ ಬೊಗಳಿ ಹಾರಿಬೀಳ್ತದೆ. ನಾಯಿ ದೊಡ್ಡದಾಗದೆ. ಅದು ರೇಗೋದು ನೋಡಿದ್ರೆ ಹತ್ತಿರ ಹೋಗೋಕೇ ದಿಗಿಲಾಗ್ತದೆ'' ಎಂದನು. ಸುಂದರರಾಯನಿಗೆ ಅದನ್ನು ಕೇಳಿ ಜುಗುಪ್ಸೆಯಾಯಿತು. ಅವನ ಆಗಿನ ಸ್ಥಿತಿಯಲ್ಲಿ ಹಾಗಾದುದೇನೂ ಹೆಚ್ಚಲ್ಲ. ಅವನು, ''ಏನೋ ಈ ರಗಳೆ! ಮುಟ್ಠಾಳ, ಒಂದು ನಾಯಿ ಓಡಿಸಲಾರದೆ ಇಲ್ಲಿಗೆ ಬಂದಿದ್ದೀಯೆ, ಹೇಡಿ, ಹೇಡಿ'' ಎಂದು ಮೂದಲಿಸಿದನು.

ಸುಂದರರಾಯನಿಗೇನೊ ಆಳು ಸಿಕ್ಕಿದ್ದುದು ಇನ್ನೂ ಹೊಸದು. ಆದರೆ ಕೆಂಚನೇನೋ ಎಷ್ಟೋ ಜನ ''ರೇಂಜರು ಸಾಹೇಬರು''ಗಳನ್ನು ನೋಡಿ ದಣಿದು ಹೋಗಿದ್ದನು. ಆದುದರಿಂದ ಸುಂದರರಾಯನ ಈ ಬೈಗುಳದಿಂದ ಅವನ ಮನಸ್ಸಿಗೆ ಯಾವುದೊಂದು ಪರಿಣಾಮವೂ ಆಗಲಿಲ್ಲ. ಸೊಳ್ಳೆ

ಗಳು ಕಡಿಯಲು ಹೋದ ಆಸೆಯಂತೆ ಅವನು ಸುಮ್ಮನೆ ನಿಂತಿದ್ದನು. ಸುಂದರರಾಯನು "ಕಂಬದ ಹಾಗೆ ನಿಲ್ಲಬೇಡ. ಹೋಗೋ, ಅದನ್ನು ಓಡಿಸಿ ಬಾ" ಎಂದನು. ಕೆಂಚನು, "ಅಲ್ಲಾ ನನ್ನೊಡೆಯ, ನಾಯಿ ಮೇಲೆಬೀಳೋಕೇ ಬರ್ತದೆ. ದೊಣ್ಣೇಲಿ ಹೊಡೆದು ಕೊಲ್ಲೋಕೆ ಮನಸಿಲ್ಲ. ಕಚ್ಚೋಕೇ ಬರ್ತದೆ! ಸುಮ್ಮನೆ ಓಡಿಸುವಾ ಅಂದರೆ, ಹುಚ್ಚುನಾಯೋ, ಹೆಂಗೋ, ಕಚ್ತದೋ ಏನೋ, ಅಂತ ಭಯ. ಕಾಡಿನ ಮಧ್ಯದಾಗೆ ನಮ್ಮ ಮನೆಗಳವೆ. ಮೊನ್ನೆ ಮೊನ್ನೆ ನಿಂಗನಿಗೆ ಹುಚ್ಚು ನಾಯಿ ಕಡಿದು ಅವನು ಬೆಂಗಳೂರಿಗೆ ಹೋಗಿ ಪಾಡುಪಟ್ಟ. ನನ್ನ ಕೈಲಿ ಬೇರೆ ಅದಾಗೋಕಿಲ್ಲ. ಅದು ಹುಚ್ಚುನಾಯಿನ ಹಂಗೇ ಕಾಣ್ತದೆ. ಬಂದೂಕದಾಗೆ ಸುಟ್ಟುಬಿಡಿ ನನ್ನೊಡೆಯ" ಎಂದನು.

ಹುಚ್ಚು ನಾಯಿ ಕೊಲೆಗೆ ಅರ್ಹವೆಂದೇ ಸುಂದರರಾಯನು ತೀರ್ಮಾನಿಸಿದನು. ಕೆಂಚನ ಸಲಹೆಯು ಅವನ ಮನಸ್ಸಿಗೆ ಒಪ್ಪಿತು. ಅವನು ನಾಯಿಯನ್ನು ಗುಂಡಿನಿಂದ ಕೊಲ್ಲುವುದೇ ಸರಿಯೆಂದು ಭಾವಿಸಿ ಬಂದೂಕವನ್ನು ತೆಗೆದು ಸಿದ್ಧಮಾಡಿಕೊಂಡು ಹೊರಟನು. ಇಂತಹ ಭಾರಿ ಬೇಟೆಗೆ ಹೊರಟ ಸುಂದರರಾಯನ ಹಿಂದೆ ಗೌರಮ್ಮನೂ ಶೇಷುವನ್ನು ಎತ್ತಿಕೊಂಡು ಹೊರಟಳು. ಬಚ್ಚಲ ಮನೆಯು ಬಹಳ ಚಿಕ್ಕದು. ಕಾಡಿನ ಮಧ್ಯದಲ್ಲಿ ಅಷ್ಟುಮಟ್ಟಿಗೆ ಕಟ್ಟಿದ್ದುದೇ ಹೆಚ್ಚು. ಮನುಷ್ಯರ ಸುಳಿವನ್ನು ಕಂಡೊಡನೆಯೇ ನಾಯಿಯು ಬಹಳ ರೋಷದಿಂದ ಬೊಗಳತೊಡಗಿತು. ಕ್ರೂರಕರ್ಮಿಗಳಾದ ಪಶುಗಳೆಂದು ಮನುಷ್ಯ ವರ್ಗದವರ ಮೇಲೆ ದೂರನ್ನು ಹೊರಿಸುವಂತೆ ತೋರುವ ಹಾಗೆ ಅದು ಬೊಗಳುತ್ತಿದ್ದಿತು. ಪಶುಗಳೆಂದು ಕರೆದು ಮನುಷ್ಯರು ತಮ್ಮನ್ನು ಕಡೆಗಣಿಸಿದ್ದರೂ, ಪಶುಗಳೇನೂ ಮನುಷ್ಯರು ಅರ್ಥಮಾಡುವ ರೀತಿಯಲ್ಲಿ ತಾವು ಪಶುಗಳೆಂದೂ, ಕೀಳೆಂದೂ ಬಹುಶಃ ತಿಳಿದುಕೊಂಡಿರಲಾರವು. ಅದು ಹೇಗಾದರೂ ಹೋಗಲಿ. ನಾಯಿ ಬೊಗಳುತ್ತಿದ್ದುದನ್ನು ನೋಡಿದರೆ, ಅದಕ್ಕೆ ರೋಷಕ್ಕಿಂತಲೂ ಸಂಕಟವೇ ಹೆಚ್ಚಾಗಿರುವಂತೆ ತೋರುತ್ತಿದ್ದಿತು. ಈ ಭಾವವು ತೋರಿಬಂದುದು ಗೌರಮ್ಮನ ಮನಸ್ಸಿಗೆ ಮಾತ್ರವೇ. ಸುಂದರರಾಯನ್ನೇನೋ "ಅದು ಹುಚ್ಚು ನಾಯಿ, ಅದರ ರೀತಿಯನ್ನು ನೋಡಿದರೇ ತಿಳಿಯುತ್ತೆ.

ಇದನ್ನು ಗುಂಡಿನಲ್ಲಿ ಹೊಡೆದೇ ಬಿಡಬೇಕು. ಫರಂಗಿಯವರು ಹಿಂಸೆಗೊಳಗಾದ ಕುದುರೆಗಳನ್ನು ಕೂಡ ಹೊಡೆದು ಬಿಡುತ್ತಾರೆ. ಹುಚ್ಚು ನಾಯಿ '' ಎಂದನು. ಅವನು ತನ್ನ ಕಡೆಗೆ ಬಂದೂಕವನ್ನು ಹಿಡಿದುದನ್ನು ಕಂಡ ಕೂಡಲೇ, ನಾಯಿಯು ಹೃದಯವೇಧಕವಾದ ಆರ್ತಸ್ವರದಿಂದ ಬೊಗಳತೊಡಗಿತು. ಗೌರಮ್ಮನು ಒಂದು ಕೈಯಲ್ಲಿ ಶೇಷುವನ್ನೂ, ಒಂದು ಕೈಯಿಂದ ತನ್ನ ಗಂಡನ ತೋಳನ್ನೂ ಹಿಡಿದುಕೊಂಡು, '' ನಾವು ಫರಂಗಿಯವರಂತಾದಾಗ ನೋಡಿಕೊಳ್ಳೋಣ. ನಿಮ್ಮ ಧರ್ಮಕ್ಕೆ ಅದನ್ನು ಹೊಡೆಯಬೇಡಿ. ಅದರ ಸ್ಥಿತಿಯನ್ನು ನೋಡಿದರೆ, ಅದಕ್ಕೆ ಏನೋ ಹಿಂಸೆಯಾಗುವಂತೆ ತೋರುತ್ತಿದೆ. ಇದರ ಮೇಲೋ ಅದು ಇನ್ನು ಕೆಲವು ದಿನದಲ್ಲೇ ಮರಿಹಾಕುವ ಹಾಗಿದೆ '' ಎಂದಳು.

ಸುಂದರರಾಯನು, '' ಹೆಂಗಸರ ಗೋಳೇ ಇಷ್ಟು. ಸ್ವಲ್ಪವಾದರೂ ನಾಗರಿಕತೆಯಿಲ್ಲ. ನೀನು ಅದಕ್ಕೆ ಬಾಣಂತನ ಮಾಡು. ಮರಿ ಹಾಕುತ್ತಂತೆ, ಮರಿ; ಅದು ಹುಚ್ಚು ನಾಯಿ '' ಎಂದನು. ಅಲ್ಲದೆ, ಅವನು ಬಂದೂಕವನ್ನು ಅದರ ಕಡೆಗೆ ತಿರುಗಿಸಿ ಗುರಿ ಹಿಡಿಯತೊಡಗಿದನು. ಗೌರಮ್ಮನು '' ನನಗೆ ನಾಗರಿಕತೆಯಿಲ್ಲ. ಅದೆಲ್ಲಾ ನನಗೆ ಬೇಡ. ನೀವು ಖಂಡಿತ ಹೊಡೀಬೇಡಿ '' ಎಂದಳು. ಯಾರೋ ತುಂಟರು ಅದನ್ನು ಬಹಳವಾಗಿ ಹಿಂಸೆಮಾಡಿದ್ದರು. ಅದರ ಮೈಮೇಲಿದ್ದ ಗಾಯಗಳನ್ನು ಕಂಡು ಗೌರಮ್ಮನು ಇದನ್ನು ನಿರ್ಧರಿಸಿ ತನ್ನ ಗಂಡನಿಗೂ ತಿಳಿಸಿದಳು. ಅಲ್ಲದೆ, ಅದನ್ನು ಬಂದೂಕದಿಂದ ಹೊಡೆದು ಕೊಲ್ಲಬೇಕೆಂದಿದ್ದ ಸುಂದರರಾಯನ ಪ್ರಯತ್ನವನ್ನೂ ನಿಲ್ಲಿಸಿದಳು. ಅದು ಹಿಂಸೆಗೆ ಸಿಕ್ಕಿ, ಕೊನೆಗೆ ದಿಕ್ಕೆಟ್ಟು ಅಲೆದಾಡಿ, ಹೊಟ್ಟೆಗಿಲ್ಲದೆ ಸೊರಗಿ, ಗರ್ಭದ ಭಾರದಿಂದ ಬಳಲಿ, ಆಯಾಸದಿಂದ ಬಸವಳಿದು, ಕೊನೆಗೆ ಸುಂದರರಾಯನು ವಾಸವಾಗಿದ್ದೆಡೆಗೆ ಬಂದು, ಬಚ್ಚಲು ಮನೆಯ ಕೋಟೆಯನ್ನು ಸೇರಿದ್ದಿತು. ಅದರ ಸಂಗತಿಗಳು ವಿಶದವಾಗಿ ತಿಳಿದಿಲ್ಲದೆ ಇದ್ದೂ ಕೂಡ, ಗೌರಮ್ಮನು ಅದರ ಸಂಕಟವನ್ನು ಕ್ಷಣ ಮಾತ್ರದಲ್ಲಿ ಗೊತ್ತುಮಾಡಿಕೊಂಡಳು.

ಅದರ ರೋಷವನ್ನು ನೋಡಿ ಅದಕ್ಕೆ ಹುಚ್ಚು ಹಿಡಿದೇ ಇರಬೇಕೆಂದು ಸುಂದರರಾಯನು ವಾದಿಸಿದನು. ಗೌರಮ್ಮನು ಅವನು ಹೇಳಿದುದು

ತಪ್ಪೆಂದು ತಿಳಿಸಿ, "ನೀವು ಸುಮ್ಮನೆ ಇರಿ ಮತ್ತೆ; ನಾನು ಈಗಲೇ ಅದರ ಕೋಪವನ್ನಿಳಿಸುತ್ತೇನೆ" ಎಂದು ಹೇಳಿ ಒಂದು ತಟ್ಟೆಯಲ್ಲಿ ಅನ್ನವನ್ನು ತಂದು ಬಚ್ಚಲು ಮನೆಯ ಬಾಗಿಲಿನ ಬಳಿಯಲ್ಲಿಟ್ಟಳು. ಅನ್ನ ಸಂಕಟ ಹತ್ತಿದ ಮಗುವಿನಂತೆ ಆ ನಾಯಿಯು ತಟ್ಟೆಯನ್ನು ಬರಿದು ಮಾಡಿತು. ಆದರೂ, ಯಾರಾದರೂ ತನ್ನ ಹತ್ತಿರಕ್ಕೆ ಬರುವ ಸುಳಿವನ್ನು ಕಂಡರೆ ಅದು ಇನ್ನೂ ಬೊಗಳುತ್ತಲೇ ಇದ್ದಿತು. ಗೌರಮ್ಮನು, "ಪಾಪ! ತುಂಬ ಘಾಸಿಪಟ್ಟಿದೆ, ಇದಕ್ಕೆ ಹುಚ್ಚಂತೆ! ಹಾಗೆ ಹೇಳೋರು ಹುಚ್ಚರು. ಅಲ್ಲವೇ, ಅಂದರೇ?" ಎಂದು ಸುಂದರರಾಯನ ಕಿವಿಯಲ್ಲಿ ಪಿಸುಗುಟ್ಟಿದಳು.

ಕೆಂಚನು ದೂರದಲ್ಲಿ ನಿಂತಿದ್ದುದೇ ಅವಳು ಹಾಗೆ ಮೆಲ್ಲಗೆ ಮಾತನಾಡಿದುದಕ್ಕೆ ಕಾರಣ. ಗೌರಮ್ಮನು ನಗುತ್ತ ನಗುತ್ತ ಹಾಗೆ ಹೇಳಿದುದನ್ನು ಕೇಳಿ ಸುಂದರರಾಯನು "ಆಗಲಿ, ಆಗಲಿ, ನಿನ್ನ ಕೈಗೆ ಸಿಕ್ಕಿದ ಮೇಲೆ ನಾನೂ ಹುಚ್ಚನೇ! ನಡೀಲಿ, ನಡೀಲಿ. ಇದಕ್ಕೂ ಬಾಣಂತನ ನಡೀಲಿ. ಬೇಕಾದರೆ ಚಂಚಮುರೇಖು ತರಿಸಿಕೊಡುತ್ತೇನೆ. ಗೋಂದಿನ ಲಡ್ಡಿಗೆ ಬೇಕಾದರೂ ಮಾಡಿಡು" ಎಂದು ಹೇಳಿ ಅವಳನ್ನು ಹಾಸ್ಯಮಾಡಿದನು. ಕೊನೆಗೆ ಸುಂದರರಾಯನು "ಪಾಪ! ಅದು ಹಸಿವಿನಿಂದಲೂ, ಹಿಂಸೆ ಪಟ್ಟಿದ್ದುದರಿಂದಲೂ ಹಾಗಾಡಿರಬೇಕು." "ಒಂದು ಹಸಿದ ನಾಯಿ ನೋಡಿಕೊಳ್ಳಲಾರದೆ ಇಷ್ಟು ರಗಳೆ ಮಾಡಿದೆಯಲ್ಲೋ! ಇದೇನೇ ಏನೋ ನಿನ್ನ ಬುದ್ಧಿವಂತಿಕೆ?" ಎಂದು ಹೇಳಿ ಕೆಂಚನನ್ನು ಮೂದಲಿಸಿದನು. ಕೆಂಚನು ಮಾತ್ರ ಅವನ ಕೈಕೆಳಗಿನ ಕೆಲಸಗಾರನಲ್ಲದೆ ಹೋಗಿದ್ದರೆ, "ಈ ಶಾಲುಜೋಡಿಯ ಮರ್ಯಾದೆ ನಿಮ್ಮಿಬ್ಬರಿಗೂ ಸಮಪಾಲಿನಲ್ಲಿ ಸಲ್ಲಬೇಕು" ಎಂದು ಹೇಳಬಹುದಾಗಿದ್ದಿತು. ಈಗ ಅದೆಲ್ಲಿ ಸಾಧ್ಯ? ಕೆಂಚನು ಅದನ್ನು ಕಿವಿಯ ಮೇಲೇ ಹಾಕಿಕೊಳ್ಳಲಿಲ್ಲ. ನಾಯಿ ಬರಿದು ಮಾಡಿದ್ದ ತಟ್ಟೆಯನ್ನು ತೊಳೆಯಲು ಅವನು ಹೊರಟುಹೋದನು. ಕೆಲವು ದಿನಗಳು ಕಳೆದುವು.

ಗೌರಮ್ಮನು ನಾಯಿಗೆ ಹೆಸರಿಡಬೇಕೆಂದಳು. ಅದಕ್ಕೆ "ಜೂಲಿ" ಯೆಂದು ನಾಮಕರಣವಾಯಿತು. ದಿನ ದಿನಕ್ಕೂ ಅವಳಲ್ಲಿ ಅದಕ್ಕೆ ಪ್ರೀತಿ ಮಮತೆಗಳು ಹುಟ್ಟಿದುವು. ಸ್ವಲ್ಪ ಕಾಲದಲ್ಲೇ ಅದು ಮರಿಗಳನ್ನು

ಹಾಕಿತು. ಅದರ ಮರಿಗಳೂ ಮುದ್ದಾಗಿದ್ದುವು. ಜೊತೆಯವರಿಲ್ಲದೆ ಒಂಟಿಯಾಗಿದ್ದ ಶೇಷುವಿಗೆ ಒಳ್ಳೆಯ ಸಂಗಡಿಗರು ದೊರೆತಂತಾಯಿತು. ಮೊದಲು ಮೊದಲು ಅವುಗಳನ್ನು ಕಂಡರೆ ಹೆದರಿ ದೂರ ಓಡುತ್ತಿದ್ದ ಶೇಷುವು ಕೆಲವು ದಿನಗಳಲ್ಲೇ ಅವುಗಳಿಲ್ಲದೆ ಅರೆಗಳಿಗೆಯೂ ಸುಮ್ಮನಿರ ಲಾರದೆ ಹೋದನು. ಇದರಿಂದ ಗೌರಮ್ಮನಿಗೆ ಮತ್ತೂ ಸಂತೋಷ ವಾಯಿತು. ಮರಿಗಳಿಗೂ, ತಾಯಿಗೂ, ಮನೆಯಲ್ಲಿ ಬೆಚ್ಚಗಿರುವ ಕಡೆಯಲ್ಲಿ ಸ್ಥಳವು ದೊರೆಯಿತು. ಹಿಟ್ಟಿಗಿಲ್ಲದವರಿಗೆ ಮಂಡಿಗೆಗಳ ಮೆದೆಯು ಲಭಿಸಿದಂತೆ ಅವಕ್ಕೆ ಹಾಲೂ ಅನ್ನ ಮುಂತಾದವು ದೊರೆಯಲು ಪ್ರಾರಂಭ ವಾಯಿತು. ಗೋಣಿಯ ಪಟ್ಟೆಯ ಸುಪ್ಪತ್ತಿಗೆಯೂ ದೊರೆಯಿತು. ಆದರೆ, ಸುಂದರರಾಯನಿಗೆ ಮಾತ್ರ ಮನಸ್ಸಿಗೆ ನೆಮ್ಮದಿಯಿಲ್ಲ. ಅವನು ತ್ರಿಕರಣಶುದ್ಧಿಯಿಂದ ಮನಃಪೂರ್ವಕವಾಗಿ ಸರ್ಕಾರದ ಕೆಲಸವನ್ನು ಮಾಡುತ್ತಿದ್ದವನು; ಅವನ ಬರೆವಣಿಗೆಯ ಕೆಲಸಕ್ಕೆ ಮನಸ್ಸು ಸ್ತಿಮಿತ ವಾಗಿಲ್ಲದೆ ವಿಘ್ನವಾಗುವಂತೆ ಅವು ಬೊಗಳಿಬಿಡುತ್ತಿದ್ದುವು. ಆದರಿಂದ ಅವನು ಕಿಡಿಕಿಡಿಯಾಗುತ್ತಿದ್ದನು.

ಒಂದು ದಿನ ಗೌರಮ್ಮನು "ನಿಮ್ಮ ಮಗನ ಹಾವಳಿ ಅಸಾಧ್ಯ ವಾಗಿದೆ. ನಾನು ಇವೊತ್ತು ಹಾಲನ್ನು ನೆಲುವಿನ ಮೇಲಿಡದೆ ಮರೆತು ಬಿಟ್ಟೆ. ಶೇಷು ತಾನೂ ಹಾಲು ಕುಡಿದು ನಾಯಿಮರಿಗಳಿಗೂ ಹಾಲು ಕುಡಿಸಿಬಿಟ್ಟಿದ್ದಾನೆ. ಹಾಲೆಲ್ಲಾ ಚೆಲ್ಲಿಬಿಟ್ಟಿದ್ದಾನೆ, ಅವಕ್ಕೆ ಭತ್ಯ ಅಳೆಯೋ ನಡಗರದಲ್ಲಿ. ನಾನು ಪಾತ್ರೆಗಳಿಗೆ ಹುಳಿಯಿಕ್ಕಿ ತೊಳೆದುಕೊಂಡು ಒಳಕ್ಕೆ ಬರೋದರಲ್ಲಿ ಇಷ್ಟು ಪ್ರಕರಣವೂ ನಡೆದುಹೋಗಿದೆ. ಇವೊತ್ತು ನಿಮಗೆ ಊಟವೂ ಹೊತ್ತಾಯಿತು, ಕಾಫಿಯೂ ಇಲ್ಲ. ಹಾಲು ತರಿಸಿ ಕೊಟ್ಟರೆ ನಿಮಗೂ, ನಿಮ್ಮಿಂದ ನಮಗೂ, ಕಾಫಿ ಸಮಾರಾಧನೆ" ಎಂದು ಹೇಳಿ ನಕ್ಕಳು. ಶೇಷುವು ಹಾಲಿನ ಪಾತ್ರೆಯು ಬರಿದಾದುದಕ್ಕೆ ಹಿಗ್ಗುತ್ತ, ಲಗ್ಗೆಯನ್ನೇರಿದ ದಳಪತಿಯಂತೆ ಲಲ್ಲೆಮಾಡುತ್ತ, ಬರಿಯ ಪಾತ್ರೆಯನ್ನು ಉರುಳಿಸಿಕೊಂಡು ತಾಯಿತಂದೆಗಳ ಬಳಿಗೆ ಬಂದನು. ಸುಂದರರಾಯನು "ಏನೇನಾಗುತ್ತೋ ಎಲ್ಲಾ ಆಗಲಿ, ಈ ಬಾಣಂತನದ ವೈಭವದಿಂದ ಉಳಿಗಾಲವೆಲ್ಲಿ ಬಂತು? ಎಲ್ಲೋ ಹಾಳು ನಾಯಿ?" ಎಂದು ಹೇಳಿ

ಸುಮ್ಮನಾದನು. "ಶೇಷುವಿನ ತಪ್ಪಿಗೆ ನಾಯಿಗೆ ಬೈಗುಳವೆ?" ಎಂದು ಹೇಳಿ ಗೌರಮ್ಮನು ನಕ್ಕಳು.

೩

ಒಂದು ದಿನ ಸಮರಾತ್ರಿ. ಸುಂದರರಾಯನಿಗೆ ಗಾಢನಿದ್ರೆಯು ಹತ್ತಿದೆ. ಮರುದಿನವೇ ಲೆಕ್ಕಪಕ್ಕಗಳನ್ನು ಕಳುಹಿಸಬೇಕಾಗಿದ್ದುದರಿಂದ ರಾತ್ರಿ ಹನ್ನೊಂದು ಗಂಟೆಯವರೆಗೂ ಅವುಗಳನ್ನು ನೋಡುತ್ತಿದ್ದು ಸುಂದರರಾಯನು ಆ ಬಳಿಕ ಮಲಗಿಕೊಂಡನು. ಚೆನ್ನಾಗಿ ನಿದ್ರೆಯು ಹತ್ತಿತು. ಆ ದಿನ ಗೌರಮ್ಮನೂ ಬಹಳವಾಗಿ ಬಳಲಿದ್ದುದರಿಂದ ಅವಳಿಗೂ ಮೈಮರೆತು ನಿದ್ರೆ. ಸರಿರಾತ್ರಿಯಾಗಿದೆ. ಜೂಲಿಯು ತನ್ನ ದೊಡ್ಡ ಗಂಟಲಿನಿಂದ ಬೊಗಳತೊಡಗಿತು. ಸುಂದರರಾಯನಿಗೆ ಎಚ್ಚರವಾಯಿತು. ಆದರೆ ಕಣ್ಣುಬಿಡಲು ಜೂಗರ. "ಹಾಳು ನಾಯಿಂದ ಉಳಿಗಾಲವಿಲ್ಲ" ವೆಂದು ಕೋಪವು ಬೇರೆ. ಜೂಲಿಯು ಮತ್ತೂ ಹೆಚ್ಚಾಗಿ ಬಗುಳಿತು. ಸುಂಡರರಾಯನು ಕಣ್ಣುಗಳನ್ನು ಬಿಡಲು ಎಷ್ಟು ಪ್ರಯತ್ನಮಾಡಿದರೂ, ಅವನ ರೆಪ್ಪೆಗಳು ಮರವಜ್ರದ ಸರಿಯನ್ನು ಬಳಿದಂತೆ ಬಿಗಿದುಕೊಂಡಿವೆ. ಅವನು ಎದ್ದು ಕುಳಿತಿದ್ದರೂ ತಲೆಯು ಕೊರಳ ಮೇಲೆ ನಿಲ್ಲಲೊಲ್ಲದೆ ತಲೆ ದಿಂಬಿನ ಕಡೆಗೆ ತಾನಾಗಿಯೇ ಬಾಗಿಹೋಗುತ್ತಿದೆ. ಸುಂದರರಾಯನು ಕಣ್ಣುಗಳನ್ನು ಮುಚ್ಚಿಕೊಂಡೇ ಗೋಡೆಯ ಕಡೆಗೆ ಕೈಗಳಿಂದ ತಡವರಿಸಿ ಬೆತ್ತವನ್ನು ತೆಗೆದುಕೊಂಡು ಬೀಸಿ ಅದರಿಂದ ನಾಯಿಗೆ ಒಂದೆರಡು ಏಟುಗಳನ್ನು ಕೊಟ್ಟು, ಅದು ಕಿರಚಿಕೊಂಡು ದೂರಹೋದ ಬಳಿಕ ತಾನು ಸಾಧಿಸಿದ ಮಹಾಕಾರ್ಯಕ್ಕೆ ಅರನಿದ್ರೆಯು ಜೋಂಪಿನಲ್ಲೂ ತಾನೇ ತೃಪ್ತನಾಗಿ ಧೊಪ್ಪನೆ ಹಾಸಿಗೆಯ ಮೇಲೆ ಬಿದ್ದುಕೊಂಡನು. ಅವನಿಗೆ ಮತ್ತೆ ನಿದ್ರೆಯು ಹತ್ತಿತು. ಇಷ್ಟೂ ಕೆಲವು ಕ್ಷಣಗಳಲ್ಲಿ ನಡೆದು ಹೋಯಿತು.

ನಾಯಿಯು ಮತ್ತೆ ಗಟ್ಟಿಯಾಗಿ ಬೊಗಳುತ್ತ, ಕೃತಕ ಕೊಟ್ಟಡಿಗಳನ್ನು ಕಲ್ಪಿಸಿದ್ದ ಬಿದರಿನ ತಡಿಕೆಗಳನ್ನು ಕೆರೆಯುತ್ತ ಗೌರಮ್ಮನ ಬಳಿಗೆ ಹೋಗಿ ಹೊದಿಕೆಯನ್ನು ಹಲ್ಲಿನಿಂದ ಕಚ್ಚಿ ಎಳೆದು, ಗಟ್ಟಿಯಾಗಿ ಬೊಗಳಿತು.

ಗೌರಮ್ಮನಿಗೆ ತಟಕ್ಕನೆ ಎಚ್ಚರವಾಯಿತು. ಅವಳು ಎದ್ದು ಕುಳಿತು ಕಣ್ಣುಬಿಟ್ಟಳು. ತಡಿಕೆಗಳಿಗೆ ಉರಿಯು ತಗಲಿದೆ. ಬಟ್ಟೆಗಳು ನೇಲೆಯ ಮೇಲೂ, ಸ್ಟ್ಯಾಂಡಿನ ಮೇಲೂ ಉರಿಯುತ್ತಿವೆ. ಇದಕ್ಕೆ ಕಾರಣವೇನೆಂದರೆ—ಅವರು ದೂರದಲ್ಲಿಟ್ಟಿದ್ದ ದೀಪವನ್ನು ಹೆಗ್ಗಣವು ಉರುಳಿಸಿ ಹೊರಟುಹೋಯಿತು. ಸೀಮೆಯ ಎಣ್ಣೆಯು ಸುರಿದು, ಚಿಮ್ನಿಯೂ ಒಡೆದು, ಹತ್ತಿರದಲ್ಲಿ ಬಿಚ್ಚಿಬಿಸಾಡಿದ್ದ ಶೀನುವಿನ ಚಡ್ಡಿಗೆ ಉರಿಯು ತಗಲಿ ಅಲ್ಲಿಂದ ಮುಂದಕ್ಕೆ ವ್ಯಾಪಿಸಿದ್ದಿತು. ಗೌರಮ್ಮನು ದಿಗಿಲುಬಿದ್ದು, 'ಬೆಂಕಿ ಬಿದ್ದಿದೆ. ಮನೆ ಉರೀತಾ ಇದೆ, ಏಳಿ, ಬೇಗ ಏಳಿ' ಎಂದು ತನ್ನ ಗಂಡನನ್ನು ಎಬ್ಬಿಸಿ ಶೀನುವನ್ನೆತ್ತಿಕೊಂಡು, ಸುಂದರರಾಯನೊಡನೆ ಹೊರಗೆ ಬಂದಳು. ನಾಯಿಯು ಬೊಗಳಿದುದೇಕೆಂಬುದು ಸುಂದರರಾಯನಿಗೆ ಕ್ಷಣಮಾತ್ರದಲ್ಲಿ ಗೋಚರವಾಯಿತು.

ಅವರು ಮೂವರೂ ಹೊರಗೆ ಬಂದರೂ, ನಾಯಿಯು ಮಾತ್ರ ಹೊರಗೆ ಬಾರದೆ ಬೊಗಳುತ್ತಿದ್ದಿತು. 'ಹೆಂಗರುಳಿನ ಹೆಂಗಸು' ಗೌರಮ್ಮನಿಗೆ ಮಾತ್ರ ಅದರ ಕಾರಣವು ತಿಳಿಯಿತು. ಅವಳು ಸುಂದರರಾಯನೊಡನೆ 'ನಮ್ಮನ್ನು ಎಬ್ಬಿಸಿ ಹೊರಕ್ಕೆ ಕಳುಹಿಸಿದ ಜೂಲಿ ಈಗ ಮರಿಗಳನ್ನು ಎಬ್ಬಿಸ್ತಾ ಇದೆ. ಬಗಳ್ತಾ ಇದೆ. ಉರಿ ಹೆಚ್ಚಿತು. ಅಯ್ಯೋ! ನಮ್ಮನ್ನುಳಿಸಿದ ನಾಯಿ ಮರಿಗಳೊಡನೆ ಬೆಂದುಹೋಗುತ್ತೆ' ಎಂದಳು. ಸುಂದರರಾಯನು ಅಷ್ಟರಲ್ಲಿ ಕೂಗು ಹಾಕಿದುದನ್ನು ಕೇಳಿ ಕೆಂಚನೇ ಮುಂತಾದವರು, ಇನ್ನೂ ಅನೇಕರು ಓಡಿಬರುವುದರಲ್ಲಿದ್ದರು. ಸುಂದರರಾಯನು ಗೌರಮ್ಮನ ಮಾತುಗಳು ಪೂರೈಸಿದೊಡನೆಯೇ ಸರಕ್ಕನೆ ಒಳಕ್ಕೆ ನುಗ್ಗಿ ನಾಯಿಮರಿಗಳು ಮಲಗಿದ್ದ ಗೋಣಿಯ ಚೀಲವನ್ನು ಮುದುಡಿ ಹಿಡಿದುಕೊಂಡು ಓಡಿಬಂದನು. ಆಗ ಉರಿಯುತ್ತಿದ್ದ ಬಿದಿರು ತಡಿಕೆಯ ಕೆಂಡವು ಅವನ ಬಲದ ಕೆನ್ನೆಗೆ ತಗಲಿ ಅದರ ಮೇಲೆ ಬರೆಯನ್ನೆಳೆಯಿತು. 'ಜೂಲಿ'ಯೂ ಕೃತಜ್ಞತೆಯಿಂದ ಬಾಲವನ್ನು ಅಲ್ಲಾಡಿಸುತ್ತ ಅವನ ಹಿಂದೆ ಓಡಿತು. ಆ ವೇಳೆಗೆ ಆಳುಗಳು ಓಡಿಬಂದು ನೀರನ್ನೂ ಮಣ್ಣನ್ನೂ ಎರಚಿ ಉರಿಯನ್ನು ಆರಿಸುವ ಪ್ರಯತ್ನಮಾಡಿದರು. ಕೆಲವು ಬಟ್ಟೆಗಳೂ, ಇತರ ಸಾಮಾನುಗಳೂ ಸುಟ್ಟುಹೋದುವು. ಆದರೂ ಇನ್ನು

ಒಂದೆರಡು ನಿಮಿಷ ತಡವಾಗಿ ಗೌರಮ್ಮನು ಎದ್ದಿದ್ದರೆ, ಮನೆಯಲ್ಲಿ ಮಲಗಿದ್ದವರಲ್ಲಿ ಒಬ್ಬರ ಪ್ರಾಣವೂ ಉಳಿಯುತ್ತಿರಲಿಲ್ಲ.

ಮಾರನೆಯ ದಿನ ಮಧ್ಯಾಹ್ನದ ಮೇಲೆ ಸುಂದರರಾಯನು ತಿಂಡಿಯನ್ನು ತಿನ್ನುತ್ತ ಕುಳಿತು ತನ್ನ ಹೆಂಡತಿಯೊಡನೆ 'ನೀನು ಹೇಳಿದ್ದು ಎರಡೂ ನಿಜವಾಯಿತು' ಎಂದನು. ಗೌರಮ್ಮನು ಅವನ ಮಾತು ತನಗೆ ಅರ್ಥವಾಗಲಿಲ್ಲವೆಂದಳು. ಸುಂದರರಾಯನು "ನಾನು ನಡುಮನೆಯಲ್ಲಿ ಬಿದಿರು ತಡಿಕೆಯನ್ನು ಹಾಕಿಸಿ ಕೃತಕವಾದ ಕೊಟಡಿಗಳನ್ನು ಮಾಡಿಸಿದ ದಿನ ನೀನು ಹೇಳಿದ್ದೆ—'ಕೌರವರಾಯ ತನ್ನ ಹಗೆಯೋರಿಗೆ ಅರಗಿನ ಮನೆಕಟ್ಟಿಸಿ ಉರಿಸಿದನಂತೆ. ನೀವು ನಿಮಗೂ, ನಿಮ್ಮ ಪ್ರೀತಿಯ ಹೆಂಡತಿ ಮಕ್ಕಳಿಗೂ, ಈ ಬಿದಿರು ಕೊಟಡಿಗಳನ್ನ ಕಟ್ಟಿಸಿದ್ದೀರಿ. ಬೆಂಕಿ ಬಿದ್ದರೇನು ಗತಿ? ಅವುಗಳ ತಡಿಕೆಗಳನ್ನ ಸಗಣಿಬಗ್ಗಡದಲ್ಲಿ ಸಾರಿಸಿ, ಮಣ್ಣುಮೆತ್ತಿಸಿದರೆ ಇದ್ದದ್ದರಲ್ಲ ವಾಸಿ' ಅಂದಿದ್ದೆ. ನಾನು ಅದು ನಾಗರಿಕತೆಗೆ ಸರಿ ಹೋಗೋದಿಲ್ಲ. ಅಸಹ್ಯವೆಂತ ಸುಮ್ಮನಾದೆ. ನಮ್ಮ ಭಾಗಕ್ಕೆ ಇದೇ ಅರಗಿನ ಮನೆಯಾಯಿತು. ನದ್ಯ ಜೀವದಿಂದ ಉಳಿದೆವು" ಎಂದು ಹೇಳಿ ನಕ್ಕನು. ಗೌರಮ್ಮನು ತಾನೂ ನಕ್ಕು "ಒಂದಾಯಿತು ಇನ್ನೊಂದೇನು?" ಎಂದಳು.

ಸುಂದರರಾಯನು ಸ್ವಲ್ಪ ಹೊತ್ತು ಸುಮ್ಮನೆ ಕುಳಿತಿದ್ದು ನಿಟ್ಟುಸಿರು ಬಿಟ್ಟು "ಅದೇ! ನೀನು ಆಗಾಗ ಪ್ರಾಣಿದಯೆ ಪಾಠ ಹೇಳಿಕೊಟ್ಟು ಬೋಧಿಸಿದ್ದೆ ನೋಡು ಅದು. ನೀನು ಏನು ಬೋಧಿಸಿದ್ದೆ ಜ್ಞಾಪಕವಿದೆಯೇ ನಿನಗೆ? ಒಂದು ದಿನ ಕುಮಾರಸ್ವಾಮಿ ಒಂದು ಬೆಕ್ಕಿನ ಮುಖ ಪರಚಿದ್ದ. ಅದಕ್ಕೆ ಗಾಯವಾಯಿತು. ಆ ದಿನ ಸಾಯಂಕಾಲ ಪಾರ್ವತೀದೇವಿಯ ಮುಖದಮೇಲೆ ಗಾಯವಾಗಿ ರಕ್ತ ಸುರೀತಿತ್ತು. ಕುಮಾರಸ್ವಾಮಿ ಸಂಕಟಪಟ್ಟು ಅದಕ್ಕೆ ಕಾರಣ ಕೇಳಿದ. ಆ ಮಹಾತಾಯಿ ನಕ್ಕು 'ಇದು ನಿನ್ನ ಕೆಲಸ'ವೆಂದಳು. ಅವನು ಕಕ್ಕುಬಿಕ್ಕಾಗಿ ಅದು ಹೇಗೆಂತ ಕೇಳಿದ. ಅದಕ್ಕೆ ಲೋಕಮಾತೆ 'ನೀನು ನನ್ನ ಸೃಷ್ಟಿಗೆ ಸೇರಿದ ಯಾವ ಪ್ರಾಣಿಗೆ ಹಿಂಸೆಮಾಡಿದರೂ ನನಗೇ ಹಿಂಸೆಯಾಗುತ್ತೆ' ಅಂತ ಬುದ್ಧಿ ಹೇಳಿದಳು. ಹೀಗೆಲ್ಲಾ ನೀನು ಕಥೆ ಹೇಳಿದ್ದೆ. ಅದಕ್ಕೆ ನಾನು ಇದೆಲ್ಲಾ ಗೊಡ್ಡು

ಪುರಾಣದ ಕಟ್ಟುಕಥೆಯೆಂದು ಹಾಸ್ಯಮಾಡಿದ್ದೆ. ನುಳ್ಳೋ ನಿಜವೋ ಕಥೆಯಂತು ನೊಗಸಾಗಿದೆ. ನಾನು ನಿನ್ನೆ ರಾತ್ರಿ ಅನ್ಯಾಯವಾಗಿ ಜೂಲಿಯನ್ನ ಹೊಡೆದು ಬಾಸುಂಡೆ ಬರಿಸಿದ್ದು, ಆದಕ್ಕೆ ಶಿಕ್ಷೆಯಾಗಿ, ನನ್ನ ಕೆನ್ನೆ ನುಟ್ಟು ಬರೆಹಾಕಿದ ಹಾಗಾದ್ದು, ಇದನ್ನೆಲ್ಲಾ ಆ ಕಥೆ ಜೊತೆಗೆ ಯೋಚಿಸಿ ನೋಡಿದೆ. ಮನಸ್ಸಿಗೆ ಬಹಳ ವ್ಯಥೆಯಾಗುತ್ತಿದೆ'' ಎಂದು ಸಂತಾಪಪಟ್ಟನು.

ಆ ವೇಳೆಗೆ 'ಜೂಲಿ'ಯೂ ಅಲ್ಲಿಗೆ ಬಂದಿತು. ಅವನು ಅದಕ್ಕೆ ಆದರದಿಂದ ತಿಂಡಿಯನ್ನು ಕೊಟ್ಟು, ತಾಯಿಯೊಡನೆ ಬಂದ ಮರಿಗಳ ತಲೆಯನ್ನು ನವರಿ, ಕೊನೆಗೆ ಪ್ರೀತಿಯಿಂದ 'ಜೂಲಿ'ಯ ಕೊರಳನ್ನು ತಬ್ಬಿಹಿಡಿದು, 'ನಮ್ಮ ಶೇಷುವನ್ನುಳಿಸಿದ ಜೂಲಿ; ನನ್ನ ಗೌರುವನ್ನುಳಿಸಿದ ಜೂಲಿ; ನನ್ನ ಪ್ರಾಣವನ್ನುಳಿಸಿದ ಜೂಲಿ' ಎಂದನು. ಗೌರಮ್ಮನು ನಗುತ್ತ 'ಇದೆಲ್ಲಾ ನಾನು ತೋರಿಸಿದ ಪ್ರಾಣಿದಯೆಯ ಫಲ. ಹೀಗಿದ್ದೂ ಆಗ ನನ್ನ ಬೈದಿರಿ' ಎಂದಳು. ಸುಂದರರಾಯನು 'ಹಾಗೆನ್ನಬೇಡ; ಅದು ಸಾಲದು' ಎಂದನು.

ಗೌರಮ್ಮನು ಆಶ್ಚರ್ಯದಿಂದ ಕೂಡಿ 'ಮತ್ತೇನು ಹೇಳ ಬೇಕಾಗಿತ್ತು?' ಎಂದಳು. ಸುಂದರರಾಯನು 'ನಾನು ಇದುವರೆಗೂ ಸಂಸ್ಕಾರವಿಲ್ಲದಿದ್ದರೂ ಹೊರಗಿನ ಆಡಂಬರದ ಒಣನಾಗರಿಕನಾಗಿದ್ದೆ. ನಮ್ಮ ಉಪಾಧ್ಯಾಯರು ನನ್ನನ್ನು ಕಾಡು ಪಾಪನೆಂದು ಕರೆಯುತ್ತಿದ್ದರು. ಆ ಹೆಸರು ಈಗಲೂ ನನಗೆ ಸರಿಯಾಗಿದೆ. ರೂಪಕ್ಕೆ ಮಾತ್ರವೇ ಅಲ್ಲದೆ ಗುಣಕ್ಕೂ ಆ ಹೆಸರು ನನಗೆ ಅನ್ವಯಿಸುತ್ತದೆ. ಈಗ ನಡೆದದ್ದು ಪ್ರಾಣಿ ದಯೆಯ ಫಲವಲ್ಲ; ಕಾಡು ಪಾಪನ ಕಣ್ಣುಪರೆಯನ್ನು ಹಾರಿಸಲು ಭಗವಂತನು ಮಾಡಿದ ಮಾಯೆ ಎಂದು ಹೇಳು. ಗೌರು, ಗೌರು, ನಿಜವಾಗಿ ಹೇಳುತ್ತೇನೆ ಕೇಳು. ಇನ್ನು ಎಂದೆಂದಿಗೂ ಪ್ರಾಣಿಹಿಂಸೆ ಮಾಡುವುದಿಲ್ಲ. ಅಬ್ಬ! ಮನಸ್ಸಿಗೆ ಹೇಗೋ ಆಗುತ್ತದೆ. ಮುಂದೆ ನಾವೇ ಪ್ರಾಣಿಗಳಾಗಿ ಹುಟ್ಟಿದರೋ? ಪಾಪ, ಪಾಪ! ಉಪಕಾರ ಮಾಡಲು ಬಂದ ಜೂಲಿಗೆ ನನ್ನಿಂದ ಎಷ್ಟು ಹಿಂಸೆಯಾಯಿತು!' ಎಂದು ಹೇಳಿ ಕಂಬನಿದುಂಬಿದನು. ಗೌರಮ್ಮನು ಆದರದಿಂದ ಅವನ ಬೆನ್ನನ್ನು

ಸವರಿ ಸುಮ್ಮನಿದ್ದಳು. ಮಾತುಗಳಿಗೆ ನಿಲುಕದ ಭಾವವನ್ನು ಸೂಚಿಸಲು ಮೌನವೇ ಮುಖ್ಯ ಸಾಧನವೆಂದರೆ ತಪ್ಪಾದೀತೆ? ದಂಪತಿಗಳಿಬ್ಬರೂ ಸ್ವಲ್ಪ ಹೊತ್ತು ನೀರವವಾಗಿ ಸುಮ್ಮನಿದ್ದರು. ಆ ವೇಳೆಗೆ ಶೇಷುವು ನಿದ್ರೆಯಿಂದ ಎಚ್ಚತ್ತುದು ಅವರಿಬ್ಬರಿಗೂ ಸಹಾಯವಾಯಿತು.

———

# ಪುಸ್ತಕ ಪಿಶಾಚ

೧

ವಿಶಾಲಾಕ್ಷಮ್ಮನವರಿಗೆ ಅಂದು ಅತಿ ಹೆಚ್ಚಿನ ಸಂತೋಷ. ಅವರ ಸಂಭ್ರಮವನ್ನೂ ಸಂತೋಷವನ್ನೂ ನೋಡಿದವರಿಗೆ ಅವರ ಮನಸ್ಸಿನ ಸಮತೆಯೆಲ್ಲಿ ತಪ್ಪಿ ಹೋಗುವುದೋ ಎಂಬ ಶಂಕೆಯುಂಟಾಗುವಂತಿದ್ದಿತು. ಅಡಿಗೆಯ ಮನೆಯಲ್ಲಿ ಕೆಲಸ ಮಾಡುವುದಕ್ಕೇ ಅವರಿಗೆ ತೋರದು. ಬಹಳ ಹೊತ್ತಿನಿಂದ ನೀರು ಕುದಿಯುತ್ತಿದ್ದರೂ ಪಾತ್ರೆಗೆ ಬೇಳೆಯನ್ನು ಹಾಕಬೇಕೆಂಬುದು ಕೂಡ ಮರೆತುಹೋಯಿತು. ಮಗನ ಅಭ್ಯುದಯದಿಂದ ತಾಯಿಗುಂಟಾಗುವ ಸಂತೋಷವೆಷ್ಟೆಂಬುದನ್ನು ತಾಯಿಯರ ಹೃದಯವು ಮಾತ್ರವೇ ಬಲ್ಲುದು.

ವಿಶಾಲಾಕ್ಷಮ್ಮನವರು ಪಡಸಾಲೆಯಲ್ಲಿ ಪುಸ್ತಕವನ್ನೋದುತ್ತ ಕುಳಿತಿದ್ದ ಲಕ್ಷ್ಮಣರಾಯನ ಬಳಿಗೆ ಬಂದು "ಲಚ್ಚು, ಲಚ್ಚು, ಅದನ್ನ ಇನ್ನೊಂದು ಸಲ ನೋಡೊ. ಕೈತಪ್ಪಿ ಒಂದು ಬರೆಯೋಕೆ ಇನ್ನೊಂದು ಬರೆದಿರಬಹುದೋ ಏನೊ! ಇಷ್ಟು ಹಣ ಕೊಟ್ಟಾರೇನೊ?" ಎಂದರು. ಲಕ್ಷ್ಮಣರಾಯನು "ಇದೇನು ಮಕ್ಕಳಾಟವೆಂದು ತಿಳಿದುಕೊಂಡಿದ್ದೀಯೇನಮ್ಮ? ತಪ್ಪೂ ಬಿದ್ದಿಲ್ಲ. ಒಂದೂ ಇಲ್ಲ" ಎಂದು ಉತ್ತರ ಹೇಳಿದನು.

ವಿಶಾಲಾಕ್ಷಮ್ಮನವರ ಕಣ್ಣುಗಳು ಆನಂದದಿಂದ ಅರಳಿದುವು. ಅವರು "ಲಚ್ಚು, ಲಚ್ಚು, ತುಂಬ ನೆರಳುಕೊಡುವ ದೊಡ್ಡ ಆಲದಮರವಾಗಿ ನೂರುಕಾಲ ಆಯುಸ್ಸು ಹಾಕಿಕೊಂಡು ಸುಖವಾಗಿ ಬಾಳಪ್ಪ. ನಿನ್ನ ನೋಡಿದರೆ ಎಲ್ಲಿ ದೃಷ್ಟಿಯಾದೀತೋ ಅಂತ ಭಯ! ಅದಕ್ಕೋಸ್ಕರವೇ ನಾನು ನನ್ನ ಮನಸ್ಸಿಗೆ ತೃಪ್ತಿಯಾಗುವಂತೆ ನೋಡುವುದು ಕೂಡಾ ಇಲ್ಲಪ್ಪ" ಎಂದರು. ಲಕ್ಷ್ಮಣರಾಯನು ಮತ್ತೆ ಪುಸ್ತಕದ ಕಡೆಗೆ ಗಮನ

ಕೊಟ್ಟು ವ್ಯಗ್ರಚಿತ್ತನಾಗಿದ್ದ ಕಾರಣ, ಆ ಮಾತುಗಳನ್ನು ಅವನು ಕೇಳಿದಂತೆ ತೋರಲಿಲ್ಲ. ಒಂದೆರಡು ಕ್ಷಣಗಳಲ್ಲಿಯೇ ಅವನು ಮೈಮುರಿದು, "ಅಮ್ಮ, ಅಮ್ಮ" ಎಂದು ಹೇಳಿ ದೊಡ್ಡದಾಗಿ ಬಾಯಿಬಿಟ್ಟು ಆಕಳಿಸಿದನು.

ವಿಶಾಲಾಕ್ಷಮ್ಮನವರು ಆತಂಕಪಡುತ್ತ "ಏನಾಗುತ್ತೆ ಲಚ್ಚು? ಯಾಕಪ್ಪ ಮೈಮುರೀತೀಯೆ? ಆಕಳಿಕೆ ಬೇರೆ. ನಿನ್ನದು ಬಲು ದೊಡ್ಡ ಫಜೀತಿಯಪ್ಪ. ಇನ್ನಾದರೂ ಹಾಯಾಗಿರದೆ ಈಗಲೂ ಓದಬೇಕೆ? ಏನು ಹಾಳು ಓದೋ ಕಾಣೆ. ಸ್ವಸ್ಥವಾಗಿಲ್ಲವೇ ಅಪ್ಪ?" ಎಂದರು. ಲಕ್ಷ್ಮಣ ರಾಯನು "ಸ್ವಸ್ಥವಾಗಿದ್ದೇನಮ್ಮ. ಅಮ್ಮ, ಇನ್ನು ಮೇಲೆ ನಮ್ಮ ಮನೆ ವಿಚಾರವೆಲ್ಲ ಬದಲಾಯಿಸಿ ಬೇರೆ ರೀತಿ ಮಾಡಿಬಿಡಬೇಕು. ಹೀಗೆಲ್ಲಾ ಇದ್ದರೆ ಸರಿಯಿಲ್ಲ" ಎಂದನು. ವಿಶಾಲಾಕ್ಷಮ್ಮನವರು "ಸದ್ಯ ಸ್ವಸ್ಥ ವಾಗಿದ್ದೀಯಲ್ಲ! ನನ್ನ ಧೊರೆಯೆ, ನೀನು ಸ್ವಸ್ಥವಾಗಿದ್ದರೆ ಸಾಕು. ಅದೇನೋ ಬದಲಾಯಿಸಬೇಕೆಂದೆ. ಏನು ಬೇಕಾದರೂ ಬದಲಾಯಿಸು" ಎಂದು ಹೇಳಿ ಮಂಕಾಗಿ ಒಂದೆರಡು ಕ್ಷಣಗಳ ಕಾಲ ನಿಂತಿದ್ದರು. ಆ ಬಳಿಕ ಅವರು "ನನ್ನ ದುರದೃಷ್ಟ. ಏನಾದರೇನು? ಅವರು ನೋಡ ಲಿಲ್ಲ........ಅವರು" ಎಂದು ಹೇಳಿ ಮುಂದೆ ಮಾತನಾಡಲಾರದೆ ಕಂಬನಿದುಂಬಿದರು. ಲಕ್ಷ್ಮಣರಾಯನು ಕಾಲೋಚಿತವಾಗಿ ಸಮಾಧಾನ ಹೇಳಿದನು.

ನಮ್ಮ ದೇಶದಲ್ಲಿ ಇಂಗ್ಲಿಷ್ ವಿದ್ಯಾಭ್ಯಾಸ ಮಾಡಿದವರು ಆಗ ಬಹಳ ವಿರಳರಾಗಿದ್ದರು. ಈಗಿನ ಸ್ಥಿತಿಗೂ, ಈಗ್ಗೆ ಐವತ್ತು ವರುಷಗಳಿಗಿಂತ ಹಿಂದಿನದಾದ ಆಗಿನ ಸ್ಥಿತಿಗೂ ಬಹಳ ವ್ಯತ್ಯಾಸವಿದ್ದಿತು. "ಇಂಗ್ಲಿಷ್ ಓದುವವರೇ" ಇಲ್ಲದ ಕಾಲದಲ್ಲಿ ಜೊತೆಯವರೆಲ್ಲರನ್ನೂ ಮೀರಿಸಿ ಮೊದಲ ನೆಯ ತರಗತಿಯಲ್ಲಿ ಎಂ.ಎ. ಪರೀಕ್ಷೆಯಲ್ಲಿ ತೇರ್ಗಡೆಯಾಗಿದ್ದ ಲಕ್ಷ್ಮಣ ರಾಯನಿಗೆ ಆಗ ಲಭಿಸಿದ ಗೌರವವನ್ನು ಹೇಳಬೇಕಾದುದೇ ಇಲ್ಲ. ತಾಜಮಹಲನ್ನು ಕಟ್ಟಿ ಪೂರೈಸಿದ ದಿನ ಅದನ್ನು ನೋಡಿ ಆನಂದಿಸಿದವರು ಹೆಚ್ಚು ಜನರೋ, ಲಕ್ಷ್ಮಣರಾಯನು ಎಂ.ಎ. ಪರೀಕ್ಷೆಯಲ್ಲಿ ತೇರ್ಗಡೆ ಯಾದ ವಾರ್ತೆಯು ಹರಡಿದ ದಿನ ಬೆಂಗಳೂರಿನಲ್ಲಿ ಅವನನ್ನು ನೋಡಿ

ಕೊಂಡು ಆತನ ಸಣ್ಣ ತಲೆಯಲ್ಲಿ ಕುಂಪಣಿ ಸೀಮೆಯವರ ಓದೆಲ್ಲ ಹಿಡಿದ ಬಗೆ ಹೇಗೆಂದು ಬೆರಗಾಗಿ ಆನಂದಿಸಿದವರು ಹೆಚ್ಚು ಜನರೋ—ಎಂಬುದನ್ನು ಹೇಳು ವಂತಿಲ್ಲ. ಅಪರಿಚಿತರು ಕೂಡ, ಅಸಂಖ್ಯಾತ ಮಂದಿ ಬಂದಿದ್ದರು. ಒಬ್ಬರು ಆಚಾರ್ಯರಂತು, ಚಳಿಯಿಂದ ನಡುಗುತ್ತ "ಮು—ಮು—ಮೂರ್ಧನ್ಯನಾಗಿ ಬ—ಬ—ಬಾಳಪ್ಪ. ನಾಲ್ಕರ ಚಳಿಜ್ವರ ಕಿ—ಕಿ—ಕಿತ್ತು ತಿಂತಾ ಇದೆ. ಚಳಿ ಬಂದಿದೆ. ಹೇಗಿದ್ದೀಯೋ ನೋಡಿಬಿಡಬೇಕೂ ಅಂತ ಚ—ಚ—ಚಪಲದಿಂದ ಓಡಿಬಂದೆ" ಎಂದು ಹೇಳಿ ಆಶೀರ್ವದಿಸಿ ಹೊರಟುಹೋದರು.

ಆ ಬಳಿಕ ಕೆಲವು ದಿನಗಳ ಮೇಲೆ ಭಾರಿ ಸಂಬಳದ ಹುದ್ದೆಯಾದ ನಿರೂಪವು ಬಂದಿತು. ತಮ್ಮ ಮಗ "ಲಚ್ಚು" ಅಷ್ಟು ಸಂಬಳಕ್ಕೆ ಅರ್ಹ ವಾಗಿರಲಾರನೆಂದೂ, ಸಂಬಳದ ಮೊತ್ತವೇ ಕೃತಪ್ಪಿನಿಂದ ಹೆಚ್ಚಾಗಿ ಬಿದ್ದಿರ ಬಹುದೆಂದೂ ವಿಶಾಲಾಕ್ಷಮ್ಮನವರಿಗೆ ಸಂಶಯ. ಆದುದರಿಂದಲೇ ಅವರು ಆ ರೀತಿ ಲಕ್ಷ್ಮಣರಾಯನೊಡನೆ ಮಾತನಾಡಿದ್ದುದು.

ಲಕ್ಷ್ಮಣರಾಯನಿಗೆ ಬಹಳ ದೊಡ್ಡ ಹುದ್ದೆಯೇ ದೊರೆಯಿತು. ಅವನು ದೊಡ್ಡದೊಂದು ಬಾಡಿಗೆ ಮನೆಯಲ್ಲಿ ವಾಸಮಾಡತೊಡಗಿದನು. ಆತನ ವ್ಯವಹಾರ ಜ್ಞಾನವು ಮಾತ್ರ ಆತನ ಜ್ಞಾಪಕಶಕ್ತಿಗಾಗಲಿ ಪುಸ್ತಕ ಗಳಿಂದ ಆತನು ತಲೆಗೆ ತುಂಬಿಕೊಂಡಿದ್ದ ವಿಷಯಗಳಿಗಾಗಲಿ ಅಲ್ಪ ಸ್ವಲ್ಪ ಅನುಗುಣವಾಗಿದ್ದರೂ, ಆತನು ದಿವಾನರಿಗೆ ಅಚ್ಚುಮೆಚ್ಚಾಗಿ ಉಚ್ಚದಶೆಗೆ ಏರಬಹುದಾಗಿದ್ದಿತು. ಆತನದು ಅದ್ಭುತವಾದ ಜ್ಞಾಪಕಶಕ್ತಿ; ಶ್ರಮ ವನ್ನರಿಯದ ವ್ಯಾಸಂಗ ಶ್ರದ್ಧೆ. ಎರಡು ಸಾರಿ ಯಾವ ಪುಸ್ತಕವನ್ನೋದಿ ದರೂ ಆ ಪುಸ್ತಕವೇ ಆತನಿಗೆ ಕಂಠಪಾಠವಾಗಿ ಕಲ್ಲಿನ ಮೇಲೆ ಕೆತ್ತಿದ ಅಕ್ಷರ ಗಳಂತೆ ಅವನ ಮನಸ್ಸಿನಲ್ಲಿ ನಿಲ್ಲುತ್ತಿದ್ದಿತು. ಆತನು ಮೊಟ್ಟಮೊದಲು ಉಪನ್ಯಾಸ ಮಾಡಿದ ದಿನ ದಿವಾನರು ಮೊದಲಾಗಿ ಅನೇಕ ಭಾರಿ ಭಾರಿ ಹುದ್ದೇದಾರರೆಲ್ಲರೂ ಉಪನ್ಯಾಸಮಂದಿರದಲ್ಲಿ ಕಿಕ್ಕಿರಿದು ತುಂಬಿದ್ದರು. ವಿದ್ಯಾಭ್ಯಾಸದ ಮೇಲೆ ಉಪನ್ಯಾಸ. ಇಂಗ್ಲಿಷಿನಲ್ಲಿ ವಿದ್ಯಾಭ್ಯಾಸವೆಂಬ ಪದವು ಹುಟ್ಟಿದ ಬಗೆ ಹೇಗೆಂಬುದರ ಇತಿಹಾಸವನ್ನೂ, ವ್ಯುತ್ಪತ್ತಿಯನ್ನೂ, ಹೇಳುವುದರಲ್ಲಿಯೇ ಆತನು ಮೂರೂವರೆ ಗಂಟೆಗಳ ಕಾಲವನ್ನು ಕಳೆದು "ಅವರು ಹೀಗೆ ಹೇಳಿದ್ದಾರೆ," "ಇವರು ಹಾಗೆ ಹೇಳಿದ್ದಾರೆ" ಎಂದು

ಬಗೆ ಬಗೆಯ ಗ್ರಂಥಗಳಿಂದಲೂ ಆಧಾರ ವಚನಗಳನ್ನು ಉದಹರಿಸುವ ಅರಗಿಳಿಯಾಗಿದ್ದುದನ್ನು ಕಂಡು ಸಭಿಕರೆಲ್ಲರೂ ಬೇಸತ್ತು ಹೊರಟು ಹೋದರು.

೨

ಲಕ್ಷ್ಮಣರಾಯನು ಅದೊಂದಕ್ಕೂ ಲಕ್ಷ್ಯಮಾಡಲಿಲ್ಲ. ಅವನಿಗೆ ಕೆಲಸವಾಗಿ ಕೈತುಂಬ ಸಂಬಳ ಬರುವಂತಾದ ಮೇಲಂತು, ಅವನು ಪುಸ್ತಕ ಪಿಶಾಚವೇ ಆದನು. ಬೆಂಗಳೂರು ದಂಡಿನ ಪ್ರದೇಶದಲ್ಲಿದ್ದ ದೊಡ್ಡ ಪುಸ್ತಕ ವ್ಯಾಪಾರಿಗಳಲ್ಲಿಗೆ ಹೋಗಿ ಒಂದು ಒಪ್ಪಂದವನ್ನು ಮಾಡಿಕೊಂಡನು. ಅವರು ಯಾವ ಯಾವ ಪುಸ್ತಕಗಳನ್ನು ಮಾರಾಟಕ್ಕೆ ತರಿಸುವರೋ ಅದರ ಒಂದೊಂದು ಪ್ರತಿಯನ್ನು ಆತನಲ್ಲಿಗೆ ಕಳುಹಿಸಬೇಕೆಂಬುದೂ, ಆತನು ಪುಸ್ತಕಗಳು ಕೊಳೆಯಾಗದಂತೆ ರಬ್ಬರಿನ ಕೈಚೀಲಗಳನ್ನು ಹಾಕಿಕೊಂಡು ಪುಸ್ತಕಗಳಿಗೆ ರಟ್ಟುಹಾಕಿ ವ್ಯಾಸಪೀಠದ ಮೇಲಿಟ್ಟುಕೊಂಡು ಓದಿ ಅವುಗಳನ್ನು ಹಿಂದಕ್ಕೆ ಕೊಡಬೇಕೆಂಬುದೂ, ಹೀಗೆ ಪುಸ್ತಕಗಳನ್ನು ಹಿಂದಕ್ಕೆ ಕೊಡುವಾಗ ಆ ಪುಸ್ತಕಗಳ ಕಾಲುಭಾಗದ ಬೆಲೆಯನ್ನು ಅವನು ಕೊಡಬೇಕೆಂಬುದೂ ಒಪ್ಪಂದದ ನಿಯಮಗಳು. ಈ ಒಪ್ಪಂದಕ್ಕೆ ಅವರು ಒಪ್ಪಿದುದೇ ತಡ. ಲಕ್ಷ್ಮಣರಾಯನು ಎಲ್ಲ ಪುಸ್ತಕಗಳನ್ನೂ ಓದತೊಡಗಿದನು. ಅವನ ತಲೆಯೇ ಒಂದು ಪುಸ್ತಕ ಭಂಡಾರವಾಯಿತು.

ಲಕ್ಷ್ಮಣರಾಯನು ವೈದ್ಯಗ್ರಂಥಗಳನ್ನು ಕೂಡ ಓದದೆ ಬಿಡಲಿಲ್ಲ. ಗುರುಮುಖದಿಂದ ಅವುಗಳನ್ನು ವ್ಯಾಸಂಗಮಾಡಿ ವೈದ್ಯಶಾಸ್ತ್ರವನ್ನು ಕಲಿತಿದ್ದರೆ ಆ ವಿಷಯವೇ ಬೇರೆ. ಲಕ್ಷ್ಮಣರಾಯನು ಹಾಗಿಲ್ಲದೆ ಸುಮ್ಮನೆ ಲೋಕಾಭಿರಾಮವಾಗಿ ವೈದ್ಯಶಾಸ್ತ್ರ ಗ್ರಂಥಗಳನ್ನು ಓದುತ್ತಿದ್ದುದರಿಂದ ಅನೇಕ ಭಾರಿ ಭಾರಿ ರೋಗಗಳ ಲಕ್ಷಣಗಳೆಲ್ಲ ತನಗಿರುವಂತೆ ಭಾಸವಾಗಿ, ಅದರಿಂದ ಅವನಿಗೆ ಭಯವೂ ಉಂಟಾಯಿತು. ಅಲ್ಲದೆ ಜೀವನವು ರೋಗಗಳ ಹಾಸಿಗೆಯೆಂದೂ, ಯಾವ ಕ್ಷಣದಲ್ಲಿ ಯಾವ ವಿಪತ್ತು ಬೇಕಾದರೂ ಸಂಭವಿಸಬಹುದೆಂದೂ, ಅವನಿಗೆ ಕಳವಳಕ್ಕೆ ಮೊದಲಾಯಿತು. ನಿದ್ರೆಯ ಕಾಲದಲ್ಲಿ ಕೂಡ ಅವನು ಹೆಚ್ಚು ಹೆಚ್ಚಾಗಿ ಕನವರಿಸುತ್ತ ಬೆಚ್ಚುವುದಕ್ಕೆ ಪ್ರಾರಂಭವಾಯಿತು. ಅದನ್ನು ನೋಡಿ ವಿಶಾಲಾಕ್ಷಮ್ಮನವರಿಗೆ ಬಹಳ ದಿಗಿಲಾಯಿತು.

ಅಣ್ಣಾಮ್ಮನಿಗೆ ಅವರು ತಂಬಿಟ್ಟಿನ ಆರತಿಯನ್ನು ಮಾಡಿಸಿದರೂ ಫಲವಾಗಲಿಲ್ಲ. ಭೂತಚಿಕಿತ್ಸೆಯವರನ್ನು ಕೇಳಿ (ಮಗನು ಕಾಣದಂತೆ) ಅವರಿಂದ ಯಂತ್ರಗಳನ್ನು ಬರೆಯಿಸಿ ತಲೆದಿಂಬಿನ ಕೆಳಗಿಟ್ಟೂ ಪ್ರಯೋಜನವಾಗಲಿಲ್ಲ. ನೆರೆ ಹೊರೆಯವರು ಇದನ್ನು ಕೇಳಿ ವ್ಯಾಖ್ಯಾನಮಾಲೆಗುಪಕ್ರಮಿಸಿದ ಮೇಲಂತು, ವಿಶಾಲಾಕ್ಷಮ್ಮನವರ ಧೈರ್ಯವು ಮತ್ತೂ ಉಡುಗಿಹೋಯಿತು.

ಒಂದು ದಿನ ಮಧ್ಯಾಹ್ನ (ಲಕ್ಷ್ಮಣರಾಯನು ಕಚೇರಿಗೆ ಹೋಗಿದ್ದ ವೇಳೆಯಲ್ಲಿ) ನೆರೆಹೊರೆಯ ಮನೆಗಳ ಹೆಂಗಸರೆಲ್ಲರೂ ಅವನ ಮನೆಯಲ್ಲಿ ಸಭೆ ಸೇರಿದರು. ಬಗೆ ಬಗೆಯ ಟೀಕೆಗಳಿಗೂ ವ್ಯಾಖ್ಯಾನಗಳಿಗೂ ಪ್ರಾರಂಭವಾಯಿತು. ಒಬ್ಬಾಕೆಯು "ವಿಶಾಲಾಕ್ಷಮ್ಮನವರೆ, ನಿಮ್ಮ ಕಡೆಯಾಗಲಿ ನಿಮ್ಮ ಯಜಮಾನರ ಕಡೆಯಾಗಲಿ ಯಾರಿಗಾದರೂ ಹುಚ್ಚು ಹಿಡಿದಿತ್ತೆ?" ಎಂದು ಕೇಳಿದಳು. ಈ ಪ್ರಶ್ನೆಯಿಂದ ವಿಶಾಲಾಕ್ಷಮ್ಮನವರ ಮನಸ್ಸು ಕದಡಿ ಹೋದಂತಾಗಿ "ಹೌದಮ್ಮಾ, ನನ್ನ ಮನಸ್ಸನ್ನೂ ಒಂದು ದಿಗಿಲು, ಕುಟ್ಟೇ ಹುಳುವಿನ ಹಾಗೆ ಕೊರೀತಿದೆ. ನಮ್ಮ ಮಾವನವರಿಗೂ ಬುದ್ಧಿ ಸ್ವಾಧೀನವಿರಲಿಲ್ಲವಂತೆ. ನಮ್ಮ ಯಜಮಾನರಿಗೂ ಯಾವಾಗಲಾದರೂ ಸ್ವಲ್ಪ ಕಾಲ ಕೊಂಚ ಎರ್ರಿಬಿರ್ರಿಯಾಗುತ್ತಾ ಇತ್ತು. ಏನುಮಾಡಲಿ, ಹೇಳಿ. ನನ್ನ ಪಾಪಿ ಕಣ್ಣಿನಲ್ಲಿ ಇನ್ನೂ ಏನೇನು ನೋಡಬೇಕಾಗಿದೆಯೋ ಅಂತ ಎದೆಗುಂಡಿಗೆ ಢಬಾ ಢಬಾ ಅಂತ ಹೊಡೆದುಕೊಳ್ಳುತ್ತೆ, ನೋಡಿ" ಎಂದರು.

ಮತ್ತೊಬ್ಬಾಕೆಯು "ಹಾಗೆಲ್ಲಾ ಭಯಪಡಬೇಡಿ. ನಿಮ್ಮ ಮಗನಿಗೆ ಮದುವೆಯಾಗಿ ಬಿಟ್ಟರೆ, ಇದೆಲ್ಲಾ ಓಡಿಹೋಗುತ್ತೆ. ಬಳ್ಳ ಹೊನ್ನು ಸಂಬಳ ತರುವ ಮಗ, ಅವನಿಗೆ ಮದುವೆ ಮಾಡಬೇಡವೇ ಹೇಳಿ. ಕುಂಟೆ, ಕಿವುಡೆ, ಬಡತನವೆ, ಏನು ಅಡ್ಡಿಯಾಗಿದೆಯೋ ಕಾಣೆ. ಇನ್ನೂ ಮದುವೆ ಬೇಡವೆ?" ಎಂದಳು. ವಿಶಾಲಾಕ್ಷಮ್ಮನವರು ಗಳಗಳನೆ ಅತ್ತು, ಕೊನೆಗೆ ಸಮಾಧಾನ ಮಾಡಿಕೊಂಡು "ಯಾವ ಹುಡುಗಿ ಬಂದರೂ ಬೇಡವೆಂತಾ ನಮ್ಮ, ನಾನೇನು ಮಾಡಲಿ? ದಂತದ ಪ್ರತಿಮೆಗಳಂತ ಹೆಣ್ಣು ಬಂದರೂ ಬೇಡವೆಂತಾನೆ. ಅದೇನೋ ಪುಸ್ತಕಗಳಂತೆ. 'ಮೂಗು ಹೀಗಿದ್ದರೆ ಒಂದು ಕೆಟ್ಟ ಗುಣ. ಕಿವಿ ಹೀಗಿದ್ದರೆ ಇಂಥ ಸ್ವಭಾವ. ಕಣ್ಣು ಹೀಗೀಗಿದ್ದರೆ ಇಂಥಿಂಥ ನಡತೆ' ಅಂತ ಇಂಗ್ಲೀಷು ಪುಸ್ತಕಗಳಲ್ಲಿ ಹೇಳಿದೆಯಂತೆ. ಹೆಣ್ಣು

ಕೊಡೋರು ನಾನು ತಾನೆಂತ ಬಂದು ಹೆಣ್ಣು ತೋರಿಸಿದರೆ ನಮ್ಮ ಲಚ್ಚ್ಯ ಅಕ್ಕಸಾಲೆ ಅಚ್ಚಾಚಾರಿ ಹಾಗೆ ಒರೆ ಹಿಡಿಯೋದಕ್ಕೆ ಆ ಹಾಳು ಪುಸ್ತಕ ಗಳನ್ನ ತೆಗೀತಾನೆ'' ಎಂದರು.

ಮುತ್ತೈಬ್ಬಾಕೆಯು ''ನೀವು ಇಂಗ್ರೀಜಿ ಓದಿಸಬಾರದಾಗಿತ್ತು. ಕುಂಪಣಿ ಸೀಮೆಯವರಿಗೆ ಪಿಶಾಚಿಗಳೇ ಸ್ವಾಧೀನವಂತಮ್ಮಾ. ಕಲಿಪುರುಷ ಅವರಿಗೆ ಕರ್ಣಪಿಶಾಚಿ ಕೆಲಸ ಮಾಡ್ತಾನಂತೆ. ಅವರ ಜನಕ್ಕೆ ಅವರ ಓದು ಸರಿ. ಸಂಬಳದಾಸೆಗೆ ನಮ್ಮೋರು ಅದನ್ನ ಓದೋದು ಶುದ್ಧ ತಪ್ಪು. ಅವರ ದೇವರುಗಳಿಗೂ ನಮ್ಮ ದೇವರುಗಳಿಗೂ ಗ್ರಹಬಲವಾದೀತೆ? ಅವರ ದೇವರುಗಳ ನಮ್ಮ ದೇವರುಗಳ ದ್ವೇಷದಲ್ಲಿ ನಾವು ಬದುಕಿಯೇವೆ? ಓದಿದರೂ ಸ್ವಲ್ಪ ಇಂಗ್ರೀಜಿ ಓದಿದರೆ ಅದೊಂದು ರೀತಿ'' ಎಂದಳು.

ಮುಗದೊಬ್ಬಳು ಕೈಬಾಯಿಗಳನ್ನು ತಿರುಗಿಸುತ್ತ ''ಅದು ನಿಜ, ಆಗ್ಗೆ ನಮ್ಮ ದೇವರುಗಳು ಸ್ವಲ್ಪ ಸೈರಣೆ ತಂದುಕೊಂಡು ಸುಮ್ಮನಿರುತ್ತಾರೆ. ಹಾಗಿಲ್ಲದೆ ನಿಮ್ಮ ಹುಡುಗನ ಹಾಗೆ ಕುಂಪಣಿಯವರ ವಿದ್ಯವೆಲ್ಲಾ ಅರೆದು ಹುಯ್ಕೊಂಡರೆ ಸರಿಹೋದೀತೆ, ಹೇಳಿ. ಏನೋ ಮದುವೆ ಮಾಡಿಸಿ ನೋಡಿ. ಕೈಹಿಡಿದವಳ ಕಂಕಣಬಲದಿಂದಲೋ, ಇಲ್ಲವೇ ಅವಳು ಬಂದ ಮೇಲಾದರೂ ನಿಮ್ಮ ಮಗ ಹಾಳು ಇಂಗ್ರೀಜಿ ಪುಸ್ತಕ ಓದೋದು ಸ್ವಲ್ಪ ಕಡಮೆ ಬಿದ್ದು ನಮ್ಮ ದೇವರುಗಳಿಗೆ ಸ್ವಲ್ಪ ಮನಸ್ಸು ಶಾಂತ ವಾಗುವುದರಿಂದಲೋ, ಇದೆಲ್ಲಾ ನಿಲ್ಲಬೇಕು'' ಎಂದಳು.

೩

ಆ ತರುವಾಯ ವಿಶಾಲಾಕ್ಷಮ್ಮನವರು ಅವನು ವಿವಾಹಮಾಡಿ ಕೊಳ್ಳಲೇಬೇಕೆಂದು ಬಲಾತ್ಕಾರ ಮಾಡತೊಡಗಿದರು. ಅಷ್ಟರಲ್ಲಿ ಲಕ್ಷ್ಮಣ ರಾಯನ ಮನಸ್ಸಿಗೆ ಸಮ್ಮತವಾದ ಹೆಣ್ಣೂ ಸಿಕ್ಕಿತು. ಹೆಣ್ಣಿನವರೂ ಧನಿಕರಾಗಿದ್ದುದರಿಂದ ಬಹಳ ವಿಜೃಂಭಣೆಯಾಗಿ ವಿವಾಹವು ನೆರವೇರಿತು. ವಿವಾಹವಾದಮೇಲೆ ಸ್ವಲ್ಪಕಾಲದೊಳಗಾಗಿ ಲಕ್ಷ್ಮಣರಾಯನು ನಿದ್ರೆಯಲ್ಲಿ ಕನವರಿಸುವುದು ನಿಂತುಹೋಯಿತು. ತಂದೆಯ ಮನೆಯಲ್ಲಿದ್ದ ತಮ್ಮ ಸೊಸೆಯ ಸೌಭಾಗ್ಯವೇ ಅದಕ್ಕೆ ಕಾರಣವೆಂದು ಭಾವಿಸಿ ವಿಶಾಲಾಕ್ಷಮ್ಮ

ನವರು ಸಂತೋಷದಿಂದ ಹಿಗ್ಗಿದರು. ಆದರೆ ಲಕ್ಷ್ಮಣರಾಯನ ಮನಸ್ಸಿನ ಮಾರ್ಪಾಡಿಗೆ ನಿಜವಾದ ಕಾರಣವೇ ಬೇರೆ. ಅವನು ಆರೋಗ್ಯಶಾಸ್ತ್ರ ಸಂಬಂಧವಾದ ಗ್ರಂಥಗಳನ್ನೂ, ಆಹಾರ ವಿಜ್ಞಾನ ಶಾಸ್ತ್ರ ಗ್ರಂಥಗಳನ್ನೂ ಇಂಗ್ಲಿಷಿನಲ್ಲಿ ಓದಿ ಅವುಗಳಲ್ಲಿ ಹೇಳಿದ್ದಂತೆ ತಾನೂ ತನ್ನ ಮನೆಯವರೂ ನಡೆದರೆ ರೋಗಗಳು ಸಂಭವಿಸುವಂತೆಯೇ ಇಲ್ಲವೆಂದು ನಿರ್ಧರಿಸಿದ್ದುದೇ, ಅವನ ಕಳವಳವು ಕಡಮೆಯಾದುದಕ್ಕೆ ಕಾರಣ.

ತನ್ನ ಹೆಂಡತಿಗೆ ಹೇಗೆ ಹೇಗೆ ಆಹಾರವನ್ನು ಕೊಡಬೇಕೆಂಬುದೇ ಮುಂತಾದ ವಿಚಾರಗಳನ್ನೂ ಅವಕ್ಕೆ ಕಾರಣವನ್ನೂ ವಿಶದವಾಗಿ ವಿವರಿಸಿ ಇಪ್ಪತ್ತೈದು ಪುಟಗಳ ಪುಟ್ಟ ಕಾಗದವೊಂದನ್ನು ಲಕ್ಷ್ಮಣರಾಯನು ತನ್ನ ಮಾವನಿಗೆ ಬರೆದನು. ಗೋಧಿಯ ರೊಟ್ಟಿಗಳನ್ನು ಪ್ರತಿದಿನವೂ ಕೊಡಬೇಕೆಂದೂ, ತನ್ನ ಹೆಂಡತಿಯು ಊಟಮಾಡುವಾಗ ನೀರು ಕುಡಿಯಲು ಖಂಡಿತ ಅವಕಾಶ ಕೊಡಕೂಡದೆಂದೂ, ಲಕ್ಷ್ಮಣರಾಯನು ಬರೆದಿದ್ದುದನ್ನು ನೋಡಿ ಅವನ ಮಾವನ ಮನೆಯವರು ಬಹುವಾಗಿ ನಕ್ಕರು. ಚಪ್ಪರಬದನೆ ಹಣ್ಣುಗಳನ್ನು ("ಟೊಮಾಟೊ" ಹಣ್ಣುಗಳನ್ನು) ತನ್ನ ಹೆಂಡತಿಯು ತಪ್ಪದೆ ಸೇವಿಸಬೇಕೆಂದು ಲಕ್ಷ್ಮಣರಾಯನು ಬರೆದಿದ್ದುದನ್ನು ನೋಡಿ ಅವನ ಅತ್ತೆಮಾವಂದಿರು ಕೊಂಚ ಅಸಮಾಧಾನಪಟ್ಟರು. ಈಗ ಯಾರಾದರೂ ಈ ರೀತಿ ಬರೆದರೆ ಸಂತೋಷವೇ ಉಂಟಾಗುವಂತಹ ಬರವಣಿಗೆಯೇ ಆಗ ಅಸಮಾಧಾನಕ್ಕೂ ಅಪಹಾಸ್ಯಕ್ಕೂ ಕಾರಣವಾಯಿತು. ಅಸಹ್ಯಕರವಾದ ಚಪ್ಪರಬದನೆ ಹಣ್ಣುಗಳನ್ನು ಕೊಡುವುದಕ್ಕೆ ತಾವೇನು ಬಡವರೇ ಅಥವಾ ಲೋಭಿಗಳೇ, ಅಳಿಯದೇವರು ಹಾಗೆಲ್ಲ ಬರೆದು ಅವಮಾನ ಮಾಡಿದುದು ಯುಕ್ತವೇ ಎಂಬುದು ಲಕ್ಷ್ಮಣರಾಯನ ಮಾವನ ತರ್ಕ. ಆದರೂ ಅಳಿಯನು ಸಾಮಾನ್ಯರ ಪಙ್ಕ್ತಿಗೆ ಸೇರಿದವನಲ್ಲದ ಕಾರಣ, ಅಂತಹವನು ಕೋಪಿಸಿಕೊಂಡರೆ ಅನರ್ಥವಾದೀತೆಂದು ಭಯ. ಆದರೂ ಅಳಿಯನಿಗೆ ಸಮಾಧಾನವಾಗಲೆಂಬ ಆಶಯದಿಂದ ಆ ಕಾಗದಕ್ಕನುಸಾರವಾಗಿಯೇ ತಾನು ತನ್ನ ಮಗಳ ಆಹಾರ ಪಾನೀಯಗಳ ಏರ್ಪಾಡುಗಳನ್ನು ಮಾಡಿರುವುದಾಗಿ ಅವನು ಕಾಗದ ಬರೆದನು. ಆ ಕಾಗದವನ್ನು ಬರೆದಾಗ ಅವನು ನಕ್ಕಷ್ಟು ಮಟ್ಟಿಗೆ ಮತ್ತೆಂದೂ ನಕ್ಕಿರಲಿಲ್ಲ. ಎಲ್ಲ ಏರ್ಪಾಡುಗಳೂ

ವಿತರಣೆಯಿಂದ ನಡೆಯುತ್ತಿವೆಯೋ ಎಂಬುದನ್ನು ಪರೀಕ್ಷಿಸಲು ಪೂರ್ವಭಾವಿಯಾಗಿ ವರ್ತಮಾನ ಕೊಡದೆಯೇ ಮಾವನ ಮನೆಗೆ ಹೋಗಿ ಬರಬೇಕೆಂದು ಲಕ್ಷ್ಮಣರಾಯನು ನಿರ್ಧರಿಸಿದನು.

ಬೆನ್ನಿನ ಕಡೆ ಎಡಭಾಗದಿಂದ ಮಾತ್ರವೇ ಬೆಳಕು ಬರುವ ಹಾಗೆ ಏರ್ಪಡಿಸಿಕೊಂಡು ಓದುವುದೇ ಉತ್ತಮ ಮಾರ್ಗವೆಂದು ಲಕ್ಷ್ಮಣರಾಯನು ಪುಸ್ತಕಗಳಲ್ಲಿ ಓದಿದ್ದನು. ಅದಕ್ಕೇನು ಮಾಡಬೇಕೆಂಬುದನ್ನು ಯೋಚಿಸಿ ಯೋಚಿಸಿ, ಕೊನೆಗೆ ಉತ್ತಮವಾದೊಂದು ಏರ್ಪಾಡನ್ನೇ ಮಾಡಿಕೊಂಡನು. ಭಾರಿ ಚಕ್ರಗಳನ್ನಿಡಿಸಿ ಮರದ ಹಲಗೆಗಳಿಂದಲೇ ಒಂದು ಕೋಣೆಯನ್ನು ಕಲ್ಪಿಸಿ, ಎಡಭಾಗದಿಂದ ಬೆಳಕು ಬರುವಂತೆ ಕಿಟಿಕಿಯನ್ನಿಡಿಸಿದನು. ಯಾವ ಹೊತ್ತಿನಲ್ಲಿ ಯಾವ ಕಡೆಯಿಂದ ಸೂರ್ಯನ ಬೆಳಕು ಬರುವುದೆಂಬುದನ್ನು ನೋಡಿಕೊಂಡು (ಮನೆಯ ಸುತ್ತಲೂ ಇದ್ದ ಬಯಲಿನಲ್ಲಿ) ಎಲ್ಲಿಗೆಂದರೆ ಅಲ್ಲಿಗೆ ಸಾಗಿಸುವುದಕ್ಕನುಕೂಲಿಸಲೆಂದು ಆ ಕೋಣೆಗೆ ಅವನು ಚಕ್ರಗಳನ್ನಿಡಿಸಿದನು. ಮಗನನ್ನು ಅತ್ಯಂತ ಪ್ರೀತಿಸುತ್ತಿದ್ದ ವಿಶಾಲಾಕ್ಷಮ್ಮನವರ ಮನಸ್ಸಿಗೆ ಕೂಡ, ಇದು ವಿಚಿತ್ರವಾಗಿ ತೋರಿತು.

ಈ ಮಧ್ಯದಲ್ಲಿ ಯಾವುದೊಂದನ್ನು ಪೋಲು ಮಾಡುವುದೂ ಅರ್ಥಶಾಸ್ತ್ರದ ಪ್ರಕಾರ ಅನರ್ಥಕ್ಕೆ ಕಾರಣವಾಗುವುದೆಂದು ಓದಿದ್ದುದರಿಂದಲೂ, ಜೀವನದಲ್ಲಿ ನಡೆದ ಪ್ರತಿಯೊಂದು ಸಂಗತಿಯನ್ನೂ ಬರೆದಿಡಬೇಕೆಂದು ಓದಿದ್ದುದರಿಂದಲೂ ಲಕ್ಷ್ಮಣರಾಯನು ತನ್ನ ಹಳೆಯ ಅಂಗಿಗಳನ್ನೆಲ್ಲ ಹುಡುಕಿ ಸಾಲಿಗೆ ನೇತುಹಾಕಿ ಅವುಗಳನ್ನು ಹೊಲಿಸಿದ ತಾರೀಖುಗಳನ್ನು ಗೋಡೆಯ ಮೇಲೆ ಆ ಆ ಅಂಗಿಯನ್ನು ಮೊಳೆಗೆ ನೇತು ಹಾಕಿದ್ದ ಭಾಗದಲ್ಲಿ ಮೇಲಿನ ಪಾರ್ಶ್ವದಲ್ಲಿ ಬರೆದನು. ಈ ವಿಲಕ್ಷಣವಾದ "ಗೋಡೆ ಅಲಂಕಾರ"ವನ್ನು ನೋಡಿ ವಿಶಾಲಾಕ್ಷಮ್ಮನವರು ಮಗನಿಗೆ ಹುಚ್ಚು ಹಿಡಿಯಬಹುದೆಂದು ನಿರ್ಧರಿಸಿದರು. ಪ್ರತಿದಿನವೂ ಆ ಹಳೆಯ ಅಂಗಿಗಳಲ್ಲೊಂದನ್ನು ತೊಟ್ಟು ಅದರ ಮೇಲೆ ಹೊಸ ಅಂಗಿಯನ್ನು ತೊಟ್ಟು ಕಚೇರಿಗೆ ಹೋಗುತ್ತಿದ್ದ ಮಗನ ವಿಚಿತ್ರ ವರ್ತನೆಯನ್ನು ನೋಡಿ "ಇವನಿಗೆ ಬಂದಿರುವ ಬಡತನವೇನು?" ಎಂದು ಅವರ ಮನಸ್ಸು ಕೂಡ ಪ್ರಶ್ನಿಸ್ಥಾಕಿತು. ಈ ಮಧ್ಯೆ ಮಗನು ಮಾವನ ಮನೆಗೆ ಹೋಗುವುದಕ್ಕೆ ಇಷ್ಟಪಟ್ಟುದನ್ನು

ಕಂಡು, ವಿಶಾಲಾಕ್ಷಮ್ಮನವರು ಅದಕ್ಕೆ ಸಂತೋಷದಿಂದ ಅನುಮತಿಸಿದರು. ಅಲ್ಲದೆ "ಆ ಮಹಾರಾಯತಿಯ ಮೇಲಿನ ಗಾಳಿಯಾದರೂ ಬೀಸಿ ಇವನ ಮನಸ್ಸು ನೆಟ್ಟಗಾದರೆ ಸಾಕು" ಎಂದು ಅವರು ಜಪಮಾಡುವುದಕ್ಕುಪಕ್ರಮಿಸಿದರು.

ಅತ್ತ, ಮಾವನ ಮನೆಗೆ ಹೋದ ಲಕ್ಷ್ಮಣರಾಯನು ತನ್ನ ಕಾಗದದ ಮೇರೆಗೆ—ಇಪ್ಪತ್ತೈದು ಪುಟಗಳ ಪುಟ್ಟಕಾಗದದ ಮೇರೆಗೆ—ಅಲ್ಲಿ ಯಾವ ಏರ್ಪಾಡೂ ನಡೆದಿಲ್ಲದಿದ್ದುದನ್ನೂ, ಎಲ್ಲವೂ ಸಮಗ್ರವಾಗಿದ್ದುದಾಗಿ ತನ್ನ ಮಾವನು ತನಗೆ ಸುಳ್ಳು ಕಾಗದವನ್ನು ಬರೆದಿದ್ದುದನ್ನೂ ಕಂಡು ಕಿಡಿಕಿಡಿಯಾದನು. ಬೆಂಗಳೂರಿಗೆ ಹಿಂತಿರುಗಿದೊಡನೆಯೇ ಮಾವನಿಗೊಂದು "ನೋಟೀಸು" ಕಳುಹಿಸಿ, ಎಂಟು ದಿನಗಳೊಳಗಾಗಿ ಹೆಂಡತಿಯನ್ನು ತನ್ನ ಮನೆಗೆ ಕರೆದು ತಂದು ಅಲ್ಲಿ ಬಿಟ್ಟುಹೋಗದಿದ್ದರೆ, ತಾನು ಬೇರೆ ಮದುವೆ ಮಾಡಿಕೊಳ್ಳುವುದಾಗಿಯೂ ಅಥವಾ ದಾವಾ ಮಾಡುವುದಾಗಿಯೂ ಹೆದರಿಸಿದನು. ಲಕ್ಷ್ಮಣರಾಯನು ಛಲಗಾರನೂ ಆಗಿದ್ದನು.

ಲಕ್ಷ್ಮಣರಾಯನ ಮಾವನು ಅಳಿಯನ ಅವಿವೇಕಕ್ಕೆ ಮನಸ್ಸಿನೊಂದು ಬಹಳ ಸಂಕಟಪಟ್ಟನು; ಆದರೆ ಮಗಳನ್ನು ಕಳುಹಿಸುವುದಿಲ್ಲವೆಂದರೆ ಅನರ್ಥವಾದೀತೆಂದು ಬಗೆದು ಬೆಂಗಳೂರಿಗೆ ಮಗಳನ್ನೂ ಹೆಂಡತಿಯನ್ನೂ ಕರೆದುಕೊಂಡು ಹೊರಟನು. ಓದುಬರೆಹಗಳನ್ನರಿಯದ ವಿಶಾಲಾಕ್ಷಮ್ಮನವರು ಕೂಡ, ಮಗನು "ನೋಟೀಸು" ಕೊಟ್ಟುದು ಅವಿವೇಕವೆಂದು ಒಪ್ಪಿಕೊಂಡು ಬೀಗರಿಗೆ ಸಮಾಧಾನ ಹೇಳಿದರು. ಅಲ್ಲದೆ ಛಲವನ್ನು ಬಿಡುವಂತೆ ಅವರು ಮಗನಿಗೂ ಬುದ್ಧಿ ಹೇಳಿದರು. ಆದರೂ ಆಕೆಯ ಉಪದೇಶದಿಂದ ಯಾವ ಫಲವೂ ಆಗಲಿಲ್ಲ. ವಿಶಾಲಾಕ್ಷಮ್ಮನವರು "ಹುಡುಗಿ ಬರುವಾಗ ಬಂದೇ ಬರ್ತಾಳೆ. ಈಗ ಹೀಗೆ ನಿರ್ಬಂಧ ಮಾಡಿ ನಮ್ಮ ಮನೆಯಲ್ಲಿಟ್ಟುಕೊಳ್ಳುವುದೆಲ್ಲಿಯ ಸಂಪ್ರದಾಯವೋ ಲಚ್ಚು? ಹೀಗೆ ಅವರನ್ನು ಬಲವಂತ ಮಾಡಿ ಮುಗ್ಗಟ್ಟಿಗೆ ಸಿಕ್ಕಿಸುವುದು ಬಹಳ ತಪ್ಪು ನೋಡು. ನೀನು ಓದಿ ಉದ್ಧಾರವಾದೆಯೆಂತ ನಾನು ತಿಳಿದಿದ್ದೆ. ನೀನು ವಕ್ರಮಾರ್ಗ ಹಿಡಿದೆಯಪ್ಪ" ಎಂದರು. ಲಕ್ಷ್ಮಣರಾಯನ ಕಪಿಮುಷ್ಟಿಯು ಪೂರ್ತಿಯಾಗಿ ಸಡಿಲವಾಗಲಿಲ್ಲವಾದರೂ ಮೂರು ತಿಂಗಳುಗಳು ಕಳೆದ

ಬಳಿಕ ತನ್ನ ಮಾವನು ಮತ್ತೆ ಬಂದು ತನ್ನ ಹೆಂಡತಿಯನ್ನು ಕರೆದುಕೊಂಡು ಹೋಗಬಹುದೆಂದೂ, ಆದರೆ ಆಹಾರ ಮುಂತಾದುವುಗಳ ವಿಚಾರದಲ್ಲಿ ಮಾತ್ರ ತಾನು ಹೇಳಿದಂತೆ ಅವರು ನಡೆಯಿಸಬೇಕೆಂದೂ ಅವನು ತಿಳಿಸಿದನು. ಅಳಿಯದೇವರು ಅಷ್ಟು ವರಗಳನ್ನು ಅನುಗ್ರಹಿಸಿದುದೇ ಸಾಕೆಂದು ಸಂತುಷ್ಟರಾಗಿ ಅತ್ತೆಮಾವಂದಿರು ಊರಿಗೆ ಹಿಂತಿರುಗಿದರು.

ಇತ್ತ ಲಕ್ಷ್ಮಣರಾಯನು ತನ್ನ ತಾಯಿಗೂ ತನ್ನ ಹೆಂಡತಿಗೂ "ಪಥ್ಯಗಳು" ಪ್ರಾರಂಭವಾಗಬೇಕೆಂದು ಸೂಚಿಸಿದನು. ವಿಶಾಲಾಕ್ಷಮ್ಮ ನವರು ದುಡಿದು ಕೆಲಸಮಾಡಬೇಕಾದ ಕಾರಣ, ಅವರು ಅದಕ್ಕೆ ತಕ್ಕ ಆಹಾರಗಳನ್ನು ತೆಗೆದುಕೊಳ್ಳಬೇಕೆಂದೂ, ಅವರೆಯ ಬೇಳೆಯ ಸಾರು, ರಾಗಿ ಹಿಟ್ಟು, ಒಟಾಣಿ ಕಾಳು, ಮುಂತಾದುವುಗಳನ್ನು ಅವರು ಸೇವಿಸ ಬೇಕೆಂದೂ, ಬಹಳ ಕೊಂಚ ಅನ್ನವನ್ನು ತಿನ್ನಬೇಕೆಂದೂ ಅವನು ತಿಳಿಸಿದನು; ತಾನು ಮೆದುಳಿನ ಕೆಲಸ ಮಾಡುವವನಾದ ಕಾರಣ, ತನಗೆ ಅಕ್ಕಿ ಅನ್ನವೂ ಸೊಪ್ಪು ಮುಂತಾದುವೂ ಬೇಕೆಂದು ಹೇಳಿದನು. ಅಷ್ಟೇ ಅಲ್ಲ; ತನ್ನ ಹೆಂಡತಿಯ ವಯಸ್ಸಿಗೆ ತಕ್ಕಂತೆ ಚಪ್ಪರಬದನೆಯ ಹಣ್ಣುಗಳು ಮುಂತಾದ ಬಗೆ ಬಗೆಯ ವಸ್ತುಗಳನ್ನೂ ಸೂಚಿಸಿದನು. ಈ ಮಾತು ಗಳನ್ನು ಕೇಳಿ ವಿಶಾಲಾಕ್ಷಮ್ಮನವರು ಅತ್ತುಬಿಟ್ಟರು. ಮಗನು ಬಗೆ ಬಗೆ ಯಾಗಿ ಸಮಾಧಾನ ಹೇಳಿದ ಮೇಲೆ "ಲಚ್ಚು, ಓದಿ ಓದಿ ಮರುಳಾದ ಕೂಚುಭಟ್ಟ ಅನ್ನೋ ಗಾದೆ ನಮ್ಮ ಮನೆಯಲ್ಲೇ ತಾರ್ಕಣ್ಯಕ್ಕೆ ಬರಬೇಕೇ, ಹೇಳು. ಈ ಮರುಳಾಟಕ್ಕೇನು ಹೇಳಲಿ?" ಎಂದರು. ಲಕ್ಷ್ಮಣರಾಯನು "ಆಹಾರದ ವಿಚಾರವೂ ಒಂದು ಶಾಸ್ತ್ರವಮ್ಮ. ಯಾರು ಯಾರು ಯಾವ ಯಾವ ಕೆಲಸ ಮಾಡಬೇಕೋ ಅದಕ್ಕೆ ತಕ್ಕ ಶಾಖ ಬೇಕು. ಅದಕ್ಕೆ ತಕ್ಕಂತೆ ಆಹಾರ ತೆಗೆದುಕೊಳ್ಳಬೇಕು" ಎಂದನು. ವಿಶಾಲಾಕ್ಷಮ್ಮನವರು "ಲಚ್ಚು, ಲಚ್ಚು, ನಿನ್ನ ಅವಿವೇಕಕ್ಕೆ ಅಳಬೇಕೋ ನಗಬೇಕೋ ಕಾಣೆ. ನಾನು ತೊಗರಿಬೇಳೆ ಸಾರು ಸಣ್ಣಕ್ಕಿ ಅನ್ನ ತಿಂದು ಚಳಿ ಹಿಡಿದಿರೋದೇನೋ ಕಾಣೆ. ಹಿಟ್ಟೂ ಅವರೇ ಬೇಳೆ ತಿಂದು ಚಳಿ ಹೋಗ ಲಾಡಿಸಿಕೊಂಡು ಶಾಖ ತುಂಬಿಕೊಳ್ಳಬೇಕೆ? ಬೆಂಕಿ ಮುಂದೆ ಕೂತು ಕೊಂಡರೆ ಶಾಖಹುಟ್ಟುತ್ತೋ, ಅವರೇ ಬೇಳೆ ರಾಗಿಹಿಟ್ಟು ತಿಂದರೆ ಶಾಖ

ಹುಟ್ಟುತ್ತೋ, ನೀನೇ ಹೇಳು. ಆಹಾರದ ವಿಚಾರ ಶಾಸ್ತ್ರವೆಂದರೇನಪ್ಪ ನಿನ್ನ ಬುದ್ಧಿ ಸ್ವಾಧೀನವಿಲ್ಲವೋ ಏನೋ! ನನ್ನ ಹೊಟ್ಟೆ ಪುಣ್ಯ. ಲೋಕಾ ರೀತಿಯಾಗಿರು, ನನ್ನಪ್ಪ" ಎಂದರು. ಅಂತು, ಅಡಿಗೆಯ ಮನೆಯಲ್ಲಿ ಹೆಚ್ಚಿನ ಸುಧಾರಣೆಗಳೇನೂ ನಡೆಯಲಿಲ್ಲ. ಚಪ್ಪರಬದನೆಯ ಹಣ್ಣುಗಳನ್ನು ನೋಡಿದರೇ ಲಕ್ಷ್ಮಣರಾಯನ ಹೆಂಡತಿಗೆ ಹೊಟ್ಟೆತೊಳಸುವುದು. ಈಗ್ಗೆ ಐವತ್ತು ವರುಷಗಳ ಹಿಂದಿನ ವಾತಾವರಣವೇ ಬೇರೆ ಬಗೆಯಲ್ಲಿದ್ದುದೇ ಅದಕ್ಕೆ ಮುಖ್ಯ ಕಾರಣವೆಂದು ತೋರುತ್ತದೆ. ಚಪ್ಪರಬದನೆಯ ಹಣ್ಣು ಗಳನ್ನು ತಿನ್ನಲಾರದವರು ಈಗಲೂ ಇದ್ದಾರೆ. ಇನ್ನು ಆಗಿನ ಮಾತನ್ನು ಹೇಳಬೇಕಾದುದೇನು?

೪

ತನ್ನ ಪತ್ನಿಯ ಮನಸ್ಸನ್ನು ತನ್ನ ಮಾರ್ಗಕ್ಕೆ ತಿರುಗಿಸಬೇಕೆಂದು ಲಕ್ಷ್ಮಣರಾಯನಿಗೆ ತವಕವುಂಟಾಯಿತು. ಆದರೆ ಆವಳು ಅವನನ್ನು ಕಂಡೊಡನೆಯೇ ಜಿಂಕೆಯ ಮರಿಯಂತೆ ಓಡಿಹೋಗುತ್ತಿದ್ದಳು. ಈ ಬಗೆಯ ನಡತೆಯನ್ನು ಕಂಡು ಲಕ್ಷ್ಮಣರಾಯನು ಹಿಂದೂ ಹುಡುಗಿಯರು (ತಾನು ಇಂಗ್ಲಿಷ್ ಭಾಷೆಯ ಕಾದಂಬರಿಗಳಲ್ಲಿ ಓದಿದ್ದ) ಐರೋಪ್ಯರ ಹುಡುಗಿಯರಂತಲ್ಲವೆಂದೂ, ಹಿಂದೆ ಬಿದ್ದಿರುವುದೇ ಹಿಂದುಗಳ ಹಣೆಯ ಬರೆಹವೆಂದೂ ಪೇಚಾಡುತ್ತಿದ್ದನು. ಸ್ವಲ್ಪ ಕಾಲದಲ್ಲಿಯೇ "ನನ್ನ ಮನೆ ಯಲ್ಲಿಯೇ ನನ್ನನ್ನು ಕೇಳುವವರಿಲ್ಲ. ನಾನು ಯಾರಿಗೂ ಬೇಕಾಗಿಲ್ಲ. ನನ್ನ ಮಾತೂ ನಡೆಯುವುದಿಲ್ಲ" ಎಂದು ಗೊಣಗುವುದಕ್ಕುಪಕ್ರಮಿಸಿದನು.

ಮಗನಿಗೆ ಅಸಮಾಧಾನವಾಗಿ 'ಅವರೆ ಬೇಳೆ ಸಾರು, ರಾಗಿ ಹಿಟ್ಟು, ನೊಪ್ಪಿನ ಪಲ್ಯ, ಇವುಗಳ ಪೆಡಂಭೂತ' ಅಡಿಗೆ ಮನೆಗೆ ಬಂದುಬಿಟ್ಟೀತೆಂಬ ಭಯದಿಂದ ವಿಶಾಲಾಕ್ಷಮ್ಮನವರು ಅವನೊಡನೆ ಮಾತನಾಡುವಂತೆ ಸೊಸೆಯನ್ನು ಪ್ರೇರಿಸಿ "ನೀನು ಕೇಳಲಿಲ್ಲವಂತಮ್ಮಾ. ಕೇಳಮ್ಮ. ಅವನು ನಮಗೆ ಬೇಕಾಗಿದೆಯೆಂಬುದನ್ನ ತೋರಿಸಿಕೊಡಮ್ಮ. ನಾನು ಬಹಳ ಬಹಳ ಆಸೆ ಇಟ್ಟುಕೊಂಡಿದ್ದೆ. ಇವನು ಹೀಗೆ ವಕ್ರಮಾರ್ಗ ಹಿಡಿಯಬೇಕೆ, ಹೇಳು" ಎಂದು ತಿಳಿಸಿದರು. ಬಾಲಿಕಾಭಾವದ ಮುಗ್ಧತೆಯಿಂದ ಸೊಸೆಯು ನಸುನಾಚಿ "ಅಮ್ಮ, ಆ ಹಣ್ಣುಗಳನ್ನ ತಿನ್ನಬೇಕಾಗಿ ಬಂದರೆ

ಏನು ಮಾಡಲಿ, ಹೇಳಿ'' ಎಂದಳು. ವಿಶಾಲಾಕ್ಷಮ್ಮನವರು ಗಹಗಹಿಸಿ ನಕ್ಕು ''ನಿನ್ನಷ್ಟು ಬುದ್ಧಿಯೂ ಅವನಿಗಿಲ್ಲವ್ಮ. ಮಾತನಾಡಿಸಿದರೆ ಮಾತನಾಡಮ್ಮ. ಆ ಹಾಳು ಹಣ್ಣು ತಿನ್ನಬೇಕೆಂದರೆ ನನ್ನನ್ನು ಕೇಳದೇ ತಿನ್ನುವುದಿಲ್ಲವೆನ್ನು, ತಾಯಿ. ನನ್ನ ಕೇಳಿ ಅಗತ್ಯವಾಗಿ ಅಭ್ಯಾಸ ಮಾಡು ವುದಾಗಿಯೂ ಹೇಳು. ನನ್ನ ಹತ್ತಿರಕ್ಕೆ ಆ ಹಣ್ಣುಗಳನ್ನ ತಂದುಬಿಡು. ಆಮೇಲೆ ಅವುಗಳ ಗತಿ ಗೊತ್ತೇ ಇದೆ'' ಎಂದು ಉತ್ತರ ಹೇಳಿದರು. ಅತ್ತೆ ಸೊಸೆಯರಿಬ್ಬರೂ ನಕ್ಕರು.

ಅಂತು, ಆಧುನಿಕ ಋಷ್ಯಶೃಂಗನೆನಿಸುವಷ್ಟು ಮಟ್ಟಿಗೆ ವ್ಯವಹಾರ ಜ್ಞಾನ ಶೂನ್ಯನಾಗಿದ್ದ ಲಕ್ಷ್ಮಣರಾಯನಿಗೆ ತಾಯಿಯ ''ಮಧ್ಯಸ್ಥದಿಂದ'' ಹೆಂಡತಿಯೊಡನೆ ಮಾತನಾಡುವುದಕ್ಕೆ ಅವಕಾಶವಾಯಿತು. ವಿಶಾಲಾಕ್ಷಮ್ಮ ನವರೂ ಅದಕ್ಕೆ ಅನುಕೂಲವನ್ನು ಕಲ್ಪಿಸುತ್ತಿದ್ದರು. ಅವರ ''ಸ್ವಜಾತಿಯವರಾದ'' ಅಡುಗೆಯವರು ದೊರೆತಿರಲಿಲ್ಲ. ಇತರರು ಮಾಡಿದ ಅಡುಗೆಯನ್ನು ಅವರು ಊಟಮಾಡುವಂತಿರಲಿಲ್ಲ. ಆದಕಾರಣ, ಅವರು ಅಡುಗೆಯ ಮನೆಯಲ್ಲಿ ಕೆಲಸಮಾಡುತ್ತಿದ್ದಾಗಲೆಲ್ಲ ಲಕ್ಷ್ಮಣರಾಯನಿಗೆ ತನ್ನ ಹೆಂಡತಿಯೊಡನೆ ಮಾತನಾಡಲು ಯಥೇಷ್ಟವಾಗಿ ಅವಕಾಶವು ಸಿಕ್ಕುತ್ತಿದ್ದಿತು. ಅವನು ನೂರಾರು ಮಾತುಗಳನ್ನಾಡಿದಮೇಲೆ ಅವಕ್ಕೆ ಉತ್ತರವಾಗಿ ಅವನ ಹೆಂಡತಿಯು ಒಂದೆರಡು ಮಾತುಗಳಿಂದಲೋ ಅಥವಾ ಮುಗುಳು ನಗೆಯಿಂದಲೋ ಉತ್ತರ ಹೇಳುತ್ತಿದ್ದಳು. ಅದೊಂದು ವಿಲಕ್ಷಣಭಾವನೆಯೆಂಬುದು ಅವನ ಅಭಿಪ್ರಾಯ.

ಒಂದು ದಿನ ಮಧ್ಯಾಹ್ನ ಹನ್ನೆರಡು ಗಂಟೆಯ ವೇಳೆಗೆ ಲಕ್ಷ್ಮಣ ರಾಯನು ಮನೆಗೆ ಬಂದನು. ಅಂದು ಭಾನುವಾರವಾಗಿದ್ದುದರಿಂದ ವಿಶಾಲಾಕ್ಷಮ್ಮನವರು ಯಥಾ ಸಾವಕಾಶವಾಗಿ ಅಡುಗೆಮಾಡುತ್ತಿದ್ದರು. ಜವಾನರೆಲ್ಲರೂ ಮನೆಗೆ ಹೊರಟುಹೋಗಿದ್ದರು. ಲಕ್ಷ್ಮಣರಾಯನು ತನ್ನ ಹೆಂಡತಿಯನ್ನು ನೋಡಿ ತನ್ನ ಕೊಟಡಿಗೆ ಬರುವಂತೆ ಸಂಜ್ಞೆಮಾಡಿದನು. ಅವಳು ನಕ್ಕಳು. ಹಲ್ಲುಗಳು ಕಪ್ಪಗಾಗಿದ್ದುವು. ವಿಷಪ್ರಯೋಗದಿಂದ ಹಲ್ಲು ಕಪ್ಪಾಗುವುದೆಂಬ ಅಂಶವನ್ನು ವೈದ್ಯದ ಪುಸ್ತಕಗಳಿಂದ ಚೆನ್ನಾಗಿ ಅರಿತಿದ್ದ ಲಕ್ಷ್ಮಣರಾಯನಿಗೆ ಬಹಳ ''ಗಾಬರಿ''ಯುಂಟಾಯಿತು.

ಹಳೆಯ ಅಂಗಿಯ ಮೇಲೆ ಅಂಗಿಯನ್ನು ಹಾಕಿಕೊಂಡು ಅವನು ಸಂಚಾರಾರ್ಥವಾಗಿ ಹೋಗಿಬಂದಿದ್ದನು. ತನ್ನ ಹೆಂಡತಿಯ ಹಲ್ಲುಗಳು ಕಪ್ಪು ಛಾಯೆಯಿಂದ ಕೂಡಿದ್ದುದನ್ನು ಕಂಡೊಡನೆಯೇ ಅವನು ಬೇಗ ರುಮಾಲನ್ನೂ ಸಿಲುವಂಗಿಯನ್ನೂ ಧರಿಸಿ ಅತ್ಯವಸರದಿಂದ ನಡೆದುಕೊಂಡು ದಂಡಿಗೆ ಹೋದನು. ಅಲ್ಲಿ ಒಂದು "ಬ್ರೋಹಾಂ" ಬಂಡಿಯನ್ನು ಗೊತ್ತುಮಾಡಿಕೊಂಡು, ದಂಡಿನಲ್ಲೆಲ್ಲ ಪ್ರಸಿದ್ಧನಾಗಿದ್ದ ಐರೋಪ್ಯ ವೈದ್ಯನಲ್ಲಿಗೆ ಹೋಗಿ ತನ್ನ ಹೆಂಡತಿಗೆ ವಿಷಪ್ರಯೋಗವಾಗಿದೆಯೆಂದು "ಗಾಬರಿ ಗಾಬರಿ" ಯಾಗಿ ತಿಳಿಸಿದನು. ವೈದ್ಯನೂ ಅನುತಾಪದಿಂದ ಕೂಡಿ ತನ್ನ ಊಟವನ್ನೂ ಬಿಟ್ಟು ಲಕ್ಷ್ಮಣರಾಯನೊಡನೆ ಬಂಡಿಯಲ್ಲಿ ಬಂದನು. ಬಂಡಿಯವನು ಎಷ್ಟು ಬೇಗ ಬಂಡಿಯನ್ನು ಹೊಡೆದರೂ ಲಕ್ಷ್ಮಣರಾಯನು "ಡಬಲ್ ಬಾಡಿಗೆ ಕೊಡ್ತೇನೆ. ಬೇಗ ಹೊಡಿ ಮಹಾರಾಯ. ನಿನ್ನ ಕುದುರೆಗೆ ಒಂದಕ್ಕೆರಡರಷ್ಟು ಹುರುಳಿಯನ್ನು ಕೊಡುವೆಯಂತೆ. ಬೇಗ, ಬೇಗ, ಹೊಡಿ" ಎಂದು ಪದೇ ಪದೇ ಹೇಳುತ್ತಿದ್ದನು.

ಬಂಡಿಯು ಮನೆಯ ಬಾಗಿಲಿನ ಬಳಿಗೆ ಬಂದು ನಿಂತೊಡನೆಯೇ ವೈದ್ಯನು ಅತ್ಯವಸರದಿಂದ ಬಂಡಿಯಿಂದ ಧುಮ್ಮಿಕ್ಕಿ "ವಿಷಪ್ರಾಶನವಾಗಿರುವವರೆಲ್ಲಿದ್ದಾರೆ, ವಿಷಪ್ರಾಶನವಾಗಿರುವವರೆಲ್ಲಿದ್ದಾರೆ?" ("Where is the patient, where is the patient?") ಎಂದು ಕೇಳುತ್ತ ಲಕ್ಷ್ಮಣರಾಯನೊಡನೆ ಮನೆಯೊಳಕ್ಕೆ ಹೋದನು. ಲಕ್ಷ್ಮಣರಾಯನು ವೈದ್ಯನನ್ನು ತನ್ನ ಕೊಟಡಿಯಲ್ಲಿ ಕುಳ್ಳಿರಿಸಿ ತನ್ನ ಹೆಂಡತಿಯನ್ನು ಕಾಣದೆ ತಮ್ಮ ತಾಯಿಯ ಬಳಿಗೆ ಹೋದನು. ಅವನ ಮುಖವು ಆತಂಕದಿಂದಲೂ ವ್ಯಥೆಯಿಂದಲೂ ಕೂಡಿದ್ದುದನ್ನು ಕಂಡು, ಗೋಧಿಯನ್ನು ಬೀಸುತ್ತಿದ್ದ ಹೆಣ್ಣಾಳು ತನ್ನ ಕೆಲಸವನ್ನೇ ನಿಲ್ಲಿಸಿ ಚಿತ್ರದ ಬೊಂಬೆಯಂತೆ ನಿಂತಳು.

ಲಕ್ಷ್ಮಣರಾಯನು ಅಡುಗೆಯ ಮನೆಯಲ್ಲಿದ್ದ ತಾಯಿಯೊಡನೆ "ಅವಳೆಲ್ಲಮ್ಮ? ಹೇಗಿದೆ ಅವಳ ಸ್ಥಿತಿ? ನನಗೆ ಕೈಕಾಲೇ ಆಡೋದಿಲ್ಲ. ನೀನು ಮಾತ್ರ ಸುಮ್ಮನೆ ಧೈರ್ಯವಾಗಿದ್ದೀಯೆ" ಎಂದನು. ವಿಶಾಲಾಕ್ಷಮ್ಮನವರು "ಮುಖವೇಕೆ ಹೀಗೆ ಹುಚ್ಚು ಹುಚ್ಚಾಗಿದೆಯಪ್ಪ? ಯಾರಿಗೆ ಏನಾಗಿದೆ? ನಿನ್ನ ಮಾತೇ ತಿಳಿಯಲಿಲ್ಲ" ಎಂದರು. ಲಕ್ಷ್ಮಣರಾಯನು

"ಓದುಬರೆಹ ಬಾರದ ಹೆಂಗಸರೊಡನೆ ಏಗುವುದು ಬಲು ಕಷ್ಟ. ಡಾಕ್ಟರು ಕಾದಿದ್ದಾರೆ. ಅವಳೆಲ್ಲಮ್ಮ, ಅವಳು?" ಎಂದನು. ಅಷ್ಟರಲ್ಲಿ ಊಟದ ಮನೆಗೆ ಬಂದ ಸೊಸೆಯನ್ನು ಕಂಡು ವಿಶಾಲಾಕ್ಷಮ್ಮನವರು "ಅಗೋ ಅಲ್ಲಿದ್ದಾಳೆ. ಡಾಕ್ಟರನ್ನೇಕೆ ಕರೆದು ತಂದೆ?" ಎಂದರು. ಲಕ್ಷ್ಮಣರಾಯನು "ಅವಳಿಗೆ ವಿಷಪ್ರಯೋಗವಾಗಿದೆ" ಎಂದು ಹೇಳಿ ತನ್ನ ಹೆಂಡತಿಯ ಕೈಯನ್ನು ಹಿಡಿದುಕೊಂಡು ವೈದ್ಯನು ಕುಳಿತಿದ್ದ ಕೊಟಡಿಗೆ ಓಡಿದನು. ವಿಶಾಲಾಕ್ಷಮ್ಮನವರ ಕೈಕಾಲುಗಳು ನಡುಗುವುದಕ್ಕುಪಕ್ರಮಿಸಿದುವು. ಅವರು ಅಳುತ್ತ "ವಿಷವೆಂದರೇನಪ್ಪ? ಯಾರು ತಂದುಕೊಟ್ಟರು? ಅಯ್ಯೋ ಇನ್ನೇನು ಗತಿ?" ಎಂದುಕೊಂಡು ಅವನ ಹಿಂದೆ ಹೋದರು.

ವಿಷಪ್ರಯೋಗವಾಗಿದ್ದ ಹುಡುಗಿಯನ್ನು ನಡೆಯಿಸಿಕೊಂಡು ಲಕ್ಷ್ಮಣರಾಯನು ತನ್ನೆಡೆಗೆ ಬಂದುದನ್ನು ಕಂಡು ವೈದ್ಯನು ಹಿಂದುಗಳಿಗೆ ಕರುಣವಿಲ್ಲವೆಂದು ತನ್ನ ಮನಸ್ಸಿನಲ್ಲಿ ಸಿದ್ಧಾಂತ ಮಾಡಿದನು. ವೈದ್ಯನು ಹುಡುಗಿಯ ದೇಹಸ್ಥಿತಿಯನ್ನು ಪರೀಕ್ಷೆಮಾಡಲುಪಕ್ರಮಿಸಿದನು. ಆ ಬಳಿಕ ಹುಡುಗಿಯು ಬಾಯಿ ತೆರೆಯಬೇಕೆಂದು ವೈದ್ಯನು ಕೋರಿದುದನ್ನು ಲಕ್ಷ್ಮಣರಾಯನು ಅವಳಿಗೆ ತಿಳಿಸಿದನು. ಅವಳು ನಾಚಿಕೆಯಿಂದ ಕೂಡಿ ಗಂಡನ ಬಲವಂತಕ್ಕೆ ಹಲ್ಲುಕಿರಿದಳು. ಹಲ್ಲುಗಳು ನೀಲಿ ಛಾಯೆಯಿಂದ ಕೂಡಿದ್ದುವು. ಲಕ್ಷ್ಮಣರಾಯನು ತನ್ನ ಆಗಿನ ಕಳವಳದಲ್ಲಿಯೂ ಸ್ಥೈರ್ಯವನ್ನು ಪ್ರದರ್ಶಿಸಿ, ವಿಷಪ್ರಯೋಗವಾದವರ ಹಲ್ಲು ಕಪ್ಪಗಾಗುವುದೆಂಬುದನ್ನು ತಾನು ಇಂಗ್ಲಿಷ್ ಪುಸ್ತಕಗಳಿಂದ ಓದಿದ್ದಕಾರಣ, ವೈದ್ಯನನ್ನು ಅಷ್ಟು ಬೇಗ ಕರೆದುಕೊಂಡು ಬರುವುದಕ್ಕೆ ಅನುಕೂಲಿಸಿತೆಂದು ಸೂಚಿಸಿದನು.

ಆ ಮಾತುಗಳನ್ನು ಕೇಳಿ ವೈದ್ಯನು ನಕ್ಕನು. ಮಾಂಸಾಹಾರಿಗಳಾದ ಯುರೋಪ್ಯರಿಗೆ ಕರುಣವಿರುವುದಿಲ್ಲವೆಂದು ಕ್ಷಣಮಾತ್ರದಲ್ಲಿ ಅದರಿಂದ ಲಕ್ಷ್ಮಣರಾಯನ ಮನಸ್ಸಿಗೆ ಹೊಳೆಯಿತು. ವೈದ್ಯನು "ಅದೋ? ಬರಿಯ ಬಣ್ಣ ಅಂಟಿಕೊಂಡು ಹೀಗಾಗಿದೆ. ಏನು ಅವಾಂತರಮಾಡಿಬಿಟ್ಟಿರಿ" ("It is but pigment. What a fuss you have made!") ಎಂದನು. ಆಮೇಲೆ ವಿಚಾರಣೆಗೆ ಪ್ರಾರಂಭವಾಯಿತು. ಲಕ್ಷ್ಮಣರಾಯನ

ಹೆಂಡತಿಯು ತಾನು ಬೆಳಗಿನಿಂದಲೂ ನೇರಿಳೆಯ ಹಣ್ಣುಗಳನ್ನು ತಿಂದಿದ್ದು ದಾಗಿಯೂ, ತನ್ನ ಗಂಡನು ವೈದ್ಯನ ಮನೆಗೆ ಹೋದಮೇಲೆ ಕೂಡ ತಾನು ಮತ್ತೆ ನೇರಿಳೆಯ ಹಣ್ಣುಗಳನ್ನು ತಿಂದುದಾಗಿಯೂ ಹೇಳಿದಳು. ವೈದ್ಯನು ತನಗೆ ಬರಬೇಕಾದ "ಫೀಜು" ಮೊಬಲಗನ್ನು ಪಡೆದು ನಗುತ್ತ ಹೊರಟುಹೋದನು.

ಮಗನ ವಿಚಿತ್ರ ವರ್ತನೆಯನ್ನು ಕಂಡು ವಿಸ್ಮಿತರಾಗಿ ವಿಶಾಲಾಕ್ಷಮ್ಮ ನವರು "ಲಚ್ಚು, ಲಚ್ಚು, ಒಲೆ ಶಾಖಕ್ಕೆ ಬೆಣ್ಣೆ ಕರಗಿದ ಹಾಗೆ ನಿನ್ನ ಓದಿನ ಜ್ವಾಲೆಗೆ ಬುದ್ಧಿಯೆಲ್ಲಾ ಕರಗಿ ಹೋಗಿರಬೇಕು. ಸ್ವಲ್ಪವೂ ಬುದ್ಧಿಯೇ ಇಲ್ಲವಲ್ಲಾ! ಯಾವ ಪುಸ್ತಕ ಪಿಶಾಚಿ ಮೆಟ್ಟಿಕೊಂಡು ಹೀಗೆಲ್ಲಾ ಕುಣಿಸುತ್ತಿದೆಯೋ ಕಾಣೆ. ಇಂಗ್ಲಿಷ್ ಓದೆಲ್ಲಾ ಪಿಶಾಚಗಳ ಮಯವಂತೆ" ಎಂದು ಹೇಳಿ ನಿಟ್ಟುಸಿರು ಬಿಟ್ಟರು. ಲಕ್ಷ್ಮಣರಾಯನು ತಲೆಯನ್ನು ತಗ್ಗಿಸಿ ತುಟಿಗಳ ಮೇಲೆ ಬಲಗೈ ತರ್ಜನಿಯನ್ನಿಟ್ಟುಕೊಂಡು "ಅದೆಲ್ಲಾ ಹಾಗಿರಲಮ್ಮ, ಮಾವನವರಿಗೆ ಟೆಲಿಗ್ರಾಂ ಕೊಟ್ಟುಬಿಟ್ಟೆನಲ್ಲಾ! ವಿಷಪ್ರಯೋಗವಾಗಿದೆಯೆಂಬ ಟೆಲಿಗ್ರಾಂ ನೋಡಿ ಅವರೆಲ್ಲಾ ಓಡಿಬಂದರೆ ಏನು ಹೇಳಲಿ?" ಎಂದನು. ಆ ಕಾಲದಲ್ಲಿ ತಂತಿಯ ಸಮಾಚಾರ ಕಳುಹಿಸುವ ಏರ್ಪಾಡು ಈಗಿನಂತೆ ಬಳಕೆಯಲ್ಲಿಲ್ಲದಿದ್ದ ಕಾರಣ, ವಿಶಾಲಾಕ್ಷಮ್ಮನವರು "ಟೆಲಿಗ್ರಾಂ" ಎಂಬ ಮಾತನ್ನು ಕೇಳಿ ಅದೇನೋ ಒಂದು ವಸ್ತುವಾಗಿರ ಬೇಕೆಂದು ಭ್ರಮಿಸಿದರು. ಆ ಬಳಿಕ, ವಿಶಾಲಾಕ್ಷಮ್ಮನವರು ಅಳುತ್ತ "ಹುಚ್ಚೂ ಹಿಡೀತೇ ಅಪ್ಪ? ಈ ಊರಿನಲ್ಲೇ ಇದ್ದೀಯೆ. ಮಾವನವರಿಗೆ ಗ್ರಾಂ–ಗ್ರಾಂ–ಅದೇನೋ ಹೇಳಿದೆಯಲ್ಲಾ ಅದನ್ನು ಕೊಟ್ಟೆನಂತೀಯಲ್ಲಪ್ಪ. ಬುದ್ಧಿ ಸ್ವಾಧೀನವಿಲ್ಲವೇ ಲಚ್ಚು? ಲಚ್ಚು, ಲಚ್ಚು, ನಾನು ಯಾರಪ್ಪ?" ಎಂದರು.

---

# “ ಎಲ್ಲಾ ಯಾರಿಗೆ ಗೊತ್ತು? ”

೧

ಸುಂದರಮ್ಮನಿಗೆ ಮೊದಲೇ ಮಲ್ಲಿಗೆಯ ಹೂವಿನಲ್ಲಿ ಬಹಳ ಇಷ್ಟ. ಇನ್ನು ಮೈಸೂರಿನ ಹೂವೇ ದೊರೆತಮೇಲೆ ಕೇಳತಕ್ಕುದೇನು? ಅಂದು ಸಾಯಂಕಾಲ ಅವಳು ಸಡಗರದಿಂದ ಒಂದು ಅಡಕೆಯ ಹಾಳೆಯ ಪೊಟ್ಟಣ ವನ್ನು ಬಿಚ್ಚುತ್ತಿದ್ದಳು. ನಾರಾಯಣಮೂರ್ತಿಯು ನಲ್ಲೆಯ ಮುಖದಲ್ಲಿ ಮೂಡಿದ್ದ ನಗೆಮಲ್ಲಿಗೆಯನ್ನು ನೋಡಿ ನೋಡಿ ಆನಂದಪಡುತ್ತಿದ್ದನು. ಅಲ್ಲದೆ, ಕೇವಲ ಕುತೂಹಲದಿಂದ ಅವನು ಆ ಪೊಟ್ಟಣವನ್ನೇ ದೃಷ್ಟಿಸಿ ನೋಡುತ್ತಿದ್ದನು. ಸುಂದರಮ್ಮನು ನಿಮಿಷಮಾತ್ರದಲ್ಲಿ ಅದನ್ನು ಬಿಚ್ಚಿದಳು. ಗಿಡದಮೇಲೆ ಆಗತಾನೆ ಅರಳಿದಂತೆ ತೋರುತ್ತ ಅರೆಬಿರಿದಿದ್ದ ದುಂಡು ಮಲ್ಲಿಗೆಯ ದಂಡೆ! ಅದನ್ನು ನೋಡಿ ನಾರಾಯಣಮೂರ್ತಿಯು ಅಚ್ಚರಿ ಯಿಂದ ತಲೆದೂಗಿದನು. ಒಂದೆರಡು ನಿಮಿಷಗಳ ಕಾಲ ಅವನಿಗೆ ಒಂದೂ ತೋರದಂತಾಯಿತು. ಕೊನೆಗೆ ಅವನು ಆದರದಿಂದ ಸುಂದರಮ್ಮನ ಬೆನ್ನಿನ ಮೇಲೆ ಕೈ ಹಾಕಿ “ ಸುಂದರಾ! ಇಬ್ಬರೇ ಇಬ್ಬರು ನನ್ನ ಕಣ್ಣಿನ ಪರೆಯನ್ನು ಹಾರಿಸಿ ಬಿಟ್ಟರು ” ಎಂದನು.

ಸುಂದರಮ್ಮನು ಸ್ವಲ್ಪ ವ್ಯಂಗ್ಯವಾಗಿ ನಕ್ಕು “ ನೀವು ಈ ಸಲ ಪ್ರಯಾಣ ಹೋಗಿಬಂದದ್ದು ಒಳ್ಳೆಯದೇ ಆಯಿತು. ಗೋಮಟೇಶ್ವರ ನಮ್ಮ ದೇವರಲ್ಲ. ಆದರೂ ಚಿಂತೆಯಿಲ್ಲ. ಸತ್ಯವಂತ ದೇವರು. ನಾನು ಒಪ್ಪಿಕೊಂಡೆ. ಹನ್ನೆರಡು ವರುಷಕ್ಕೊಂದು ಸಲ ಸೀಮೆ ಸೀಮೆಯೋರೆಲ್ಲಾ ಸೇರಿ ಅಷ್ಟು ದೊಡ್ಡ ಅಭಿಷೇಕಮಾಡಿಸೋದು ನ್ಯಾಯ, ನ್ಯಾಯ. ಅವನೇ ಅವರಿಬ್ಬರನ್ನೂ ಒದಗಿಸಿರಬೇಕು. ನೀವು ಮೈಸೂರಿಂದ ಬಂದ ಮೇಲೆ ಬೇರೆ ಮನುಷ್ಯರಾಗಿಯೇ ಬಂದುಬಿಟ್ಟಿರಿ. ಸದ್ಯ ಇನ್ನುಮೇಲೆ ನಿಮ್ಮ ಕೈ ಕೆಳಗೆ ಓದೋ ಹುಡುಗರೂ ಬದುಕಿದರು. ನಾನೂ ಬದುಕಿದೆ.

ಒಂದು ಕಥೆಯೇನೋ ನೀವು ಹೇಳದೆಹೋದರೂ ಅಚ್ಯುತರಾಯರ ಹೆಂಡತಿಯಿಂದ ತಿಳಿದೇ ಹೋಯಿತು. ಹೂವಾಡಿಗನ ಕಥೆಯನ್ನಾದರೂ ನೀವು ಹೇಳಿದಿರಲ್ಲ. ಅಷ್ಟೇ ಸಾಕು " ಎಂದಳು.

೨

ನಾರಾಯಣಮೂರ್ತಿಯು ಒಂದು ಹೈಸ್ಕೂಲಿನ ವಿಜ್ಞಾನದ ಉಪಾಧ್ಯಾಯ (ಸೈನ್ಸ್ ಮೇಷ್ಟರು). ಅವನು ಬಹಳ ಮುಂಗೋಪಿಯಾದ ಮನುಷ್ಯ. ಸಾಮಾನ್ಯರಿಗೆ ಹೋಲಿಸಿದರೆ ಅವನಿಗೆ ಕೈ ತುಂಬ ಸಂಬಳ ಬರುತ್ತಿದ್ದಿತೆಂದೇ ಹೇಳಬಹುದು. ಪಿತ್ರಾರ್ಜಿತವಾದ ಆಸ್ತಿಯೂ ಇದ್ದಿತು. ಅವನಿಗೆ ಇನ್ನೂ ಚಿಕ್ಕ ವಯಸ್ಸು. ಸುಂದರಮ್ಮನೆಂಬ ಹೆಸರಿಗೆ ತಕ್ಕಂತೆ ಸುಂದರಿಯೇ ಆಗಿ ಗುಣವತಿಯೂ ಆಗಿದ್ದ ಹೆಂಡತಿ. ಒಬ್ಬನೇ ಮಗನೆಂದು ಮುದ್ದುಮಾಡಿ ಸಾಕಿದ್ದ ತಾಯಿ. ಇನ್ನು ಕೇಳಬೇಕಾದುದೇನು? ಹುಡುಗರ ಮೇಲಂತು, ಅವನ ದರ್ಪಕ್ಕೆ ಕೊನೆ ಮೊದಲೇ ಇರಲಿಲ್ಲ.

ಆದರೂ ನಾರಾಯಣಮೂರ್ತಿಯ ಮನಸ್ಸಿಗೆ ಒಂದು ಕೊರತೆಯಿದ್ದಿತು. ಜವಾನ ಕೇರೋಜಿಯು ತನ್ನನ್ನು ಸಾಹೇಬರೆಂದು ಸಂಬೋಧಿಸಬೇಕೆಂದು ಅವನ ಆಸೆ. ತನ್ನನ್ನು ಸಂಬೋಧಿಸಬೇಕೆಂದು ಅವನು ಧ್ವನಿಯಿಂದ ಸೂಕ್ಷ್ಮವಾಗಿ ಸೂಚಿಸಿದರೂ ಕೇರೋಜಿಯು ಅವನ ಆಶಯವನ್ನು ಗ್ರಹಿಸಲಿಲ್ಲ. ಅಷ್ಟೇ ಅಲ್ಲ. ಕೇರೋಜಿಯು ನಾರಾಯಣ ಮೂರ್ತಿಯಲ್ಲಿ ದೈನ್ಯತೆಯಿಂದ ಅಡಿಯಾಳಿನಂತೆ ವರ್ತಿಸುತ್ತಿರಲಿಲ್ಲ. ಕೇರೋಜಿಗೆ ತಾನು ಶಿವಾಜಿಯ ಸರದಾರನ ವಂಶಸ್ಥನೆಂಬ ಹೆಮ್ಮೆ. ಅವನು ಕತ್ತಿಯನ್ನೇ ಕಂಡರಿಯನು. ಆದರೂ ತಾನು ಕಡುಗಲಿಯಾದ ಕಟ್ಟಾಳೆಂಬುದು ಅವನ ಭಾವನೆ. ಸತ್ತಮೇಲೆ ಸ್ವರ್ಗದಲ್ಲಾದರೂ ಶಿವಾಜಿಯ ಊಳಿಗವು ದೊರೆತರೆ ಸಾಕೆಂಬುದು ಅವನ ಹಾರೈಕೆ. ಆದಕಾರಣ ಶಿವಾಜಿಯೊಬ್ಬನನ್ನು ಬಿಟ್ಟು ತಾನು ಮತ್ತಾರನ್ನೂ ಅಧೀಶ್ವರರೆಂದು ಭಾವಿಸಿ ಅಧೀನತೆಯನ್ನು ಒಪ್ಪಿಕೊಳ್ಳುವುದಿಲ್ಲವೆಂಬುದು ಕೇರೋಜಿಯ ದೃಢಸಂಕಲ್ಪ. ತನ್ನ ದರ್ಪವು ಸಾಗಲಿಲ್ಲವೆಂದು ನಾರಾಯಣಮೂರ್ತಿಗೆ ಕೋಪ. ಅವನು ಆಗಾಗ ಆ ಕೋಪವನ್ನು ಹುಡುಗರ ಮೇಲೆ ತೋರಿಸುತ್ತಿದ್ದನು.

ಹುಡುಗರು ಒಂದೇ ದಿನ ಅವನನ್ನು ಹಲವು ಸಾರಿ ಕಂಡರೂ ಪ್ರತಿಯೊಂದು ಸಾರಿಯೂ "ಗುಡ್ ಮಾರ್ನಿಂಗ್" ಮಾಡಲೇಬೇಕು. "ಗೊಡ್ಡು ಆಚಾರದಂತೆ" ಕೈಮುಗಿಯಕೂಡದು. ಅವನ ಅಭಿಪ್ರಾಯದಲ್ಲಿ ಅದು ಅಸಭ್ಯತೆಯನ್ನು ತೋರಿಸುವ ಹೆಗ್ಗುರುತು. (ಅದಕ್ಕಾಗಿಯೇ ಕೇರೋಜಿಯು "ರಾಂ, ರಾಂ, ಸ್ವಾಮಿ!" ಎಂದು ಹೇಳಿ ಕೈಮುಗಿದರೆ ಅವನು ಸಿಡಿಮಿಡಿಗೊಳ್ಳುತ್ತಿದ್ದುದು.) ವಿದ್ಯಾರ್ಥಿಗಳಿಗಾಗಿಯೇ ಸ್ಥಾಪಿಸಲ್ಪಟ್ಟುದಾಗಿ ಬರೆದಿದ್ದ "ಶಾರದಾ ಫಳಹಾರ ಮಂದಿರಂ" ಎಂಬ ತಿಂಡಿಯ ಅಂಗಡಿಯಲ್ಲಿ ಅವನನ್ನು ಕಂಡರೂ "ಮೇಷ್ಟ್ರು ತಿಂಡಿ ತಿನ್ನುತ್ತಿದ್ದಾರೆ. ಈಗ ಹೇಗಯ್ಯಾ ಗುಡ್ ಮಾರ್ನಿಂಗ್ ಮಾಡೋದು" ಎಂದುಕೊಂಡು ಹುಡುಗರು ಸುಮ್ಮನಿರುವ ಹಾಗಿರಲಿಲ್ಲ.

ತಾನು ವಿದ್ಯಾರ್ಥಿಯಾಗಿದ್ದ ಕಾಲದಲ್ಲಿ ಹುಡುಗರು ಬಹಳ ಮೇಧಾವಿಗಳಾಗಿದ್ದರೆಂಬುದು, ನಾರಾಯಣಮೂರ್ತಿಯು ಆಗಾಗ ಶ್ರದ್ಧೆಯಿಂದ ಮಾಡುತ್ತಿದ್ದ ಜಪ. ಒಂದು ದಿನ ಇಸ್ಪೀಟಿನ ಆಟವಾಡುತ್ತಿದ್ದಾಗ್ಗೆ, ಈ ಪ್ರಸ್ತಾಪವು ಬಂದು ಬಹಳ ರಗಳೆಯಾಯಿತು. ಅವನ ಜೊತೆಯವರೊಬ್ಬರು "ಏನು ಹೇಳಿದ್ರೇ ಹೇಳ್ತೀರ್ರಿ. ನಮ್ಮ ಕಾಲದ ಹಾಗೆ ಈಗಲೂ ಬುದ್ಧಿವಂತರೂ ಇದ್ದಾರೆ. ದಡ್ಡರೂ ಇದ್ದಾರೆ. ಇಷ್ಟೆಲ್ಲಾ ಹೇಳೋರು ನೀವ್ಯಾಕ್ರಿ ಥರ್ಡ್ ಕ್ಲಾಸಿನಲ್ಲಿ ಪ್ಯಾಸ್ ಮಾಡಿದ್ದು?" ಎಂದರು. ಮೂರ್ತಿಗೆ ಮೊದಲೇ ಮುಂಗೋಪ. ಜೊತೆಯವರು ಹೀಗೆ ಹೇಳಿದುದು ಮೂಗರ ಮುಂದೆ ಮೂಗು ಕೆರೆದುಕೊಂಡಹಾಗಾಯಿತು. ಆದರೂ ಅದು ಕೋಪದ ಸಮಯವಲ್ಲ. ಎಷ್ಟೋ ಕಷ್ಟಪಟ್ಟು ಅವನು ಕೋಪವನ್ನು ನುಂಗಿ ನಡಗುವ ಸ್ವರದಿಂದ "ಸುಮ್ಮನಿರಿ, ಸಾರ್! ನಮ್ಮ ಕಾಲದ ಸಾಮಾನ್ಯ ಗ್ರಾಜುಯೇಟುಗಳ ಸಾಮರ್ಥ್ಯದಲ್ಲಿ ಹತ್ತರಲ್ಲೊಂದು ಪಾಲು ಕೂಡ ಈಗಿನ ಫಸ್ಟ್ ಕ್ಲಾಸಿನವರಿಗಿಲ್ಲ" ಎಂದನು. ಆದರೂ ಕೋಪದ ಆವೇಶದಲ್ಲಿ "ತುರುಫ್ ಹತ್ತನೆಯ ಎಲೆಗೆ" ಬದಲು "ನೈಲಾ ಇಳಿದನು." ಆಟವೇ ಕೆಟ್ಟುಹೋಯಿತು. ಅವಾಂತರವು ಹತ್ತಿತು. ಆಟಕ್ಕೆ ಆರುಕಾಸಿನಂತೆ ಪ್ರತಿಯೊಬ್ಬರೂ ಪಣವನ್ನಿಟ್ಟು ಆಡುತ್ತಿದ್ದ ಆಟವು ಒಬ್ಬನ ಅವಿವೇಕದಿಂದ ಹಾಳಾದರೆ ಉಳಿದವರು ಸುಮ್ಮನಿರುವ ಬಗೆ ಹೇಗೆ?

ನಾರಾಯಣಮೂರ್ತಿಗೆ ಆ ದಿನ ಬಹಳ ಬೇಸರವಾಯಿತು. ಶ್ರವಣ ಬೆಳಗೊಳಕ್ಕೆ ಹೋಗಿ ಗೋಮತೇಶ್ವರನನ್ನು ನೋಡಿಬರಬೇಕೆಂಬುದಾಗಿ ಅವನು ಬಹಳ ದಿವಸಗಳಿಂದಲೂ ತವಕಪಡುತ್ತಿದ್ದನು. ಮರುದಿನವೇ ಅಲ್ಲಿಗೆ ಪ್ರಯಾಣಮಾಡಿ ತನ್ನ ಜೊತೆಯವರ ಕಾಟವಿಲ್ಲದೆ ಮೂರು ನಾಲ್ಕು ದಿನಗಳಾದರೂ ನಿರಾತಂಕವಾಗಿದ್ದು ಶಿಲ್ಪಕಲಾ ಸೌಂದರ್ಯರಾಶಿಯಾದ ಗೋಮತೇಶ್ವರ ವಿಗ್ರಹವನ್ನು ನೋಡಿಬರಬೇಕೆಂದು ಅವನು ಆಗಿನ ಕೋಪಾವೇಶದಲ್ಲಿ ಸಿದ್ಧಾಂತಮಾಡಿಬಿಟ್ಟನು. ತಾನೂ ತನ್ನ ಆಪ್ತ ಮಿತ್ರನಾದ ಅಚ್ಯುತರಾಯನೂ, ಇಬ್ಬರೇ ಹೋಗಿಬರಬೇಕೆಂದೂ ಅವನು ನಿರ್ಧರಮಾಡಿದನು.

ಗಂಡನೊಡನೆ ತಾನೂ ತನ್ನ ಮಗನೂ ಶ್ರವಣಬೆಳಗೊಳಕ್ಕೆ ಹೋಗಿ ಬರಬೇಕೆಂಬುದು ಸುಂದರಮ್ಮನ ಆಸೆ. ನಾರಾಯಣಮೂರ್ತಿಯು ಅವಳ ಆಸೆಯು ಈಡೇರುವುದಕ್ಕೆ ಅವಕಾಶಕೊಡಲಿಲ್ಲ. ಅಲ್ಲದೆ, "ನಾನು ಅಲ್ಲಿರುವ ಶಿಲ್ಪಕಲಾ ಭಂಡಾರ ನೋಡಿಕೊಂಡು ಬರೋಣವೆಂದರೆ ಇವಳೂ ಬರಬೇಕಂತೆ. ಮೂರುಕಾಸಿನ ಹೆಂಗಸಿಗೆ ಈ ಪಾರುಪತ್ಯ" ಎಂದು ಗದರಿಸಿದನು.

ಸುಂದರಮ್ಮನೂ ಮಾತಿನಲ್ಲಿ ಹಿಂದೆ ಬೀಳಲಿಲ್ಲ. "ನಿಮ್ಮ ಕೆಲಸ ಒಂದೊಂದಲ್ಲ. ಎಲ್ಲಾ ಪದಾರ್ಥಗಳೂ ಕರಗಿ ಹೋಗೋಹಾಗೆ ಧೃತಿಕಂಡು ಹಿಡಿಯೋಕೆ ಹೊರಟಿರೋರು ನೀವೇ ಅಲ್ಲವೆ? ಒಳ್ಳೆ ದ್ರಾವಕ ಕಂಡು ಹಿಡೀಬೇಕೂಂತ ಮಾಡಿದೀರಿ. ನಂಗೆ ಇಂಗ್ಲೀಷ್ ಬರದೆಹೋದರೂ ಅದು ಬಾಯಿಪಾಠವಾಗಿ ನಿಂತಿದೆ. 'ಯೂನಿವರ್ಸಲ್ ಸಾಲ್ವೆಂಟ್, ಯೂನಿವರ್ಸಲ್ ಸಾಲ್ವೆಂಟ್' (Universal Solvent) ಅಂತ ತೊಳಲಿ ಬಳಲಿ ಸಾಕಾದಿರಿ. ಕಂಬಗಳಿಗೆಲ್ಲಾ ಬಾಯಿಪಾಠವಾಯಿತೋ ಏನೋ! ನಾನು ಮೂರುಕಾಸಿನ ಹೆಂಗಸೇ ಆಗಲಿ. ನಾನು ಕೇಳಿದ ಪ್ರಶ್ನೆಗೆ ನೀವು—ರುಪಾಯಿ ಗಂಡಸರು ಏಕೆ ಉತ್ತರ ಹೇಳಲಿಲ್ಲ? ಒಂದು ವೇಳೆ ನೀವು ಅದನ್ನ ಕಂಡುಹಿಡಿದಿದ್ದರೆ ಆ ದ್ರಾವಕವನ್ನು ಯಾವ ಪಾತ್ರೇಲಿ ಇಡೋಕೂ ಯತ್ನವಿರಲಿಲ್ಲವಲ್ಲಾ! ಎಲ್ಲಾನೂ ಆ ದ್ರಾವಕದಲ್ಲಿ ಕರಗಿಹೋಗಬೇಕಲ್ಲಾ! ನೀವು ಯಾವ ಪಾತ್ರೇಲಿ ಇಡೋದು?" ಎಂದು ಅವಳು ಉತ್ತರ ಹೇಳಿ ಗಹಗಹಿಸಿ ನಕ್ಕಳು.

ನಾರಾಯಣಮೂರ್ತಿಯು ಹಳ್ಳದಲ್ಲಿ ಬಿದ್ದ ಆನೆಯಾಗಬೇಕಾಯಿತು. ಆದರೂ ಅವನು ಕೋಪದಿಂದ ಸುಂದರಮ್ಮನನ್ನು ಗದರಿಸುವುದರಲ್ಲಿದ್ದನು. ಅಲ್ಲದೆ, ದೊಡ್ಡದೊಡ್ಡ ವಿಚಾರಗಳನ್ನು ಯೋಚಿಸುತ್ತಿರುವಾಗ ಈ ಸಣ್ಣ ಪುಟ್ಟ ವಿಚಾರಗಳು ತೋರುವುದಿಲ್ಲವೆಂದು ಸಮಾಧಾನ ಹೇಳುವುದರಲ್ಲಿದ್ದನು. ಪ್ರಸಿದ್ಧ ಭೌತಿಕ ಶಾಸ್ತ್ರಜ್ಞನಾದ ನ್ಯೂಟನನು ಗಡಿಯಾರವನ್ನು ಕೋಳಿಯ ಮೊಟ್ಟೆಯೆಂದು ಭಾವಿಸಿ ನೀರಿನಲ್ಲಿ ಕುದಿಸಿದುದೇ ಮೊದಲಾದ ನಿದರ್ಶನಗಳು ಅವನ ತುಟಿಯ ಮೇಲಿದ್ದುವು. ಅಷ್ಟರಲ್ಲಿ ಅವನ ಮಗನು ತಾನೂ ಊರಿಗೆ ಬರುವುದಾಗಿ ಹಟಹಿಡಿದನು. ಬಣ್ಣಬಣ್ಣದ ಚಿತ್ರಗಳಿರುವ ಪುಸ್ತಕವನ್ನು ತಂದುಕೊಡುವುದಾಗಿಯೂ ಮಗನು ಮತ್ತೊಂದು ಸಲ ತನ್ನೊಡನೆ ಬರಬಹುದೆಂದೂ ನಾರಾಯಣಮೂರ್ತಿಯು ಅವನನ್ನು ಸಮಾಧಾನಗೊಳಿಸಲು ಪ್ರಯತ್ನಿಸಿದನು.

**ಹುಡುಗ.**—"ಅದರಲ್ಲಿ ಎಲ್ಲಾ ಚಿತ್ರಗ್ಳೂ ಇರುತ್ತವೋ?"

**ನಾರಾಯಣಮೂರ್ತಿ.**—"ಎಲ್ಲಾ ಚಿತ್ರಗಳೂ."

**ಹುಡುಗ.**—"ನಾನು ಕೇಳೋ ಚಿತ್ರಗಳೆಲ್ಲಾ ಇರುತ್ತವೋ?"

**ನಾರಾಯಣಮೂರ್ತಿ.**—"ಓಹೋ! ಇರುತ್ತವಪ್ಪ."

**ಹುಡುಗ.**—"ಹಾಗಾದ್ರೆ ಅಮ್ಮನ ಚಿತ್ರ, ನನ್ನ ಚಿತ್ರ, ನಿನ್ನ ಚಿತ್ರ, ಎಲ್ಲಾ ಇರಬೇಕು. ನಂಗೆ ಅದೇ ಆಸೆ. ಗೋಡೆಮೇಲಿರೋ ಕರೀ ಚಿತ್ರ ನಂಗೆ ಬೇಡ. ನಾನೂ ಅಮ್ಮ ಬೆಳ್ಳಗಿದ್ದರೂ ಆ ಚಿತ್ರ ಮಾತ್ರ ಕಪ್ಪಗಿದೆ. ನಂಗೆ ಇಂಥಾದ್ದು ಬೇಡ. ಒಳ್ಳೇದು, ಒಳ್ಳೇ ಚಿತ್ರಾ ನಂಗೆ ಬೇಕು. ತರ್ತೀಯೊ?"

ಹುಡುಗನ ಮಾತನ್ನು ಕೇಳಿ ದಂಪತಿಗಳಿಬ್ಬರೂ ನಕ್ಕರು. ಸುಂದರಮ್ಮನು ಮಗುವನ್ನು ಬಾಚಿತಬ್ಬಿಕೊಂಡು ಕೆನ್ನೆಗೆ ಮುತ್ತಿಟ್ಟಳು. ನಾರಾಯಣಮೂರ್ತಿಯು ಅವಳನ್ನು ಕರೆದುಕೊಂಡು ಹೋಗಲು ಸಮ್ಮತಿಸಲಿಲ್ಲ. ಸುಂದರಮ್ಮನೂ ಚಂಡಿಸಿ ಕೇಳದೆ ಸುಮ್ಮನಾದಳು. ನಾರಾಯಣಮೂರ್ತಿಯೂ ಅಚ್ಯುತರಾಯನೂ ಶ್ರವಣಬೆಳಗೊಳಕ್ಕೆ ಪಯಣ ಬೆಳಸಿದರು.

೩

ಯಥಾಕಾಲದಲ್ಲಿ ಅವರು ಮಂದಗೆರೆಯ ರೈಲು ಸ್ಟೇಷನ್ನಿನಲ್ಲಿ ಇಳಿದರು. ಮಳೆಗಾಲದಲ್ಲಿ ಬರುವವರು ಅಲ್ಲಿ ಹೇಮಾವತಿಯನ್ನು ದೋಣಿಯಲ್ಲಿ ದಾಟಿ ಮುಂದಕ್ಕೆ ಹೋಗಬೇಕು. ಅಂದು ತುಂಬು ಹೊಳೆ. ಹೇಮಾವತಿಯ ನೀರಿನ ರಭಸವು ಬಹಳ ಹೆಚ್ಚು. ಭೋರ್ಗರೆಯುತ್ತ ನೀರು ಹರಿಯುತ್ತಿದ್ದಿತು. ತೊಲೆಗಳು, ತುಂಡುಗಳು, ಬಳ್ಳಿ ಸಹಿತವಾದ ಬೂದಿಗುಂಬಳ ಕಾಯಿಗಳು ಇವೆಲ್ಲಾ ತೇಲಿ ಬರುತ್ತಿದ್ದುವು. ಆದರೆ, ಅಂದು ಮಧ್ಯಾಹ್ನದಿಂದ ಪ್ರವಾಹವು ಸ್ವಲ್ಪ ಇಳಿಮುಖವಾಗಿದ್ದಿತು. ಹಿಂದಿನ ಎರಡು ದಿನಗಳೂ ಪೂರ್ಣ ಪ್ರವಾಹ. ದೋಣಿಯನ್ನು ಬಿಡುವ ಹಂಬಲೇ ಇರಲಿಲ್ಲ. ಅಂದು ಮಾತ್ರ ದೋಣಿಯನ್ನು ಬಿಟ್ಟರೂ ಬಿಡಬಹುದೆಂದು ಅಂಬಿಗನ ಅಭಿಪ್ರಾಯ. ಆದರೂ ಅವನಿಗೆ ಪೂರ್ತಿಯಾಗಿ ಧೈರ್ಯವಿರಲಿಲ್ಲ. ಇಂತಹ ಸಮಯದಲ್ಲಿ ನಾರಾಯಣಮೂರ್ತಿಯೂ, ಅಚ್ಯುತರಾಯನೂ ದೋಣಿಯನ್ನು ಬಿಡುವ ಸ್ಥಳಕ್ಕೆ ಹೋದರು. ಹೊಳೆಯನ್ನು ದಾಟಲು ಮತ್ಯಾವ ಗಿರಾಕಿಯೂ ಇರಲಿಲ್ಲ. ತುಂಬಿದ ಹೊಳೆಯನ್ನು ದಾಟುವುದೆಂದರೆ ಎಲ್ಲರೂ ಹಿಂತೆಗೆಯುವರು. ನಾರಾಯಣಮೂರ್ತಿಯು ಅಂಬಿಗನನ್ನು ಕುರಿತು, "ಏನೋ! ದೋಣಿ ಬಿಡುತ್ತೀಯಾ?" ಎಂದನು.

**ಅಂಬಿಗ.**—"ಏನ್ಸಾಮಿ! ಭರ್ತಿ ಹೊಳೆ ಬಂದದೆ. ಎರಡು ದಿನ ದೋಣಿ ಬಿಟ್ಟಿಲ್ಲ. ಇವೊತ್ತು ಕೊಂಚವಾಗೆ ಇಳಿಮುಖ. ತಾಯಿ ಉಕ್ಕಾಕ್ಕೊಂಡು ಬಂದವಳೆ. ಎಷ್ಟು ಕೋಪವಾಗವಳೆ, ನೋಡಿದ್ರಾ! ಬಲಿ ಬಿದ್ದ ಹೊರತು ಕೋಪ ಅಡಗಾಕಿಲ್ಲ ಬುದ್ದಿ. ನಾನೂ ಕಾಲಾ ಕಂಡ ಮನುಸ. ಇಂಥಾದ್ದು ಬಹಳ ನೋಡಿವ್ನಿ. ಎಷ್ಟು ಜನಾನೋ ಬಾಯ್ಗಾಕ್ಕೊಂಡವಳೆ!"

**ನಾರಾಯಣಮೂರ್ತಿ.**—"ಏನು ಗೊಡ್ಡುನಂಬಿಕೆಯೋ ನಿಮ್ಮದು! ಕೇಳಿದ್ದಕ್ಕೆ ಜವಾಬಿಲ್ಲ. ಹರಟೆ ಕೊಚ್ತಾನೆ."

**ಅಂಬಿಗ.**—"ಕೋಪಿಸಿಕೊ ಬೇಡ! ನಮ್ಮಪ್ಪ! ಕೆಲವು ಸಂಗತಿಗಳು ನಮಗೆ ತಿಳಿಯಾಕಿಲ್ಲ. ಕೆಲವು ಸಂಗತಿ ನಿಮಗೆ ತಿಳಿಯಾಕಿಲ್ಲ. ಹಿಂಗೈತೆ ನಿಜದ ಮಾತು. ನಾನೇನೋ ತಲೆಹರಟೆಗಾರ. ಇರಲಿ. ಕಷ್ಟಪಟ್ಟು

ದೋಣಿ ಬಿಡಬೇಕು. ನಿಮ್ಮಿಬ್ಬರಿಗೋಸ್ಕರವೇ ಬಿಡಬೇಕು. ತುಂಬು ಹೊಳೆ. ನಾನು, ನಮ್ಮ ಹೈದ, ಇಬ್ಬರೂ ಜಳವೇ ಆಡಿಸಬೇಕು. ಮೂರು ರೂಪಾಯಿ ಕೊಟ್ಟರೆ ದೋಣಿ ಬಿಡ್ತೀವಿ.''

**ನಾರಾಯಣಮೂರ್ತಿ.—**'' ಎಷ್ಟೋ ನಿನ್ನ ಕಗ್ಗ? ಎರಡೂವರೆ ರೂಪಾಯಿ ಕೊಡ್ತೀವಿ. ಬಿಟ್ಟರೆ ದೋಣೀ ಬಿಡು. ಇಲ್ಲವಾದರೆ ಹೋಗು.''

**ಅಂಬಿಗ.—**'' ಅಪ್ಪ ಹಟಗಾರ ನಮ್ಮಪ್ಪ! ಹಂಗೇ ಮಾಡಿ. ದೋಣಿ ಬಿಡ್ತೀವಿ.''

ಅಂಬಿಗನ ಕೈಗೆ ಎರಡೂವರೆ ರೂಪಾಯಿಗಳು ಬಿದ್ದುವು. ಚೌಕಾಯಿಸಿ ಮಾಡಿ ಕೊಸರುವುದನ್ನರಿಯದ ಪೆಚ್ಚುಮನುಷ್ಯರಿಗೆ ಟೋಪಿ ಹಾಕಿದೆ ನೆಂದು ಅಂಬಿಗನಿಗೆ ಸಂತೋಷ. ತನ್ನ ದರ್ಪದ ದೆಸೆಯಿಂದ ಎಂಟು ಆಣೆಗಳು ಉಳಿದುವೆಂದು ನಾರಾಯಣಮೂರ್ತಿಗೆ ಸಂತೋಷ. ತಾನು ಬಡವ ನಾಗಿದ್ದೂ ನಾರಾಯಣಮೂರ್ತಿಯಂಥ ಧಾರಾಳಿಯಾದ ಸನ್ಮಿತ್ರನ ದಯೆ ಯಿಂದ ತನಗೆ ಗೋಮಟೇಶ್ವರನ ವಿಗ್ರಹವನ್ನು ನೋಡಲು ಅನುಕೂಲವು ದೊರೆಯಿತೆಂದು ಅಚ್ಯುತರಾಯನಿಗೆ ಸಂತೋಷ.

ನಾರಾಯಣಮೂರ್ತಿಯೂ ಅವನ ಮಿತ್ರನೂ ದೋಣಿಯನ್ನು ಹತ್ತಲು ಹೊಳೆಯ ತಡಿಗೆ ಬಂದರು. ಅವರೀರ್ವರೂ ಉಟ್ಟಿದ್ದ ಪಂಚೆಗಳೂ ಕೊಕ್ಕರೆಯ ಗರಿಯಹಾಗೆ ಬೆಳ್ಳಗಿದ್ದುವು. ಆದಕಾರಣ, ದೋಣಿಯ ಮೇಲಿದ್ದ ಕೊಳಕಾದ ಅಡ್ಡ ಹಲಗೆಯ ಮೇಲೆ ಕುಳಿತುಕೊಳ್ಳಲು ಅವರಿಗೆ ಮನಸ್ಸು ಬಾರದು. ಆದರೆ ಕುಳಿತುಕೊಳ್ಳದೆ ಇದ್ದರೆ ನಿರ್ವಾಹವಿಲ್ಲ. ಅವರ ಆತಂಕ ವನ್ನೂ ಅನುಮಾನವನ್ನೂ ನೋಡಲಾರದೆ ಅಂಬಿಗನು ತನ್ನ ರುಮಾಲನ್ನು ಅದರಮೇಲೆ ಹಾಸಿದನು. ಅವರು ಸ್ವಲ್ಪ ಸಂಕೋಚ ಸಂತೋಷಗಳಿಂದ ಅದರಮೇಲೆ ಕುಳಿತುಕೊಂಡರು. ದೋಣಿಯು ಹೊರಟಿತು.

ಅಂಬಿಗರಿಬ್ಬರೂ ದೋಣಿಯನ್ನು ಹೊಳೆಯ ದಡದ ಅಂಚಿನಲ್ಲಿಯೇ ಬಿಡುತ್ತ ಹೋದರು. ನಾರಾಯಣಮೂರ್ತಿಗೆ ಆತುರ. '' ನೆಟ್ಟಗೆ ಹೊಳೆಯನ್ನು ದಾಟಿಸದೆ ದೋಣಿಯನ್ನು ಹೀಗೇಕೆ ಬಿಡುತ್ತಿದ್ದೀರೋ?'' ಎಂದು ಅವನು ಕೇಳಿದನು. ಅಂಬಿಗನು '' ಅದಕ್ಕೇ ನಾನು ಹೇಳಿದ್ದು.

ಕೆಲವು ಸಂಗತಿಗಳು ನಿಮಗೆ ತಿಳಿಯಾಕಿಲ್ಲ—ಅಂತ. ಅಡ್ಡಕ್ಕೆ ದೋಣೀ ಬಿಟ್ಟರೆ ಹೊಳೆ ಜೋರು, ಅದನ್ನ ಕೆಳಕ್ಕೆ ಹೊಡೆದುಕೊಂಡು ಹೋಗ್ತದೆ. ನಾವು ಆಚೆ ದಡಕ್ಕೆ ನೆಟ್ಟಗೆ ಹೋಗಾಕೇ ಇಲ್ಲ. ಆದರೆ ಹಿಂಗೆ ಉದ್ದಕ್ಕೂ ಬಿಟ್ಟು, ಆಮೇಲೆ ಅಡ್ಡಕ್ಕ ತಿರುಗಿಸಿದರೆ ಅರೆವಾಸಿ ಹಂಗೇ ಹಿಂಗೇ ಹೊಡ ಕೊಂಡುಬಂದು, ಹೊರಟ ಜಾಗಾಕ್ಕೆ ಎದುರಾಗಿ ಆಚೆ ತಡಿಗೆ ದೋಣಿ ಬರ್ತದೆ'' ಎಂದು ಉತ್ತರಕೊಟ್ಟನು. ಪಾಪ! ನಾರಾಯಣಮೂರ್ತಿಯು ಹೊಳೆಯ ವೇಗವನ್ನು ಕುರಿತ ಲೆಕ್ಕಗಳನ್ನು ಹುಡುಗರಿಂದ ಮಾಡಿಸುವಾಗ್ಗೆ ಈ ಅಂಶವು ಗೊತ್ತಿದ್ದುದು, ಹೊಳೆಯನ್ನೇ ಪ್ರತ್ಯಕ್ಷವಾಗಿ ನೋಡಿದಾಗ ಮಾತ್ರ ಜ್ಞಾಪಕಕ್ಕೆ ಬರಲಿಲ್ಲ.

ಇಷ್ಟು ಸಣ್ಣ ವಿಚಾರವನ್ನು ಅಂಬಿಗನಿಂದ ತಿಳಿಯಬೇಕಾಯಿತಲ್ಲ— ಎಂದು ಅವನ ಮನಸ್ಸಿಗೆ ಸ್ವಲ್ಪ ಅವಮಾನವಾಯಿತು. ಅಂಬಿಗನು ಸುಮ್ಮ ನಿರದೆ ''ಏನು ಓದಿ ಗುಡ್ಡೆಹಾಕ್ತಾರೋ ಈ ಜನ! ಈ ಹಳ್ಳಿ ಮುಕ್ಕಂಗೆ ತಿಳಿದದ್ದು ಈ ದಿಳ್ಳಿ ಮನುಸರಿಗೆ ತಿಳಿಯಾಕಿಲ್ಲ. ಕೀಚು ಪಾಚಂತ ಇಂಗ್ಲೀಸು ಮಾತಾಡಿದರೆ ಬಂತಾ ಭಾಗ್ಯ? ನಮಗೆ ಕನ್ನಡ ಮಾತೇ ಸಾಕು. ಕಸ್ತೂರಿ, ಕನ್ನಡ ಕಸ್ತೂರಿ—ಅಂತ ನಮ್ಮೂರು ಉಪಾದ್ರು ಹೇಳೋದು ಸರಿ'' ಎಂದು ಗೊಣಗಿಬಿಟ್ಟನು. ಅದನ್ನು ಕೇಳಿ ನಾರಾಯಣಮೂರ್ತಿಯ ಮುಖದ ಬಣ್ಣವೇ ಇಳಿದುಹೋಯಿತು. ದೊಡ್ಡ ಕೊಡಲಿಯ ಬಾಯಿ ಮುಕ್ಕಾದಂತಾಯಿತು. ಹುಡುಗರಾಗಿದ್ದರೆ ''ಕೆಲವಂ ಬಲ್ಲವರಿಂದೆ ಕಲ್ತು....'' ಎಂದು ಮುಂತಾಗಿ ಉಲ್ಲಾಸದಿಂದ ಹಾಡಿಬಿಡುತ್ತಿದ್ದರು. ಅಚ್ಯುತರಾಯನೆದುರಿಗೆ ಹೀಗೆ ರಗಳೆಯಾಯಿತಲ್ಲಾ ಎಂದು ಮೂರ್ತಿಯು ತಳಮಳಗೊಂಡನು.

ದೋಣಿಯಲ್ಲಿ ಎರಡು ಹಗ್ಗಗಳು, ಒಂದು ಕೊಳಕು ಡಬ್ಬ, ಬೆಂಡಿನ ತುಂಡುಗಳು ಇವೆಲ್ಲಾ ಇದ್ದುವು. ಡಬ್ಬವು ತಗಲಿ ನಾರಾಯಣಮೂರ್ತಿಯ ''ಗರಿಮುರಿ'' ಪಂಚೆಯು ಕೊಳಕಾಯಿತು. ನಾರಾಯಣಮೂರ್ತಿಯು ಉನ್ಮತ್ತನಂತೆ ರೇಗಿದನು. ನಿಜವಾದ ನಾಗರಿಕತೆಯು ಯಾವುದೆಂಬ ಯೋಚನೆಯಿಲ್ಲದೆ ವಿಲಕ್ಷಣ ವರ್ತನೆಗೆ ಬೆರಗಾಗಿ ಅದನ್ನು ಅವಲಂಭಿಸಿದ್ದ ಮುಂಗೋಪಿಯಾದ ತಲೆಹರಟೆಯ ಮನುಷ್ಯನೆಂಬುದಾಗಿ ಅವನ ಜೊತೆಯ

ಉಪಾಧ್ಯಾಯರು ಅವನನ್ನು ವರ್ಣಿಸುತ್ತಿದ್ದುದು ಅನ್ಯಾಯವೆನಿಸುವಂತಿರಲಿಲ್ಲ. ನಾರಾಯಣಮೂರ್ತಿಯು ಅಂಬಿಗನನ್ನು ಕುರಿತು "ಏನೋ! ನಿನಗೆ ಓದು ಬರಹಗಳು ಬರುತ್ತವೆಯೆ?" ಎಂದು ಕೇಳಿದನು.

**ಅಂಬಿಗ.**—"ಇಲ್ಲಾ ಬುದ್ಧಿ! ಓದು ಬರಹ ಬರಾಕಿಲ್ಲ. ಅದು ಮಾತ್ರ ಬಂದಿದ್ದರೆ ಉಗುರು ಮಣ್ಣಾಗದಂತೆ ಕೂತ ಕಡೆ ಹಣ ಸಂಪಾದಿಸ್ತಾ ಇದ್ದೆ. ಇಷ್ಟಕ್ಕೂವೆ ಓದಿ ಏನಾದಾತು! ಬುದ್ಧಿ! ಈಗ ನಾನು ಹರೇವು ಕಳೆದ ಮುದುಕ. ನನ್ನ ಕಣ್ಣು ಇನ್ನೂ ಹದ್ದಿನ ಕಣ್ಣಿನ ಹಂಗೆ ಕಾಣಿಸ್ತೈತೆ. ನೀನು ಮುವತ್ತು ವರುಸದ ಹರೆಯದ ಆಳು. ಆಗಲೆ ಕಣ್ಣಿಗೆ ಗಾಜು ಬಂದದೆ. ನಾನು ಕಣ್ಣಿಗೆ ಗಾಜು ತಗುಲಿಸಕೊಂಡೇನ? ನಿನ್ನ ತಲೆ ನನ್ನ ತಲೇಗನ್ನಾ ನರೆತು ಹೋಗದೆ! ಸರೀರ ಹಾಳುಮಾಡೋ ಓದು ಯಾಕೆ ಬುದ್ಧಿ?"

**ಮೂರ್ತಿ.**—"ಓದು ಬರದೆ ಇದ್ದಮೇಲೆ ಅರೆಪಾಲು ಜೀವಾನೆ ಹೋದಹಾಗೆ."

**ಅಂಬಿಗ.**—"ಅರೆಪಾಲು ಜೀವ ಹೋದ ಹಂಗೂ ಇಲ್ಲ. ಬಂದೂ ಇಲ್ಲ. ನೀವೂ ಜೀವನ ಮಾಡ್ತೀರ. ನಾವೂ ಮಾಡ್ತೀವಿ. ಆದರೆ ನಮಗೂ ನಿಮಗೂ ವ್ಯತ್ಯಾಸವೂ ಐತೆ. ನೀವು ಸಣ್ಣಕ್ಕಿ ಅನ್ನ ಉಣ್ತೀರಿ. ಬೆಣ್ಣೆ ಕಾಸಿದ ತುಪ್ಪ ಹಾಕ್ಕೊಂತೀರಿ. ನಾವು ಹಿಟ್ಟು ಉಣ್ತೀವಿ. ಈರುಳ್ಳಿ ನಂಜುಕೊಳ್ತೀವಿ. ನೀವೂ ಕೆಲಸ ಮಾಡ್ತೀರಿ. ನಾವೂ ಕೆಲಸ ಮಾಡ್ತೀವಿ. ನಮ್ಮ ಶಕ್ತಿ ಬೇರೆ ನಿಮಗಿಲ್ಲ. ಕೊನೆಗೆ ಯಮಪ್ಪ ಇಬ್ಬನೂರ್ನವೆ ಚೀಲಕ್ಕೆ ತುಂಬಿ ನಡೀತವ್ನೆ. ಈ ಪರಪಂಚ ನಮ್ಮ ಜೊತೇಲೇನಾದರೂ ಬಂದಾತೊ?"

**ಮೂರ್ತಿ.**—"ನಿನಗೆ ವೇದಾಂತ ಬೇರೆ. ಈ ತಲೆಹರಟೆಗೇನಂತೆ? ಓದು ಬರೆಹ ಬಾರದಮೇಲೆ ಅರೆಪಾಲು ಜೀವ ಹೋದಹಾಗೇ ಸರಿ. ನಿನಗೆ ಓದು ಬಂದಿದ್ದರೆ ಕೆಮಿಸ್ಟ್ರಿ ಓದಬಹುದಾಗಿತ್ತು. ಆ ಭಾಗ್ಯ ನಿನಗೆಲ್ಲಿ?"

ಈ ಮಾತನ್ನು ಕೇಳಿ ಅಚ್ಯುತರಾಯನು, "ಪಾಪ! ಅವನಕೈಯ್ಯಲ್ಲೇಕಯ್ಯ ಈ ಪ್ರಸ್ತಾಪ? ಮೂರ್ತಿ! ಬೇಡಯ್ಯ, ಬೇಡ. ಓದಿ ನಾವು

ಉದ್ಧಾರವಾಗಿರುವುದು ಅಷ್ಟರಲ್ಲೇ ಇದೆ. ಆದರೆ ನಾನೇನೊ ನಿನ್ನಷ್ಟು ಓದಲಿಲ್ಲ. ದಾರಿದ್ರ್ಯ ಅಡ್ಡವಾಯಿತು" ಎಂದನು.

**ಅಂಬಿಗ.**—"ಆಡಲಿ! ಬುಡು ಸಮ್ಮಪ್ಪ! ಮಾತಾಡ್ತಾ ಮಾತಾಡ್ತಾ ಇದ್ದರೆ ಸಂಗೂ ಜಳವೇ ಆಡಿಸೋ ಆಯಾಸ ಕಾಣಸಾಕಿಲ್ಲ. ನೀವು ಹೆಚ್ಚಾಗಿ ಓದಿಲ್ವೋ! ಸರಿ, ಅದಕ್ಕೇ ಅವರಿಗಿಂತ ಗಟ್ಟಿಯಾಗಿದ್ದೀರಿ. ತಲೆಯೂ ಸರೆತಿಲ್ಲ. ಕಣ್ಣಿಗೂ ಗಾಜು ಬಂದಿಲ್ಲ. ನಾನು ಹೇಳಿದ್ದು ಸರಿಯೇ ಹೋಯ್ತಲ್ಲ. ಓದು ಬರಾವು ಹೆಚ್ಚಿದಷ್ಟೂ ಶಕ್ತಿ ಕಡಮೆಯಾಗ್ತೈತೆ. ಸ್ವಾಮಿ! ಅದೇನು ಕೆಮ್ಮಿ, ಇಸ್ತ್ರಿ, ಅಂದದ್ದು? ಹಂಗಂದರೇನು?"

**ಮೂರ್ತಿ.**—"ಹಾಗೆಂದರೆ, ರಸಾಯನ ಶಾಸ್ತ್ರ."

**ಅಂಬಿಗ.**—"ರಸಾಯನದ ಸಾಸ್ತ್ರವೇ! ನಮ್ಮೂರು ಪೂಜಾರಪ್ಪ ಅವ್ನೆ. ರಸಾಯನದ ಸಾಸ್ತ್ರಾ, ಗೀಸ್ತ್ರಾ ಎಲ್ಲಾ ಮಾಡ್ತಾನೆ. ಶನಿವಾರ ಶನಿವಾರ ನಮಗೆಲ್ಲಾ ರಸಾಯನ ಹಂಚ್ತಾನೆ. ಅದು ಬಲೇ ಜೋಕಾಗಿ ರುಚಿಯಾಗಿರತ್ತೈತೆ. ಒಂದೊಂದು ಸಲ ರಸಬಾಳೇಹಣ್ಣು ಕೂಡ ಹಾಕಿ ಮಾಡ್ತಾನೆ. ಆದರೆ, ಹೆಚ್ಚಾಗಿ ರಸಾಯನ ಕೊಡಾಕಿಲ್ಲ. ಆ ಸಾಸ್ತ್ರ ನಾನ್ಯಾಕೆ ಓದಬೇಕಾಗಿತ್ತು ಬುದ್ಧಿ? ಅದಕ್ಕೆಲ್ಲಾ ಪೂಜಾರಪ್ಪ ಇದ್ದಾನಲ್ಲ."

ನಾರಾಯಣಮೂರ್ತಿಯ ಮನಸ್ಸಿಗೆ ಅವನು ಮೂರ್ಖನೆಂದು ತೋರಿತು. ಆದಕಾರಣ ಅವನೊಡನೆ ಮಾತನಾಡಿ ಫಲವಿಲ್ಲವೆಂದು ಭಾವಿಸಿ ಸುಮ್ಮನಾದನು. ನಾರಾಯಣಮೂರ್ತಿಯು ಹೆಚ್ಚು ವಿದ್ಯಾವಂತನಾಗಿದ್ದರೂ, ಹಳ್ಳಿಯವರ ಸಂಸ್ಕೃತಿಯ ಮಟ್ಟವನ್ನರಿತು, ಹಳ್ಳಿಯವರೊಡನೆ ಹಳ್ಳಿಯವನಾಗಿ ಹಳ್ಳಿಯವರ ಭಾಷೆಯಲ್ಲಿಯೇ ವಿವೇಕ ಬೋಧೆ ಮಾಡುವ ಚೈತನ್ಯವು ನಾರಾಯಣಮೂರ್ತಿಗಿರಲಿಲ್ಲ.

ದೋಣಿಯು ಮುಂದೆ ಮುಂದೆ ಸಾಗಿತು. ಅಷ್ಟರಲ್ಲಿ ಏನೋ ಸದ್ದಾಗಿ ಒಡನೆಯೇ ದೋಣಿಯೊಳಕ್ಕೆ ನೀರು ನುಗ್ಗಲು ಆರಂಭವಾಯಿತು. ದೋಣಿಯ ತಳದಲ್ಲಿ ಒಂದು ದೊಡ್ಡ ರಂಧ್ರವಿದ್ದಿತು. ಅದಕ್ಕೆ ಒಂದು ತಗಡನ್ನು ಮುಚ್ಚಿ ಮೊಳೆಗಳನ್ನು ಹೊಡೆದಿದ್ದರು. ಮೊಳೆಗಳು ಎಂದಿನಿಂದ

ಸಡಿಲವಾಗಿದ್ದುವೋ ಏನೋ! ತಗಡು ಕಿತ್ತುಹೋಯಿತು. ಮತ್ತೆ ಮೊಳೆಯನ್ನು ಹೊಡೆದು ತಗಡನ್ನು ಭದ್ರಪಡಿಸಲು ದೋಣಿಯಲ್ಲಿ ಕಲ್ಲು ಇರಲಿಲ್ಲ. ದೋಣಿಗೆ ನೀರು ನುಗ್ಗಿತು.

ಅಂಬಿಗನು ತನ್ನ ಮಗನನ್ನು ಕುರಿತು, "ಅಪ್ಪಯ್ಯ! ತೂತಿಗೆ ಬಟ್ಟೇನಾದರೂ ತುರುಕುವಾ—ಅಂದರೆ ಬಟ್ಟೆಯೇ ಇಲ್ಲವಲ್ಲೋ" ಎಂದನು. ಅಚ್ಯುತರಾಯನು, ತನ್ನ ಚೌಕಗಳನ್ನೂ (ಟವಲುಗಳನ್ನೂ), ಪಂಚೆಗಳನ್ನೂ ಕೊಡುವುದಾಗಿ ತಿಳಿಸಿದನು. ಅಂಬಿಗನು, "ಭಾರಿ ಭಾರಿ ಹೊತ್ತಿಗೆ ಓದಿ ದೊಡ್ಡಮನುಸರಾಗಿದ್ದೀರಿ. ಈ ಸಣ್ಣ ಸಂಗತಿ ಕೂಡ ತಿಳಿಯಾಕಿಲ್ಲವೇ ದೇವರೆ! ನಿಮ್ಮ ತೆಳುವಾದ, 'ಮಿಸೀನು' ಬಟ್ಟೆ ತಡೆದಾತೆ, ನನ್ನೊಡೆಯ? ನಮ್ಮೂರು ಮಗ್ಗದ ನನ್ನ ರುಸ್ತುಂ ಹಚ್ಚಡ ಐತೆ. ಅದನ್ನೇ ತುರುಕಿ ನೋಡ್ತೀನಿ. ಅದೂ ತಡೆಯಾಕಿಲ್ಲ. ನನಗೆ ಗೊತ್ತು" ಎಂದು ಹೇಳಿ ತನ್ನ ದುಪಟಿಯನ್ನು ತುರುಕಿದನು. ಅದು ನಿಲ್ಲಲಿಲ್ಲ. ಅವನು ನಿಟ್ಟುಸಿರನ್ನು ಬಿಟ್ಟು ತನ್ನ ಮಗನೊಡನೆ, "ಹುಚ್ಚು ಹೊಳೆಗೆ ಹೂವಿನ ತೋಟ ಎದುರಾದಾತಾ? ಹಚ್ಚಡ ತುರುಕಿದ್ರೂ ಏನೂ ನಗ್ಗಲಿಲ್ಲ. ಅಪ್ಪಯ್ಯ! ನಾನೊಬ್ಬನೇ ಜಳವೇ ಹೊಡೀತೀನಿ. ದೋಣಿ ನೀರು ಡಬ್ಬದಲ್ಲಿ ಮೊಗೆದು ಹೊರಕ್ಕೆ ಹಾಕೋ" ಎಂದನು. ಎಷ್ಟೆಷ್ಟು ಬೇಗ ಬೇಗ ಎಷ್ಟೆಷ್ಟು ನೀರನ್ನು ತುಂಬಿ ಹೊಳೆಗೆ ಸುರಿದರೂ ದೋಣಿಯಲ್ಲಿ ನೀರು ಹೆಚ್ಚುತ್ತ ಬಂದಿತು. ಸಾಗಿದಷ್ಟು ದೂರ ತಡಿಯ ಕಡೆಗೆ ಹೋಗೋಣ ವೆಂದು ಯೋಚಿಸಿ ಅಂಬಿಗನ ಮಗನು ತನ್ನ ಕೈಚಳಕವನ್ನು ಮತ್ತಷ್ಟು ಹೆಚ್ಚಿಸಿ ಇನ್ನೂ ಬೇಗ ಬೇಗ ನೀರನ್ನು ಹೊಳೆಗೆ ಸುರಿಯತೊಡಗಿದನು. ಆಗ ಅಂಬಿಗರವನ ಸರದಿಯು ಬಂದಿತು. ಅವನು, "ಬುದ್ಧಿ! ಓದು ಬರದೇ ನನ್ನ ಅರೆಪಾಲು ಜೀವವೇ ಹೊಯ್ತು—ಅಂತ ಹೇಳಿದ್ರಿ, ನಿಮಗೆ ಈಜು ಬರ್ತದೋ?"

**ಮೂರ್ತಿ.**—'ಇಲ್ಲ—ಇ-ಲ್ಲ.'

**ಅಂಬಿಗ.**—"ಹಂಗಾದರೆ ಸರಿ. ನಿಮ್ಮ ಪೂರ್ತಿ ಜೀವಾನೂ ಹೋದ ಹಂಗೇ ಸರಿ. ಓದು ಬರದೇ ನನಗೆ ಅರೆಪಾಲು ಜೀವವಾದರೂ ಐತೆ. ಓದು ಬಂದೂ, ನಿಮ್ಮ ಪೂರ್ತಿ ಜೀವವೂ ಹೋಗ್ತೈತೆ."

ಅಂಬಿಗನು ತನ್ನನ್ನು ಹಾಸ್ಯಮಾಡುತ್ತಿದ್ದನೆಂದು ಭಾವಿಸಿ ಮೂರ್ತಿಯು ಕಿಡಿಕಿಡಿಯಾದನು. ದೋಣಿಯು ಸುರಕ್ಷಿತವಾಗಿ ತಡಿಯನ್ನು ಸೇರುವುದೆಂದೂ, ಆದರೆ ನೀರನ್ನು ಎತ್ತಿ ಸುರಿಯುವುದರಲ್ಲಿ ಯಂತ್ರದಂತೆ ಕೆಲಸ ಮಾಡುತ್ತಿದ್ದ ಅಂಬಿಗನಿಗೆ ಬಹಳ ಆಯಾಸವಾಗುವುದೆಂದೂ, ಮೂರ್ತಿಯು ನಂಬಿದ್ದನು. ಅಂಬಿಗನು ತನ್ನನ್ನು ಹಾಸ್ಯಮಾಡಿದುದನ್ನು ಕಂಡು, ಅವನ ಮಗನ ಶ್ರಮಕ್ಕಾಗಿ ತಡಿಯನ್ನು ಸೇರಿದ ಮೇಲೆ ಪಾರಿತೋಷಕವನ್ನು ಕೊಡಬೇಕೆಂದಿದ್ದ ಯೋಚನೆಯನ್ನು ಮೂರ್ತಿಯು ತನ್ನ ಮನಸ್ಸಿನಿಂದ ಓಡಿಸಿ "ನನ್ನ ಹತ್ತಿರ ಈ ತುಂಟಾಟವೆಲ್ಲ ಸಗ್ಗುವಹಾಗಿಲ್ಲ. ನಾನು ಎಷ್ಟೋ ದೊಡ್ಡ ದೊಡ್ಡ ಕೆಲಸ ಮಾಡಬೇಕಾಗಿದೆ. ಜೀವ ಹೋಗುತ್ತಂತೆ, ಜೀವ" ಎಂದನು.

**ಅಂಬಿಗ.**—"ಅದೆಲ್ಲ ಗಂಗವ್ವ ಕೇಳ್ತಾಳಾ?"

**ಮೂರ್ತಿ.**—"ನನಗೇನಾದರೂ ತೊಂದರೆಯಾದರೆ ನಿನ್ನ ಸುಮ್ಮನೆ ಬಿಟ್ಟೇನೆ? ಜೋಕೆ."

**ಅಂಬಿಗ.**—"ಇಬ್ಬರೂ ಹೊರಟೋಗ್ತೀವಿ. ನನ್ನ ಏನುಮಾಡೀರಿ? ನಿಮ್ಮ ದುಡ್ಡು, ನಿಮ್ಮ ಸಾಮಾನು, ನೀವು, ನಾವು ಎಲ್ಲಾನೂ ಹೊಳೆ ಒಳಕ್ಕೆ ಬುಳಕಾ ಬುಳಕಾ ಬುಳಕ್ ಬುಳಕ್ ಬುದ್ದಿ!"

ಅಂಬಿಗರವನು ನಿಜವನ್ನೇ ಹೇಳುತ್ತಿದ್ದನೆಂದೂ, ಅವನು ಹಾಸ್ಯ ಮಾಡುತ್ತಿರಲಿಲ್ಲವೆಂದೂ ನಾರಾಯಣಮೂರ್ತಿಗೆ ಕ್ಷಣಮಾತ್ರದಲ್ಲಿ ಗೋಚರವಾಯಿತು. ಸೋಟಕ್ಕೆಂದು ದೂರದೇಶಕ್ಕೆ ಹೋಗಿ ನೀರಿನಲ್ಲಿ ಸಾವನ್ನು ಅಪ್ಪುವ ಪ್ರಸಂಗ. ಅವನ ಕಳವಳಕ್ಕೆ ಕೊನೆ ಮೊದಲೇ ಇರಲಿಲ್ಲ. ಅಂಬಿಗನ ಮಗನು ಎಷ್ಟೆಟ್ಟು ಬೇಗ ತೋಡಿ ಸುರಿದರೂ ದೋಣಿಯಲ್ಲಿ ನೀರು ಹೆಚ್ಚುತ್ತಲೇ ಇದ್ದಿತು. ಅಚ್ಯುತರಾಯನೂ ಪೆಚ್ಚುಮೋರೆ ಹಾಕಿಕೊಂಡು ಯೋಚಿಸುತ್ತ ಕುಳಿತಿದ್ದನು. ಅವನ ಮನಸ್ಸಿನಲ್ಲಿ ಹೆಚ್ಚು ಭಯವೇನೂ ಇರಲಿಲ್ಲ. ಈಜು ಬಂದವನಿಗೆ ಭಯವೆಲ್ಲಿಯದು? ಆದರೆ, ಮೂರ್ತಿಯನ್ನು ಉಳಿಸುವ ಬಗೆ ಹೇಗೆಂಬುದೇ ಅವನ ಯೋಚನೆ. ಭಯ ವಿಹ್ವಲನಾದ ನಾರಾಯಣಮೂರ್ತಿಯ ಮುಖವು ಬಿಳುಪೇರಿ ಹೋಗಿದ್ದಿತು.

ಕೆಲವು ನಿಮಿಷಗಳೊಳಗಾಗಿ ಅಡ್ಡೈಸಿ ಆಕ್ರಮಣಮಾಡಿ ನಿಲ್ಲುವುದರಲ್ಲಿದ್ದ ಮೃತ್ಯುವಿನ ಕರಾಳದಂಷ್ಟ್ರವು ಮೂರ್ತಿಯ ಕಣ್ಣಿಗೆ ಕಟ್ಟಿತು. ತನ್ನ ಬೆಡಗಿನ ಜೀವನವು ತನ್ನ ಅಂತರಾತ್ಮನನ್ನೇ ಮೋಸದ ಮೂಟೆಯಲ್ಲಿ ಕಟ್ಟಿಕೆಡಹಿದ್ದ ಭ್ರಾಂತಿವಿಶೇಷವೆಂಬುದನ್ನು ಅವನು ಆಗ ಮನಗಂಡನು. ಭಗವಂತನು ತನಗೆ ದೊರಕಿಸಿದ್ದ ಅಮೋಘವಾದ ಅವಕಾಶವನ್ನು ತಾನು ಸಾರ್ಥಕಗೊಳಿಸದೆ ವ್ಯರ್ಥಪಡಿಸಿಕೊಂಡುದಾಗಿ ಭಾವಿಸಿ ಕಂಬನಿದುಂಬಿದನು. ಅವನ ಆಶಯವನ್ನು ತಿಳಿಯದೆ ಅಚ್ಯುತರಾಯನು "ಏಕೆ ಮೂರ್ತಿ! ನಿನಗೇಕೆ ಯೋಚನೆ? ನನ್ನ ಪ್ರಾಣವನ್ನೇ ಬೇಕಾದರೂ ಕೊಟ್ಟು ನಿನ್ನ ಪ್ರಾಣವನ್ನು ಉಳಿಸುತ್ತೇನೆ. ಇದರ ಮೇಲೆ ಸತ್ತರೆ ಇಬ್ಬರೂ ಒಟ್ಟಿಗೆ ಸಾಯೋಣ" ಎಂದು ಹೇಳಿದ ಮಾತುಗಳು ಮೂರ್ತಿಯ ಕಿವಿಗೆ ಬೀಳಲಿಲ್ಲ. ಕಿವಿಗಳಿದ್ದೂ ಅವನು ಕಿವುಡನಾಗಿದ್ದನು. ಕಣ್ಣುಗಳಿದ್ದೂ ಅವನು ಕುರುಡನಾಗಿದ್ದನು. ಅವನು ಭೂಲೋಕದಲ್ಲಿದ್ದೂ ಅವನ ಮನಸ್ಸು ಮತ್ತಾವುದೋ ಲೋಕದಲ್ಲಿ ತೇಲಿಹೋಗಿದ್ದಿತು. ಅವನ ಹೃದಯವೇ ಕಲಕಿಹೋಗಿದ್ದಿತೆಂದು ಹೇಳಿದರೂ ಅತಿಶಯೋಕ್ತಿಯಲ್ಲ. ಕೆಲವು ನಿಮಿಷಗಳಲ್ಲಿಯೇ ಅವನ ಹೃದಯ ತಲದಿಂದ ತರಂಗ ತರಂಗವಾಗಿ ವಿಧ ವಿಧವಾದ ಆಲೋಚನೆಗಳು ಹೊರಟು ಕ್ಷೋಭೆಗೊಂಡ ಸಾಗರದ ಅಲೆಗಳಂತೆ ಭೀಕರತೆಯಿಂದ ತುಂಬಿದ ಭಯಾನಕ ರೂಪವನ್ನು ತಳೆದು ನಿಂತುವು. ಅಕಾಲದಲ್ಲಿ ಆಕಸ್ಮಿಕವಾಗಿ ಮೃತ್ಯುವು ಸನ್ನಿಹಿತವಾಗಿರುವಂತಹವರಿಗೆ ಮಾತ್ರವೇ ಅವನ ಹೃದಯ ತಲದಿಂದ ಹೊರಹೊಮ್ಮುತ್ತಿದ್ದ ಆಲೋಚನಾತರಂಗಗಳ ಸ್ವಭಾವವು ಅನುಭವಕ್ಕೆ ಬರಬೇಕೇ ಹೊರತು, ಅದನ್ನು ಬಣ್ಣಿಸಿ ತಿಳಿಸುವುದು ಕೇವಲ ಅಸಾಧ್ಯವೇ ಸರಿ.

ದೋಣಿಯು ಮುಳುಗುವುದು ಖಂಡಿತವಾದೊಡನೆಯೇ ಅಂಬಿಗನು ಕಾಳಗದ ಯೋಧನಂತೆ ಕೆಲಸಕ್ಕೆ ಸಿದ್ಧನಾದನು. ತನ್ನನ್ನು ನಂಬಿ ಬಂದಿದ್ದ ನಾರಾಯಣಮೂರ್ತಿಯ ಪ್ರಾಣವನ್ನು ಉಳಿಸಿಯೇ ಉಳಿಸುವುದಾಗಿ ಅವನು ನಿರ್ಧರಮಾಡಿದನು. ಆಪತ್ತಿನಲ್ಲಿ ಸಿಕ್ಕಿದವನ ಪ್ರಾಣವನ್ನುಳಿಸುವ ಉತ್ಸಾಹದಲ್ಲಿ ಅವನಿಗೆ ವೀರತ್ವದ ಆವೇಶವೇ ಬಂದು ಹತ್ತು ಜನಗಳ ಬಲವು ತನ್ನ ತೋಳಿನಲ್ಲಿದ್ದಂತೆ ಅವನ ಮನಸ್ಸಿಗೆ ತೋರಿತು.

ಅವನು ತನ್ನನ್ನು ತಬ್ಬಿಕೊಳ್ಳುವಂತೆ ಮೂರ್ತಿಗೆ ಹೇಳಿ ಒಂದು ಮಗುವಿನಂತೆ ಅವನನ್ನು ಬೆನ್ನಮೇಲೆ ಮಲಗಿಸಿಕೊಂಡು ಈಜುತ್ತಾ ಹೊರಟನು. ಅವನ ಶಕ್ತಿಯನ್ನೂ ಸಾಹಸವನ್ನೂ ನೋಡಿ ಅಚ್ಯುತರಾಯನಿಗೆ ಪರಮಾಶ್ಚರ್ಯ ವಾಯಿತು. ಮಿತ್ರನ ಪ್ರಾಣ ಉಳಿಯಿತೆಂದು ಅವನೂ ಸಂತೋಷದಿಂದ ಈಜಿಕೊಂಡು ಬಂದನು.

ಹೇಮಾವತೀ ನದಿಯಲ್ಲಿ ಸೆಳವು ಬಹಳ ಹೆಚ್ಚು. ಆದುದರಿಂದ ಅಚ್ಯುತರಾಯನಿಗೆ ದಡಕ್ಕೆ ಬಂದು ಸೇರುವುದು ಬಹಳ ಪ್ರಯಾಸವಾಯಿತು. ಅವರೆಲ್ಲರ ಅದೃಷ್ಟಕ್ಕೆ ತಕ್ಕಹಾಗೆ ದೋಣಿಯು ನಡುಹೊಳೆಗೆ ಹೋಗು ವುದಕ್ಕೆ ಮುಂಚೆಯೇ ಈ ಘಟನೆಯು ಸಂಭವಿಸಿತು. ದೋಣಿಯೇನಾದರೂ ಪ್ರವಾಹದ ಮಧ್ಯದಲ್ಲಿ ಸಿಕ್ಕಿಹೋಗಿದ್ದರೆ ಅವರಿಬ್ಬರಿಗೂ ಜೀವದ ಆಶೆಯೇ ಇರುತ್ತಿರಲಿಲ್ಲ. ಅಂಬಿಗನ ಮಗನು ಪ್ರವಾಸಿಗಳೀರ್ವರ ಗಂಟುಗಳನ್ನೂ ಬೆನ್ನಿಗ ಕಟ್ಟಿಕೊಂಡು ಲೀಲಾಜಾಲವಾಗಿ ಈಜಿಕೊಂಡು ಬಂದನು. ಈಜುವುದರಲ್ಲಿ ಅವನು ನಿಸ್ಸೀಮ.

ಯಥಾಕಾಲದಲ್ಲಿ ತಂದೆ ಮಕ್ಕಳಿಬ್ಬರಿಗೂ ಯಥೇಷ್ಟವಾಗಿ ಪಾರಿ ತೋಷಕವು ದೊರೆಯಿತು. ನಾರಾಯಣಮೂರ್ತಿಯ ಭಾವನೆಗಳೇ ಬದ ಲಾಯಿಸಿದುವು. ಅವನು ಹೊಸ ಮನುಷ್ಯನೇ ಆಗಿ ರೂಪಾಂತರ ಹೊಂದುವ ಮಧ್ಯಮ ಸ್ಥಿತಿಯಲ್ಲಿದ್ದನು. ಅವನ ಮಾತಿನ ಲಲ್ಲೆಯು ಮೌನವನ್ನವಲಂಬಿಸಿತು. ಅವನ ಮನಸ್ಸು ಚಿಂತಾತರಂಗದಲ್ಲಿ ತೇಲಿ ಹೋಯಿತು. ಅಂಬಿಗನ ವಿಷಯದಲ್ಲಿ ಅವನಿಗೆ ಯಾವ ಭಾವನೆಯು ಹುಟ್ಟಿದ್ದಿತೆಂಬುದನ್ನು ಹೇಳಬೇಕಾದ ಅವಶ್ಯಕತೆಯೇ ಇಲ್ಲ. ಹೊಳೆಯಲ್ಲಿ ಪ್ರವಾಹವು ಕಡಮೆಯಾಗಿರುವಾಗ ಮತ್ತೊಮ್ಮೆ ಶ್ರವಣಬೆಳಗೊಳಕ್ಕೆ ಹೋಗುವುದಾಗಿ ಅವನು ನಿಷ್ಕರ್ಷೆ ಮಾಡಿ ಮಿತ್ರರೀರ್ವರೂ ಊರಿಗೆ ಹಿಂತಿರುಗಿದರು. ಅಚ್ಯುತರಾಯನು ಕಾರ್ಯಗೌರವದಿಂದ ಸಾಲಿ ಗ್ರಾಮಕ್ಕೆ ಹೋದನು. ನಾರಾಯಣಮೂರ್ತಿಯು ತನ್ನ ಮನಸ್ಸಿನಲ್ಲಿ ಬಗೆ ಬಗೆಯ ಆಲೋಚನೆಗಳನ್ನು ಅಳೆದು ಸುರಿಯಲು ಇದರಿಂದ ಅನುಕೂಲ ವಾಯಿತು. ಅಚ್ಯುತರಾಯನು ಸಾಲಿಗ್ರಾಮದಿಂದ ಹಿಂತಿರುಗಿಬರುವ

ವರೆಗೂ ಮೂರ್ತಿಯು ಮೈಸೂರಿನಲ್ಲಿಯೇ ಇರಬೇಕೆಂಬುದಾಗಿ ಗೊತ್ತಾಗಿದ್ದಿತು.

೪

ನಾರಾಯಣಮೂರ್ತಿಯ ಆಲೋಚನೆಯು ಹೆಚ್ಚಿದಷ್ಟೂ ಅವನ ಅಂತರಂಗವು ಶುದ್ಧವಾಗಿ ಜಂಬದ ಜ್ವರವು ಇಳಿದು ಹೋಗಲು ಆರಂಭವಾಯಿತು. ಅಚ್ಯುತರಾಯನು ಒಂದೆರಡು ದಿನಗಳಲ್ಲಿಯೇ ಸಾಲಿಗ್ರಾಮದಿಂದ ಬಂದನು. ಊರಿಗೆ ಹೊರಡುವ ದಿನ (ಬೆಳಗ್ಗೆ) ಅವರಿಬ್ಬರೂ ಒಬ್ಬ ಹೂವಾಡಿಗನ ಅಂಗಡಿಗೆ ಹೋದರು. ಅವನು ಮೈಸೂರಿನಲ್ಲೆಲ್ಲ ಪ್ರಸಿದ್ಧನಾದವನು. ನಾರಾಯಣಮೂರ್ತಿಗೆ ಅದು ತಿಳಿಯದು. ಮೂರ್ತಿಯು ಅವನನ್ನು ಕುರಿತು "ಬಹಳ ಚೆನ್ನಾಗಿ ಹೂ ಕಟ್ಟಿಕೊಡುತ್ತೀಯೇನಯ್ಯ?" ಎಂದನು. ಹೂವಾಡಿಗನು "ವಿದ್ಯೆ ನೋಡೋರು ಯಾರಿದ್ದಾರೆ, ಸ್ವಾಮಿ! ಪರಮಾಯಿಷಿ ಹೂವು ಕಟ್ಟಿಕೊಟ್ಟೇನು. ಯಾರೂ ಕಾಣದ ಸೋಜಿಗವನ್ನೇ ತೋರಿಸಿಯೇನು! ಅದಕ್ಕೆ ತಕ್ಕಹಾಗೆ ದುಡ್ಡು ಕೊಡೋರಿದ್ದರೆ ತಾನೇ ಆ ಮಾತು! ಬಹಳ ಚೆನ್ನಾಗಿ ಕಟ್ಟಿಕೊಡಬೇಕು ಎಂದರಲ್ಲಾ—ಅದಕ್ಕೆ ಹೇಳಿದೆ ಈ ಮಾತು. ಹೋಗಲಿ ಎಷ್ಟು ಕುಚ್ಚು ಬೇಕು? ಎಷ್ಟು ಬೆಲೆಯುಳ್ಳಿರಬೇಕು? ಹೇಳಿ, ಉಳಿದ ಮಾತೆಲ್ಲಾ ನನಗೇಕೆ ಬೇಕು?" ಎಂದು ಉತ್ತರ ಹೇಳಿದನು. ನಾರಾಯಣಮೂರ್ತಿಯ ರಸಿಕತನಕ್ಕೆ ಕಳೆಯೇರಿತು. ಅವನು "ಆಗಲಯ್ಯ! ಇದೇಕೆ ಇಷ್ಟು ಬೇಸರ? ನೀನು ತೋರಿಸುವ ಆಶ್ಚರ್ಯವೇನು ಹೇಳು?" ಎಂದನು.

**ಹೂವಾಡಿಗ.**—"ಆ ಮಾತು ಬೇಡ ಸ್ವಾಮಿ! ನಾನು ಮನಸ್ಸು ಮಾಡಿದರೆ ಎಂಥ ರುಸ್ತುಂ ಹೂ ಬೇಕಾದರೂ ಕಟ್ಟಬಲ್ಲೆ. ನಾಲ್ಕು ದಿವಸ ಇರೋ ಅಂಥ ಮಲ್ಲಿಗೆ ಹೂವು ಕಟ್ಟಬಲ್ಲೆ."

**ಮೂರ್ತಿ.**—"ಇದು ಬುರುಡೆ. ಮಲ್ಲಿಗೆ ಹೂ ಎರಡನೇ ದಿನವೇ ಕೆಂಚುಬಂದು ಹೋಗುತ್ತೆ. ಕಟ್ತಾನಂತೆ ಇವನು, ನಾಲ್ಕು ದಿವಸ ಇರೋ ಹೂವನ್ನು. ಶುದ್ಧ ಜಂಬದ ಮಾತು."

**ಹೂವಾಡಿಗ.**—"ನಿಮಗೇನು ಗೊತ್ತು ಸ್ವಾಮಿ, ಆ ವಿಷಯ. ಕಸುಬುದಾರರ ಮರ್ಮ ಕಸುಬುದಾರ ಬಲ್ಲ. ನಾನು ಬುರುಡೆ ಹೇಳೋ

ನಲ್ಲ. ನಾನು ಕಲಿತಿರೋದು ಮನುಷ್ಯರ ಪುಸ್ತಕದ ಓದಲ್ಲ ಸ್ವಾಮಿ! ತೋಟದಲ್ಲಿರೋ ದೇವರ ಪುಸ್ತಕದ ಓದು. ಕಟ್ಟಿ, ಹಟ ಕಟ್ಟಿ. ಅದೂ ನೋಡಿ. ಮೂದಲಿಸಿ ಮಾತನಾಡಿಬಿಟ್ಟರೆ ಆಯಿತೆ ಪುರುಷಾರ್ಥ!"

ಹೂವಾಡಿಗನ ಮಾತುಗಳನ್ನು ನಂಬುವುದು ಮೂರ್ತಿಗೆ ಅಸಾಧ್ಯವಾಯಿತು. ಆದರೂ "ಪರೀಕ್ಷೆಮಾಡಿ ನೋಡಿಯೇ ಬಿಡಬೇಕು. ಹೆಚ್ಚು ದುಡ್ಡನ್ನು ಕೊಡಬೇಕಲ್ಲ" ಎಂಬ ಆತಂಕದ ಬಾಧೆ ಬೇರೆ. ಇಷ್ಟಾದರೂ ಮೂರ್ತಿಯು ಕೊನೆಗೂ ಪರೀಕ್ಷೆಗೆ ನಿಂತನು. ಮರುಗ ಪಚ್ಚೆಯತೆನೆ ಮುಂತಾದವುಗಳನ್ನೆಲ್ಲ ಸೇರಿಸಿ ಬಹಳ ಹಸನಾದ ಹೂವನ್ನು ಕಟ್ಟಿ ಮಧ್ಯಾಹ್ನದ ಹೊತ್ತಿಗೆ ಸಿದ್ಧಮಾಡಿಡಬೇಕೆಂದು ಅವನು ಹೂವಾಡಿಗನಿಗೆ ಹೇಳಿ ತಾನು ಇಳಿದಿದ್ದ ಹೋಟಲಿಗೆ ಹೋದನು. ತನ್ನ ಮಿತ್ರನಿಗೆ ಹೂವಾಡಿಗನು ಮೋಸಮಾಡಿರಬೇಕೆಂದು ಅಚ್ಯುತರಾಯನ ಮನಸ್ಸಿಗೆ ಖಂಡಿತವಾಯಿತು. ಆದರೂ ಪರೀಕ್ಷೆಮಾಡಿಬಿಡಬೇಕೆಂಬ ಚಪಲವು ಅವನನ್ನು ಬಾಧಿಸುತ್ತಿದ್ದಿತು. ಅವರೀರ್ವರೂ ಮಧ್ಯಾಹ್ನದ ವೇಳೆಗೆ ಪುತ್ತೆ ಹೂವಾಡಿಗನ ಅಂಗಡಿಗೆ ಹೋದರು. ಹೂವಾಡಿಗನು ಅದೇತಾನೆ ಮಲ್ಲಿಗೆಯ ಮೊಗ್ಗನ್ನು ಕಟ್ಟಿ ಪೂರೈಸಿದ್ದನು.

**ಮೂರ್ತಿ.**—"ಇದೇ ಏನಯ್ಯ ನಮ್ಮಿಬ್ಬರಿಗೂ ಕಟ್ಟಿ ಸಿದ್ಧಮಾಡಿರೋ ಮೊಗ್ಗು?"

**ಹೂವಾಡಿಗ.**—"ಹೌದು, ಸ್ವಾಮಿ; ಅಡಕೆ ಹಾಳೇನೂ ಬುಟ್ಟೀನೂ ತರೋಕೆ ಹೇಳಿಕಳುಹಿಸಿದ್ದೀನಿ."

**ಮೂರ್ತಿ.**—"ಇದೇನಯ್ಯ, ಹೀಗೆ ಕಟ್ಟಿದ್ದೀಯೆ? ಅಲ್ಲೊಂದು ಇಲ್ಲೊಂದು ಪಚ್ಚೇತೆನೆ. ಬರೀ ಕಾಯಿ ಮೊಗ್ಗಿನ ಸರ. ಒಳ್ಳೇ ಹೂ ಕಟ್ಟಿದೆ. ನನ್ನ ಸ್ನೇಹಿತ ಹೇಳಿದಹಾಗೇ ಆಯಿತು. ಶುದ್ಧ ಮೋಸ."

**ಹೂವಾಡಿಗ.**—"ಸ್ವಾಮಿ ನನ್ನ ರೇಗಿಸಬೇಡಿ. ನಾನು ರೇಗಿದರೆ ಬೆಂಕಿ ಅಂಥ ಮನುಷ್ಯ. ಕೆಲವು ವಿಷಯದಲ್ಲಿ ನಾವು ಗಟ್ಟಿಗರು. ಕೆಲವು ವಿಷಯದಲ್ಲಿ ನೀವು ಗಟ್ಟಿಗರು. ನೀವು ದೊಡ್ಡೋರೇ ಇರಬಹುದು. ಹೂವಿನ ವಿಷಯಕ್ಕೆ ಮಾತ್ರ ನೀವು ಇನ್ನೂ ಚಿಕ್ಕ ಹುಡುಗರು. ಪರೀಕ್ಷೆ

ಮಾಡಿ ಆಮೇಲೆ ಮಾತನಾಡಿದರೆ ಚೆನ್ನ. ಮಲ್ಲಿಗೆ ಹೂವಿನ ವಿಷಯ ಹೇಳಿದರೆ ಒಂದು ದಿನವೆಲ್ಲ ಹೇಳಿದರೂ ಮುಗಿಯೋದಿಲ್ಲ. ಒಂದೇ ಕಾಲದಲ್ಲಿ ಒಂದು ಗಿಡದಲ್ಲಿ ಬಿಟ್ಟಹಾಗೆ ಇನ್ನೊಂದು ಗಿಡದಲ್ಲಿ ಬಿಡೋದಿಲ್ಲ. ಒಂದು ಗಿಡದ ಹೂವಿನ ವಾಸನೆ ಇನ್ನೊಂದಕ್ಕಿರೋದಿಲ್ಲ. ಒಂದೇ ಗಿಡದಲ್ಲಿ ಒಂದು ಕೊನೇ ಮೇಲಿನ ಮೊಗ್ಗಿಗೂ ಇನ್ನೊಂದು ಕೊನೇ ಮೇಲಿನ ಮೊಗ್ಗಿಗೂ ವ್ಯತ್ಯಾಸವಿದೆ. ಮಲ್ಲಿಗೇ ಹೂವಿನದೇ ಒಂದು ದೊಡ್ಡ ಪ್ರಪಂಚ ಸ್ವಾಮಿ, ಒಂದು ದೊಡ್ಡ ಪ್ರಪಂಚ. ಎಲ್ಲರೂ ಹೂವಾಡಿಗರೇ! ಎಲ್ಲರೂ ಹೂ ಕಟ್ಟೋರೇ! ಯಾವ ಹೊತ್ತಿನಲ್ಲಿ ಕುಯ್ದ ಮೊಗ್ಗು ಅರಳಿದರೆ ಯಾವ ವಾಸನೆ ಬರುತ್ತೆ, ಯಾವ ರೀತಿ ಇರುವಾಗ ಕುಯ್ದ ಮೊಗ್ಗು ಅರಳೋಕೆ ಎಷ್ಟು ಕಾಲ ಬೇಕು, ಎಷ್ಟು ನೀರು ಚುಮುಕಿಸಿದರೆ, ಮೊಗ್ಗು ಅರಳೋಕೆ ಶಾಖ 'ಗುಬ ಗುಬ' ಹುಟ್ಟೋಕೆ ಎಷ್ಟು ಕಾಲ ಬೇಕಾಗುತ್ತೆ. ಯಾವ ರೀತಿ ನಡೆದರೆ ಎಷ್ಟು ಕಾಲ ಹೂ ನಿಲ್ಲೋದು ಸಾಧ್ಯ. ಯಾವ ಯಾವ ರೀತಿ ಇರೋ ಮೊಗ್ಗು ಅರಳಿದರೆ ಎಷ್ಟೆಷ್ಟು ವಾಸನೆ ಆ ಹೂವಿಗಿರುತ್ತೆ. ಇವನ್ನೆಲ್ಲ ಕಂಡುಕೊಂಡು ಮೊಗ್ಗು ಕಟ್ಟಿದರೆ ಅದೀಗ ಕೈವಾಡ. ಆಗಲೀಗ ಸೊಗಸು. ಮಲ್ಲಿಗೆ ಮೊಗ್ಗುಗಳೂ ಮಕ್ಕಳ ಹಾಗೆ, ಸ್ವಾಮಿ. ಅವುಗಳ ಹೃದಯ ಹಿಡಿದು ನಗಿಸೋಕೂ ಬಹಳ ಅನುಭವ ಬೇಕು, ಎಲ್ಲರಿಗೂ ಬಾ ಅಂದರೆ ಬರೋಹಾಗಿಲ್ಲ. ಇಷ್ಟಕ್ಕೂ ಇದೆಲ್ಲ ಕಲಿಯೋನು ಯಾರಿದ್ದಾನೆ? ಎಲ್ಲಿ ನೋಡಿದರೂ ಜಂಭದ ಮೊಟ್ಟೆಗಳು. ಕಲಿತರೆ ಹಣ ಕೊಟ್ಟು ಆದರಿಸೋ ರಸಿಕರು ಎಷ್ಟು ಜನ ಇದ್ದಾರೆ? ಮನುಷ್ಯರೆಲ್ಲಾ ಜೀವವಿಲ್ಲದ ಯಂತ್ರಗಳಾಗಿರೋ ಕಾಲ. ನನ್ನ ರೇಗಿಸಿದ್ರಿ. ನಾನು ಹರಟಿದೆ. ಅಗೋ, ಅಡಕೆ ಹಾಳೆ ಬಂತು. ಕಟ್ಟೂ ಅಂದರೆ ಕಟ್ಟಿಬಿಡ್ತೀನಿ. ನಾನು ಕಟ್ಟಿಕೊಡೋ ಎರಡು ಪೊಟ್ಟಣನೂ, ನಾನು ಬೇರೆ ಬೇರೆ ಬುಟ್ಟೀಲಿ ಈ ಕೀರೆ ಸೊಪ್ಪು ಹಾಕಿ ಇಟ್ಟಿರ್ತೀನಿ. ಬುಟ್ಟಿ ಹಾಗೇ ಇಟ್ಟಿರಿ. ಇವತ್ತಿಗೆ ನಾಲ್ಕನೇ ದಿನ ಸಂಜೆ ಸುಮಾರು ಆರೂವರೆ ಗಂಟೆ ಸಮಯಕ್ಕೆ ಪೊಟ್ಣ ಬಿಚ್ಚಿ ನೋಡಿ. ಮನೆಯೆಲ್ಲಾ ವಾಸನೆ ಬರಬೇಡವಾ! ಹೂವಿನ ಜೋಕಾದರೂ ಆಗ ನೋಡಿ, ಸ್ವಾಮಿ. ಆದರೆ, ಮುಂಚೆಯೇ ಅದನ್ನು ಬಿಚ್ಚಿ ನೋಡಿ ನನ್ನ ಬೈದುಕೋ ಬೇಡಿ.''

**ಮೂರ್ತಿ.**—"ಆಯಿತು, ಒಂದು ವೇಳೆ ನಾವು ಈ ಮೊಗ್ಗು ಬೇಡ,—ಅಂದರೆ ನೀನೇನು ಮಾಡುತ್ತೀಯೆ?"

**ಹೂವಾಡಿಗ.**—"ಪ್ರಪಂಚ ಮುಳುಗಿ ಹೋಗೋದಿಲ್ಲ ಸ್ವಾಮಿ, ಪರಸ್ಥಳದೋರು ನನ್ನ ಕಸಬಿನ ಗುಣ ನೋಡಲಿ—ಅಂತ ಕಟ್ಟಿದ್ದೀನಿ. ನನ್ನ ಮನಸ್ಸೇ ಮಲ್ಲಿಗೆ ಮೊಗ್ಗಿನಲ್ಲಿಟ್ಟು, ತೋಟದಿಂದ ಆಯ್ದು ತಂದ ಮೊಗ್ಗು ಕಟ್ಟಿದ್ದೀನಿ. ನೀವು ಬೇಡ ಅಂದರೆ, ನಿಮ್ಮ ಮುಂಗಡದ ಹಣವೂ ನಿಮಗೇ ಕೊಟ್ಟು, ನನ್ನ ಹೂವನ್ನು ಇನ್ನೂ ಒಳ್ಳೆಯ ಕೆಲಸಕ್ಕೆ ಉಪಯೋಗ ಮಾಡ್ತೀನಿ."

**ಮೂರ್ತಿ.**—"ಹೇಗೆ ಉಪಯೋಗ ಮಾಡುತ್ತೀಯೆ?"

**ಹೂವಾಡಿಗ.**—"ಹೋಗಿ, ಸ್ವಾಮಿ, ಅದೂ ಹೇಳಬೇಕೆ? ಇದು ಅರಳಿದ ದಿನ ನನ್ನ ಹೆಂಡತಿಗೆ ಸಂತೋಷದಿಂದ ಮುಡಿಸಿ ಬಿಡ್ತೀನಿ. ಹೇಳಿ, ಬೇಗ ಹೇಳಿ, ಕಟ್ಟಲೋ ಬೇಡವೋ? ನೀವು ಬೇಡ ಅಂದ್ರೆ, ಇಷ್ಟು ಕಷ್ಟ ಪಟ್ಟು ಕಟ್ಟಿದ ಹೂವು—ಇನ್ನು ಯಾರಿಗೂ ಮಾರೋದಿಲ್ಲ. ನಿಜವಾದ ಕಸಬುದಾರನಿಗೆ ಕಸಬಿನ ಪ್ರೀತಿ, ಕಸಬಿನ ದೊಡ್ಡಸ್ತಿಕೆ ಇದೆಲ್ಲಾ ಉಂಟು. ನಿಮಗೆ ಬೇಡವಾದರೆ, ನಮ್ಮ ಮನೆಗೇ ಮೊಗ್ಗು ಇರಲಿ."

ನಾರಾಯಣಮೂರ್ತಿಯು ಅಪ್ರತಿಭನಾದನು. ಕೊನೆಗೆ ಮೂರ್ತಿಯು "ಕಟ್ಟು, ಮಹರಾಯ, ಬೇಗ ಕಟ್ಟು, ರೈಲಿಗೆ ಹೊತ್ತಾಗುತ್ತೆ. ಅಚ್ಚು! ನಿನಗೊಂದು ಬುಟ್ಟಿ, ನನಗೊಂದು ಬುಟ್ಟಿ" ಎಂದನು.

ನಾವು ಮೊದಲೇ ಅರಿಕೆಮಾಡಿದಂತೆ ಸುಂದರಮ್ಮನು ಬಿಚ್ಚಿದುದು ಅದೇ ಪೊಟ್ಟಣ. ಹೂವಾಡಿಗನು ಮೋಸಮಾಡಿರಲಿಲ್ಲವೆಂಬುದನ್ನರಿತು ನಾರಾಯಣಮೂರ್ತಿಯು ಅವನ ಕಲಾಕೌಶಲಕ್ಕಾಗಿ ಆಚ್ಚರಿಯಿಂದ ತಲೆ ದೂಗಿದನು. ಮಲ್ಲಿಗೆಯ ಹೂಗಳ ಪರಿಮಳವಂತು ಮನೆಗೆಲ್ಲ ಹರಡಿತ್ತು. ಸುಂದರಮ್ಮನು ಸಂತೋಷದಿಂದ ಹೂ ಮುಡಿದು, ಮಂದಹಾಸವನ್ನು ಬೀರಿದಳು. ನಾರಾಯಣಮೂರ್ತಿಯು ಒಂದೆರಡು ನಿಮಿಷಗಳ ಕಾಲ ಸುಮ್ಮನಿದ್ದು, "ಸುಂದರಾ! ಎಷ್ಟು ಕೌಶಲವೇ ಆ ಹೂವಾಡಿಗನದು!

ಇಂತಹವರು ಎಷ್ಟು ಮಂದಿ ಮಹಾನುಭಾವರು ನಮ್ಮ ದೇಶದಲ್ಲಿದ್ದು ಯಾವ ಯಾವ ಕಲೆಗಳನ್ನು ಅಭ್ಯಾಸ ಮಾಡುತ್ತಿದ್ದಾರೋ! ಇದನ್ನರಿತು ಅಭಿನಂದಿಸದೆ ನಮ್ಮ ಜೀವನವನ್ನೇ ವ್ಯರ್ಥಮಾಡಿಕೊಳ್ಳುತ್ತಿದ್ದೇವೆ'' ಎಂದನು.

ಸುಂದರಮ್ಮನು ''ನೀವೂ ಚೆನ್ನಾಗಿ ಹೇಳುತ್ತೀರಿ—ಅಂದರೆ; ಒಬ್ಬೊಬ್ಬರು ಒಂದೊಂದರಲ್ಲಿ ಗಟ್ಟಿಗರಾಗಿರುತ್ತಾರೆ. ಎಲ್ಲಾ ಯಾರಿಗೆ ಗೊತ್ತು? ನೀವು ತಾನೆ ಕಷ್ಟಪಟ್ಟು ಓದಿ ಬುದ್ಧಿವಂತರಾಗಿಲ್ಲವೆ? ಏನೋ ಇಲ್ಲದ ಯೋಚನೆ ಹಚ್ಚಿಕೋತಾರೆ. ಇವರೂ ಸರಿಯೆ! ಸದ್ಯ ನನ್ನ ಮಾಂಗಲ್ಯವೊಂದು ಉಳೀತು. ನನಗೆ ಅದೊಂದೇ ದೊಡ್ಡ ಸಂತೋಷ'' ಎಂದು ಉತ್ತರ ಹೇಳಿದಳು.

ಆದರೂ, ನಾರಾಯಣಮೂರ್ತಿಯ ಮನಸ್ಸು ಯಾವುದೋ ಒಂದು ಬಗೆಯ ಆಲೋಚನಾ ಪ್ರಪಂಚದಲ್ಲಿ ನೆಲೆತಪ್ಪಿದ ಹಡಗಿನಂತೆ ಅಲೆದಾಡುತ್ತಿದ್ದಿತು. ಬೀದಿಯಲ್ಲಿ ಹುಡುಗನೊಬ್ಬನು ತನ್ನ ಸಿಳ್ಳು ಧ್ವನಿಯಲ್ಲಿ ''ಯದಾ ಕಿಂಚಿತ್ಕಿಂಚಿದ್ಬುಧಜನ ಸಕಾಶಾದವಗತಂ ತದಾ ಮೂರ್ಖೋಸ್ಮೀತಿ ಜ್ವರ ಇವ ಮದೋ ಮೇ ವ್ಯಪಗತಃ'' ಎಂದು ಹೇಳಿಕೊಂಡು ಹೋಗುತ್ತಿದ್ದನು. ಒಂದು ದಿನ ಸಂಸ್ಕೃತ ಪಂಡಿತರು (ಮುನಷಿಯವರು) ವಿದ್ಯಾರ್ಥಿಗಳಿಗೆ ಆ ಶ್ಲೋಕದ ಅರ್ಥವನ್ನು ವಿವರಿಸಿ ಹೇಳುತ್ತಿದ್ದುದನ್ನು ನಾರಾಯಣಮೂರ್ತಿಯು ಕೇಳಿದ್ದನು. ಈಗ ಆ ಶ್ಲೋಕದ ಉತ್ತರಾರ್ಧವನ್ನು ಯಾವನೋ ಹುಡುಗನು ಹೇಳಿಕೊಂಡು ಹೋಗುತ್ತಿದ್ದುದನ್ನು ಕೇಳಿ, ನಾರಾಯಣಮೂರ್ತಿಯ ಅಂತಃಕರಣವು ಕದಡಿ ಹೋಯಿತು. ಅವನ ಕಣ್ಣಿನಿಂದ ನೀರು ಹರಿಯುವುದರಲ್ಲಿದ್ದಿತು.

ಅಷ್ಟು ಹೊತ್ತಿಗೆ ಸರಿಯಾಗಿ, ಅವನ ಮಗ ಗೋಪುವು ''ಅಮ್ಮ, ಅಮ್ಮ, ಏನು ಹೂವೇ ಮುಟ್ಟಿನೋಡಿಕೋತೀಯೇ? ನಿನಗಿಂತಲೂ ನಾನೇ ಹೆಚ್ಚು, ಗೊತ್ತೋ ನಿಂಗೆ'' ಎಂದು ಹೇಳುತ್ತ ಕೊಠಡಿಯೊಳಕ್ಕೆ ಓಡಿ ಬಂದನು. ಅವನ ಕೈಯಲ್ಲಿ ಒಂದು ಚಿತ್ರಗಳ ಪುಸ್ತಕವಿದ್ದಿತು. ಸುಂದರಮ್ಮನು ಮಗನನ್ನು ತಲೆದಡವಿ ''ಆಗಲಪ್ಪ. ನನಗಿಂತ ನೀನೇ

ಹೆಚ್ಚಪ್ಪ. ನೀನು ನಿಮ್ಮ ತಂದೆಗಿಂತಲೂ ಹೆಚ್ಚಾಗಪ್ಪ. ಏನೂ ಅಂದರೆ. ನಿಮ್ಮ ಮಗ ನಿಮಗಿಂತ ಹೆಚ್ಚಾಗ್ತಾನಂತೆ. ನಿಮಗೆ ಹೊಟ್ಟೇಕಿಚ್ಚೇ ಹೇಳಿ —ಬೇಗ ಹೇಳಿ ಅಂದರೆ. ಗೋಪು! ನೀನು ನನಗಿಂತ ಏಕೆ ಹೆಚ್ಚು, ಹೇಳಪ್ಪ, ನೀನು ಜಾಣ, ಹೇಳಪ್ಪ'' ಎಂದಳು. ಗೋಪುವು, "ಹೇಳೋದೇನು? ನಿನ್ನ ಹೂವಿಗಿಂತ ನನ್ನ ಬೊಂಬೆ ಬುಕ್ಕು ಚನ್ನಾಗಿದೆ. ಅದಕ್ಕೇ ನಿಂಗಿಂತ ನಾನೇ ಹೆಚ್ಚು. ನನ್ನ ಚಿತ್ರ, ನಿಂದು, ಅಣ್ಣನ ಚಿತ್ರ—ಮೂರೂ ಇರುತ್ತೆ ಅಂತಿದ್ದೆ. ಅದಿಲ್ಲ. ಆದ್ರೂ ಬುಕ್ಕು ಚನ್ನಾಗಿದೆ. ಇದು ನಂಗೇ, ನಂಗೇ" ಎಂದು ಹೇಳಿದನು. ದಂಪತಿಗಳಿಬ್ಬರೂ ಅವನನ್ನು ಆಲಿಂಗಿಸಿದರು.

———

# "ನೀನೇ ಮುದ್ದುಕೃಷ್ಣ"

೧

ಭೀಮರಾಯರು ಕೆಲಸದಿಂದ ವಿಶ್ರಾಂತರಾದ (ರಿಟೈರಾದ) ಮೇಲೆ ಬೆಂಗಳೂರಿನಲ್ಲಿ ನಿಂತರು. ಅಚ್ಚುಕಟ್ಟಾಗಿ ಸ್ವಂತಮನೆಯೂ ಇದ್ದಿತು. ಅವರಿಗೆ ಇಬ್ಬರು ಗಂಡು ಮಕ್ಕಳು; ರಾಮಸ್ವಾಮಿಯು ಹಿರಿಯ ಮಗ. ಕೃಷ್ಣಸ್ವಾಮಿಯು ಕಿರಿಯ ಮಗ. ಅನೇಕ ಮಕ್ಕಳು ಮೃತರಾದಮೇಲೆ ಹುಟ್ಟಿದ ಈ ಇಬ್ಬರು ಮಾತ್ರವೇ ಉಳಿದಿದ್ದರು. ಇಬ್ಬರು ಮಕ್ಕಳೂ ತಮಗಿಂತಲೂ ಹೆಚ್ಚಾಗಿ ಓದಿ ತಮ್ಮ ಮಾಮಲೆಗಿಂತ ಹೆಚ್ಚಿನ ಹುದ್ದೆಗೆ ಬರಬೇಕೆಂದು ಭೀಮರಾಯರಿಗೆ ಬಹಳ ಆಶೆ. ಆದರೆ, ಕೃಷ್ಣಸ್ವಾಮಿಯೇನೊ ಅವರ ಆಶೆಯನ್ನು ಪೂರ್ತಿಗೊಳಿಸಿ ಪ್ರವರ್ಧಮಾನಕ್ಕೆ ಬರುವ ಸೂಚನೆ ಇದ್ದಿತು. ರಾಮಸ್ವಾಮಿಯು ಧಾಂಡಿಗನಾಗಿ ದುಂಡಾವರ್ತಿ ಮಾಡುತ್ತಿದ್ದುದು ಹೊರತು, ಮತ್ತೇನನ್ನೂ ಅರಿಯನು. ಓದುವುದು ಬರೆಯುವುದೆಂದರೆ ಅವನಿಗೆ ತಲೆನೋವು. ಅದನ್ನು ಕಂಡು ತಾಯಿತಂದೆಗಳಿಗೆ ಅಸಹ್ಯವು ಹುಟ್ಟಿತು.

ಕೃಷ್ಣಸ್ವಾಮಿಯು ತರಗತಿಯಲ್ಲಿ ಮೊದಲನೆಯವನಾಗಿ ಇನಾಮು ಪುಸ್ತಕಗಳನ್ನು ತರುತ್ತಿದ್ದನು. ಅವನು ಇನಾಮು ಪುಸ್ತಕಗಳನ್ನು ತೋರಿಸಿ ಹಿಗ್ಗಿದರೆ, ರಾಮಸ್ವಾಮಿಯು ಸುಮ್ಮನಿರಲಾರದೆ "ನಿನಗೆ ಮನುಷ್ಯರು ಇನಾಮುಗಳನ್ನು ಕೊಟ್ಟರೆ, ನನಗೆ ದೇವರೇ ಕೊಡುತ್ತಾನೆ. ತರುವವನು ತಂದೆ. ಬಣ್ಣದ ಚಿತ್ರಗಳಿರುವ ಪುಸ್ತಕಗಳನ್ನಾದರೂ ತಂದೆಯಾ? ಚಿತ್ರಗಳಿಲ್ಲದ ಬರಿಯ ಪುಸ್ತಕಗಳನ್ನು ತಂದಿರುತ್ತೀ" ಎನ್ನುವನು. ಇದನ್ನು ಕೇಳಿ ತಂದೆಯು ಸಿಡಿಮಿಡಿಯಾಗುವರು; ಅಲ್ಲದೆ "ಈ ಕೊಂಟಿ ಕೋಣನಿಗೆ ದೇವರು ಇನಾಮು ಕೊಡುತ್ತಾನೆ. ಪಂಗನಾಮವೇ ಇವನಿಗೆ ದೇವರು ಕೊಡೋದು. ದೇವರಂತೆ ದೇವರು; ಇವನೊಬ್ಬ ದೊಣ್ಣೆ ಭಾಗವತ. ಕಿಟ್ಟು! ಇನ್ನುಮೇಲೆ ಚಿತ್ರದ ಬುಕ್ಕುಗಳನ್ನು ತಂದು

ಕೊಡೊ. ಪಾಪ! ಅಂಬೆಗಾಲಿಡುವ ಮುದ್ದು ಮಗು, ಬೊಂಬೇ ನೋಡಲಿ. ಹೀನಬಾಳಿಗೆ ನಾಚಿಕೆಯೂ ಇಲ್ಲ'' ಎಂದು ಗದರಿಸುವರು. ಕೃಷ್ಣ ಸ್ವಾಮಿಯು ತನ್ನ ಸಮಾನರಿಲ್ಲವೆಂದು ನಗುವನು; ರಾಮಸ್ವಾಮಿಯೂ ಬೈಗುಳನ್ನು ಮನಸ್ಸಿಗೇ ಹಚ್ಚಿಕೊಳ್ಳದೆ ತಮ್ಮನೊಡನೆ ತಾನೂ ನಗುವನು. ''ಈ ಭಂಡಬಾಳಿಗೇನಂತೆ'' ಎಂದು ಮೂದಲಿಸಿ ಭೀಮರಾಯರು ಹೊರಟು ಹೋಗುವರು. ಕೃಷ್ಣಸ್ವಾಮಿಗೆ ಇನಾಮು ಬಂದಾಗಲೆಲ್ಲ ಒಟ್ಟಿನಲ್ಲಿ ಇದೇ ವಿಧವಾದ ರಗಳೆ.

ರಾಮಸ್ವಾಮಿಯು ಒಂದು ನಾಯಿಮರಿಯನ್ನು ಬೇರೆ ಸಾಕಿ ಕೊಂಡಿದ್ದನು. ಭೀಮರಾಯರಿಗೆ ಅದನ್ನು ನೋಡಿ ಇನ್ನೂ ಸಿಟ್ಟು. ಹುಡುಗರು ಓದಿ ಬರೆದು ಅದರ ಜೊತೆಗೆ ಏನನ್ನು ಮಾಡಿದರೂ ಚೆನ್ನಾಗಿರು ವುದೆಂದೂ, ದಡ್ಡರು ಏನುಮಾಡಿದರೂ ಶೋಭಿಸುವುದಿಲ್ಲವೆಂದೂ ವರಸೆ ವರಸೆಯಾಗಿ ಅವರು ಆಕ್ಷೇಪಿಸುತ್ತಿದ್ದರು. ರಾಮಸ್ವಾಮಿಯು ಆ ನಾಯಿ ಮರಿಯನ್ನೆತ್ತಿಕೊಂಡು ಅದರ ತಲೆಯನ್ನು ತಡವರಿಸುತ್ತ ಓಡಾಡಿದ ನೆಂದರೆ ಭೀಮರಾಯರಿಗೆ ಬೆದರುವ ಎತ್ತಿನ ಮುಂದೆ ಪಂಜನ್ನು ಹಿಡಿ ದಂತಾಗುವುದು. ನಾಯಿಮರಿಯನ್ನು ಓಡಿಸಬೇಕೆಂದು ಅವರಿಗೆ ಬಹಳ ಆಶೆ. ಆದರೆ ಅದಕ್ಕೆ ಅವಕಾಶವಿಲ್ಲ. ಏಕೆಂದರೆ ರಮಾಬಾಯಮ್ಮನವರಿಗೆ ಅದನ್ನು ಕಂಡರೆ ಬಹಳ ಇಷ್ಟ. ಅದು ಮುದ್ದಾಗಿಯೂ ಇದ್ದಿತು. ಅವರು ಅದನ್ನು ಕಾಲಭೈರವನೆಂದು ಕರೆಯುವರು. ಹಾಲನ್ನು ಮಿಗಿಸಿ ನಾಯಿ ಮರಿಗೆ ಕೊಡುತ್ತಿದ್ದರು. ಆದುದರಿಂದ, ಹೆಂಡತಿಯು ಎಲ್ಲಿ ನೊಂದು ಕೊಳ್ಳುವಳೋ ಎಂದು ಯೋಚಿಸಿ ಅವರು ನಾಯಿಮರಿಯನ್ನು ಓಡಿಸಲಿಲ್ಲ.

ಕೃಷ್ಣಸ್ವಾಮಿಗೆ ಓದುಬರೆಹಗಳಲ್ಲಿ ಎಷ್ಟು ಅಭಿರುಚಿಯೋ, ರಾಮ ಸ್ವಾಮಿಗೆ ಚಿತ್ರವನ್ನು ಬರೆಯುವುದರಲ್ಲಿ ಅಷ್ಟು ಅಭಿರುಚಿ. ಒಂದು ದಿನ ಅಣ್ಣನು ತಮ್ಮನನ್ನು ಕುರಿತು ''ಏಕೆ ಓದಿ ಓದಿ ಮರುಳಾಗುತ್ತೀಯೋ? ಈ ಒಣ ಓದಿನಿಂದ ಏನು ಪ್ರಯೋಜನ? ಸಿಕ್ಕಿದ ಊರುಗಳ ಹೆಸರು ಗಳನ್ನೆಲ್ಲ ಉರುಹೊಡೆಯುತ್ತೀಯೆ. ನಿನಗೆ ಈ ಊರಿನ ಪೇಟೆಗಳ ಹೆಸರೇ ಗೊತ್ತಿಲ್ಲ. ಮೊನ್ನೆ ರಾಣಾಸಿಂಗನ ಪೇಟೆಯೆಂದರೆ ಅದೆಲ್ಲಿದೆ ಎಂದಾಗಲೇ

ತಿಳಿಯಿತು, ಅಪ್ಪನ ಬೆಪ್ಪುತನ. ಈ ಊರಿನಲ್ಲಿ ಏನು ನಡೆಯುತ್ತ ದೆಂಬುದೇ ಗೊತ್ತಿಲ್ಲ. ಸಿಕ್ಕಿದ ಕಡೆಯ ಸಮಾಚಾರವನ್ನೆಲ್ಲಾ ತಲೆಗೆ ತುಂಬಿಕೊಳ್ಳುತ್ತಾನೆ" ಎಂದು ಮೂದಲಿಸಿದನು.

"ಕೋತಿ ತಾನು ಕೆಡುವುದಲ್ಲದೆ ನೆರೆಯನ್ನೆಲ್ಲಾ ಕೆಡಿಸಿತಂತೆ. ನಿನ್ನನ್ನು ಊರೆಲ್ಲಾ ದಡ್ಡನೆಂದು ಕರೆಯುತ್ತಾರೆ. ನೀನು ಓದದೇ ಕೆಟ್ಟು ಹೋದರೆ, ನಾನೇಕೆ ಕೆಟ್ಟುಹೋಗಬೇಕು?" ಎಂದು ತಮ್ಮನೆಂದನು.

ಇದೇರೀತಿ ಹುಡುಗರಿಗೆ ಎಷ್ಟೋಹೊತ್ತು ವಾಗ್ವಾದವು ನಡೆಯಿತು. ರಾಮಸ್ವಾಮಿಗೆ ಕೃಷ್ಣಸ್ವಾಮಿಯನ್ನು ಕಾಡುವುದರಲ್ಲಿ ಬಹಳ ಇಷ್ಟ. ಮರುದಿನ ಕೃಷ್ಣಸ್ವಾಮಿಗೆ ಪರೀಕ್ಷೆ. ಅವನು ಬಹಳ ಆಸಕ್ತಿಯಿಂದ ಓದತೊಡಗಿದನು. ರಾಮಸ್ವಾಮಿಯು ಗಟ್ಟಿಯಾಗಿ ಜಾಗಟೆಯನ್ನು ಬಡಿಯುತ್ತ,

"**ಸುರಲಲನಾತತ ಥೇಯಿತ ಥೇಯಿತ ತಾಲನಿಮಿತ್ತಜ ಲಾಸ್ಯರತೇ ।**
**ಕಕುಭಾಂ ಪ್ರತಿ ವರಘೋಂಗದ ತಾಲಕ ತಾಲ ಕುತೂಹಲನಾದರತೇ ॥**
**ಧಿಂ ಧಿಂ ಧಿಂ ಧಿಂ ಧಿಮಿತ ಧ್ವನಿ ಧೀರ ಮೃದಂಗ ನಿನಾದರತೇ ।**
**ಜಯ ಜಯ ಹೇ ! ಮಹಿಷಾಸುರ ಮರ್ದಿನಿ ರಮ್ಯಕಪರ್ದಿನಿ ಶೈಲಸುತೇ ॥"**

ಎಂದು ಹೇಳಿಕೊಂಡು ಕುಣಿಯಲಾರಂಭಿಸಿದನು.

ಮನೆಯಲ್ಲಿ ಹುಡುಗರಿಬ್ಬರ ಹೊರತು ಮತ್ತಾರೂ ಇರಲಿಲ್ಲ. ಅವರ ತಂದೆಯು ಕೆಲಸದ ಮೇಲೆ ಎಲ್ಲಿಗೋ ಹೋಗಿದ್ದರು. ಅವರ ತಾಯಿಯು ಆಚೆಮನೆ ಹುಡುಗಿಗೆ ಮೊಗ್ಗಿನ ಜಡೆಯನ್ನು ಹಾಕುವುದಕ್ಕೆ ಹೋಗಿದ್ದರು. ರಾಮಸ್ವಾಮಿಗೆ ನಿರ್ಭಯ. ಬೆಕ್ಕಿಗೆ ಚಲ್ಲಾಟ, ಇಲಿಗೆ ಪ್ರಾಣ ಸಂಕಟ; ಕೃಷ್ಣಸ್ವಾಮಿಗೆ ಓದು ಸಾಗದೆ ಕಷ್ಟಕ್ಕೆ ಬಂದಿತು. ಇಂಗು ಸೇರದವರ ಮುಂದೆ ಇಂಗಿನ ಹೊಗೆಯನ್ನು ಹಾಕಿದಂತಾಯಿತು. ಕೊನೆಗೆ ಕೃಷ್ಣ ಸ್ವಾಮಿಯು "ಏನು ಹಾಡಿದ್ದೇ ಹಾಡುತ್ತೀಯಪ್ಪ. ಅದೂ ಸರಿಯಾಗಿ ಬರುವುದಿಲ್ಲ. ನೆರೆಯ ಮನೆಯವರು ಹೇಳುತ್ತಿದ್ದುದನ್ನು ಕೇಳಿ ಕಲಿತದ್ದು. ನಿನಗೆ ಯಾವುದೂ ಬರುವುದಿಲ್ಲ. ನನಗೆ ಬೆಳಗಾದರೆ ಪರೀಕ್ಷೆ. ಓದಬೇಕು. ನಾನು ಅಯ್ಯ ಬರುತ್ತಲು ಹೇಳಿಬಿಡುತ್ತೇನೆ" ಎಂದನು.

ರಾಮುಸ್ವಾಮಿಯು "ಏನು ಓದಿಗೆ ಅಳುತ್ತೀಯೋ, ಈ ಸ್ತೋತ್ರವನ್ನು ನೋಡೋ, ಎಷ್ಟು ಚೆನ್ನಾಗಿದೆ. ಇವನಿಗೆ ಒಂದೂ ಬೇಡ. ಸತ್ತ ಕಾಗದವನ್ನು ಕಣ್ಣಿನ ಹತ್ತಿರ ಹಿಡಿದುಕೊಂಡು ಕೂತರೆ ಗೆದ್ದ. ಇಷ್ಟಕ್ಕೂ ನಿನ್ನ ಕೊಟಡಿಗೆ ನಾನೇನೂ ಬರಲಿಲ್ಲ. ಅಲ್ಲಿಗೆ ಹೋಗಿ ಓದು, ಸಂಜೆಯವರೆಗೂ ಓದು. ರಾತ್ರಿ ಬೆಳಗೂ ಓದು. ಬೇಡವೆಂದವರು ಯಾರು? ಇದು ಅಯ್ಯನ ಕೊಟಡಿ. ಅಯ್ಯನ ಕೊಟಡಿಯಲ್ಲಿ ನಾನು ಬೇಕಾದ್ದು ಮಾಡಿಕೊಳ್ಳುತ್ತೇನೆ. ನಿನಗೇನಂತೆ" ಎಂದವನೇ ಮೊದಲಿಗಿಮ್ಮಡಿಯಾದ ರಭಸದಿಂದ ಗಟ್ಟಿಯಾಗಿ ಜಾಗಟೆಯನ್ನು ಬಡಿಯುತ್ತ ಮೊದಲು ಹೇಳಿದ ಶ್ಲೋಕವನ್ನು ಹೇಳಿಕೊಂಡು ಕುಣಿಯಲಾರಂಭಿಸಿದನು. ಆದರೆ ಸ್ವಲ್ಪ ಹೊತ್ತಿನಲ್ಲೇ ಭೀಮರಾಯರು ಮನೆಗೆ ಬಂದರು. "ಇದೇನೊ ರಗಳೆ! ಇದೇನು ಹುಚ್ಚು ಕುಣಿತ! ದಾಸಯ್ಯ! ಭಿಕ್ಷಕ್ಕಾದರೂ ಹೋಗೋ! ನಿನ್ನ ಬಾಳಿಗೆ ನಾಚಿಕೆಯೂ ಇಲ್ಲ. ವಯಸ್ಸಾಗುತ್ತಾ ಬಂತು, ಕೋಣನ ಹಾಗೆ ಬೆಳೆದಿದ್ದೀಯೆ. ಎದೆಯನ್ನು ಸೀಳಿ ಪಂಜು ಹಿಡಿದು ಹುಡುಕಿದರೂ ಎರಡು ಅಕ್ಷರವಿಲ್ಲ" ಎಂದು ಹೇಳಿ ರಾಮುಸ್ವಾಮಿಯ ಕಿವಿಯನ್ನು ಹಿಂಡಿದರು.

ಅದೇ ಸಮಯವೆಂದು ಕೃಷ್ಣಸ್ವಾಮಿಯು ಚಾಡಿಯನ್ನು ಹೇಳಿ ಅನಂತರ ತನ್ನ ಕೊಟಡಿಗೆ ಹೋಗಿ ಓದಲಾರಂಭಿಸಿದನು. ಭೀಮರಾಯರು ಒಂದು ಪುಸ್ತಕವನ್ನು ತಂದು ರಾಮುಸ್ವಾಮಿಯ ಕೈಗೆ ಕೊಟ್ಟು "ಸಂಜೆಯವರೆಗೆ ಇಲ್ಲೇ ಓದುತ್ತಾ ಕೂತಿರಬೇಕು. ಮೇಲಕ್ಕೇನಾದರೂ ಎದ್ದೆಯೋ ಚರ್ಮವನ್ನೇ ಸುಲಿದು ಹಾಕುತ್ತೇನೆ" ಎಂದು ಹೇಳಿ ಎಲ್ಲಿಗೋ ಅವಸರ ಅವಸರವಾಗಿ ಹೊರಟುಹೋದರು. ಅವರು ಮರೆಯಾಗುತ್ತಲು ರಾಮುಸ್ವಾಮಿಯು ನಕ್ಕನು; ಪುಸ್ತಕವನ್ನು ತೆರೆದು ಸ್ವಲ್ಪ ಓದಿದನು. "ಅಯ್ಯೋ ಓದೇ. ನನ್ನ ತಲೆಗೆ ಹತ್ತುವುದಿಲ್ಲವಲ್ಲಾ, ಏನು ಮಾಡಲಿ" ಎಂದು ಗೊಣಗಿಕೊಂಡನು. ಆ ಬಳಿಕ ಕಿಟಕಿಯ ಕಡೆಗೆ ನೋಡಿದನು. ಒಂದು ಅಳಿಲು ಬಂದು ಕೂತಿದ್ದಿತು. ಅದಕ್ಕೆ ಒಳಗೆ ಬರಲು ಆಶೆ; ಬಂದರೇನಾಗುವುದೋ ಎಂದು ಭಯ. ಆದರೂ ಒಳಗೆ ಕಿಟಕಿಯಲ್ಲಿ ಬಿದ್ದಿದ್ದ ಲಾಡೂ ಕಾಳುಗಳನ್ನು ತಿನ್ನಬೇಕೆಂಬ ಚಪಲ. ಆದುದರಿಂದ ಅದು ತನ್ನ

ಸುತ್ತಮುತ್ತಲೂ ನೋಡಿಕೊಂಡು ಬಹಳ ಜಾಗರೂಕತೆಯಿಂದ ಒಳಕ್ಕೆ ಬಂದು, ಕಾಳುಗಳನ್ನು ತಿನ್ನಲಾರಂಭಿಸಿತು.

ರಾಮುಸ್ವಾಮಿಯು ಅದನ್ನೆಲ್ಲ ಚೆನ್ನಾಗಿ ದೃಷ್ಟಿಸಿ ನೋಡಿದನು; ಜೇಬಿನಿಂದ ಕಾಗದವನ್ನೂ ಸೀಸದ ಕಡ್ಡಿಯನ್ನೂ ತೆಗೆದುಕೊಂಡು ಕಣ್ಣು ಮಿಟಿಕಿಸದೆ ಅಳಿಲನ್ನೇ ನೋಡುತ್ತ ಅದರ ಚಿತ್ರವನ್ನು ಬರೆದನು. ಅಳಿಲಿನ ಮುಖವನ್ನೇ ಪಡಿಯಚ್ಚಿನಂತೆ ಚಿತ್ರದಲ್ಲಿ ಇಳಿಸಿದನು. ಅನೇಕ ತಡವೆ ಎರಡನ್ನೂ ಪರಸ್ಪರವಾಗಿ ಹೋಲಿಸಿ ನೋಡಿ ತನ್ನಲ್ಲಿ ತಾನೆ ಹಿಗ್ಗಿದನು. "ರಾಮ ಮೆಚ್ಚಿದ ಅಳಿಲೆ! ಇಷ್ಟು ಸುಂದರವಾಗಿರುವುದರಿಂದಲೇ ರಾಮ ಮೆಚ್ಚಿದ" ಎಂದುಕೊಂಡನು. ಅಷ್ಟರಲ್ಲಿ ಹೊರಗೆ ಏನೋ ಶಬ್ದ ವಾಯಿತು. ಅಳಿಲು ಓಡಿಹೋಯಿತು. ರಾಮುಸ್ವಾಮಿಯು ಬಾಗಿಲಿನ ಕಡೆಗೆ ನೋಡಿದನು; ನೋಡಿದರೆ ಭೀಮುರಾಯರು! ಮಗನು ತಂದೆಯು ಬಂದ ಸುಳುವನ್ನು ನೋಡಿದೊಡನೆಯೇ ಚಿತ್ರವನ್ನು ಒತ್ತಟ್ಟು ಸರಕ್ಕನೆ ತೆಗೆದಿಟ್ಟು ಪುಸ್ತಕವನ್ನು ಕೈಗೆ ತೆಗೆದುಕೊಂಡನು. ಆದರೂ ರಾಮುಸ್ವಾಮಿಯು ಗಾಬರಿಪಟ್ಟುದನ್ನು ನೋಡಿ ಭೀಮುರಾಯರಿಗೆ ಅನುಮಾನ ತಟ್ಟಿತು. ಬಗ್ಗಿ ನೋಡಿದರೆ ರಾಮುಸ್ವಾಮಿಯು ತಲೆಕೆಳಗಾಗಿ ಪುಸ್ತಕವನ್ನು ಹಿಡಿದಿದ್ದಾನೆ. ಅವನಿಗೆ ಅದು ಗೊತ್ತಾಗಿರಲಿಲ್ಲ; ಅವಸರದಲ್ಲಿ ಪುಸ್ತಕವನ್ನು ತಲೆಕೆಳಗಾಗಿ ಹಿಡಿದುಕೊಂಡುಬಿಟ್ಟ. ಭೀಮುರಾಯರು "ಓದದೇ ಹೀಗೆ ಕಾಲವನ್ನು ಕಳೆಯುತ್ತೀಯೆ? ಎದೆಗೆ ಶೂಲವಾದೆ. ನೀನು ಹುಟ್ಟಲಿಲ್ಲವೆಂದು ಯಾರು ಅಳುತ್ತಿದ್ದರು? ನೀನು ಹುಟ್ಟದೇ ಇದ್ದಿದ್ದರೆ ಚೆನ್ನಾಗಿತ್ತು" ಎಂದು ಹೇಳಿ ಬೆನ್ನಿನ ಮೇಲೆ ಗುದ್ದಿದರು.

ರಾಮುಸ್ವಾಮಿಯು "ಅಯ್ಯೊ, ಬೇಡ, ಬೇಡ. ಇನ್ನು ಮೇಲೆ ಹೀಗೆ ಮಾಡುವುದಿಲ್ಲ. ನಾನೇನುಮಾಡಲಿ? ನನಗೆ ಓದು ಹತ್ತುವುದಿಲ್ಲ. ನಾನು ಹುಟ್ಟಲಿಲ್ಲವೆಂದು ನಾನೂ ಅಳುತ್ತಿರಲಿಲ್ಲ. ನಾನು ಹುಟ್ಟದೇ ಇದ್ದಿದ್ದರೆ ಚೆನ್ನಾಗಿತ್ತು" ಎಂದು ಹೇಳಿದನು. ರಾಯರು "ನನ್ನ ಮಾತು ಅಣಕಿ ಸುತ್ತೀಯಾ?" ಎಂದು ಗುದ್ದಿದರು. ಅಷ್ಟರಲ್ಲಿ ಅವನ ತೊಡೆಯ ಕೆಳಗೆ ಮುಚ್ಚಿಟ್ಟುಕೊಂಡಿದ್ದ ಚಿತ್ರವು ಭೀಮುರಾಯರ ಕಣ್ಣಿಗೆ ಬಿದ್ದಿತು. ಇದೇನೋ ಕಾಗದವೆಂದು ಅವರು ಅದನ್ನು ಎಳೆದುಕೊಂಡು ನೋಡಿದರು.

ಅಳಿಲಿನ ಚಿತ್ರ. ಅವರಿಗೆ ಮತ್ತಷ್ಟು ರೇಗಿಹೋಯಿತು. "ಇದೋ ನೀನು ಮಾಡುತ್ತಿದ್ದ ಕೆಲಸ. ಚಿತ್ರಗಾರರ ಮನೆಗಾದರೂ ಹೋಗೋ. ಇನ್ನು ಮೇಲೆ ಚಿತ್ರಗಳನ್ನು ಬರೆದರೆ ಬೆರಳುಗಳನ್ನೇ ಮುರಿದುಹಾಕುತ್ತೇನೆ. ಜೋಕೆ" ಎಂದು ಹೇಳಿ ಮೂರು ನಾಲ್ಕು ಗುದ್ದುಗಳನ್ನು ಕೊಟ್ಟರು. ರಾಮಸ್ವಾಮಿಯು ಕಣ್ಣೊರಸಿಕೊಳ್ಳುತ್ತ ನವಕ್ಕೆ ಪುಸ್ತಕವನ್ನು ಹಿಡಿದು ಓದುತ್ತ ಕುಳಿತನು. ಅದನ್ನು ನೋಡಿ ಸ್ವಲ್ಪ ಸಮಾಧಾನ ಮಾಡಿಕೊಂಡು ರಾಯರು ಹೊರಟುಹೋದರು.

ಒಂದು ದಿವಸ ಕೃಷ್ಣಸ್ವಾಮಿಯು ಭೂಪಟವನ್ನು (ಮ್ಯಾಪನ್ನು) ಬರೆದುಕೊಂಡು ಹೋಗಬೇಕಾಗಿದ್ದಿತು. ಅವನು ಕಾಗದಕ್ಕೆ ಸೀಮೆ ಯೆಣ್ಣೆಯನ್ನು ಸವರಿ ಅದನ್ನು "ಅಟ್ಲಾಸಿನ" ಮೇಲಿಟ್ಟುಕೊಂಡು ಭೂಪಟವನ್ನು ಬರೆದುಕೊಂಡು ಹೋಗಬೇಕು. ಎಷ್ಟೋ ಸಲ ತಡವೆ ಪ್ರಯತ್ನಿಸಿದನು; ಒಂದೊಂದು ಸಾರಿ ಒಂದೊಂದು ಕಡೆ ಕೆಟ್ಟುಹೋಗುತ್ತಿದ್ದಿತು. ಕೊನೆಗೆ ಬಹಳ ಕಷ್ಟಪಟ್ಟು ಒಂದು ಪ್ರತಿಯನ್ನು ಬರೆದನು. ಅದನ್ನು ಬೆಂಕಿಯ ಮೇಲೆ ಹಿಡಿದು, ಎಣ್ಣೆಯನ್ನು ಹೋಗಲಾಡಿಸಿದನು. ಆ ಬಳಿಕ ಅದರಲ್ಲಿ ಊರುಗಳು, ನದಿಗಳು ಮತ್ತು ಬೆಟ್ಟಗಳು ಮುಂತಾದವುಗಳ ಹೆಸರನ್ನು ಬರೆದಿಟ್ಟು ಸ್ವಲ್ಪ ಒಳಕ್ಕೆ ಹೋದನು. ರಾಮಸ್ವಾಮಿಯ ನಾಯಿಮರಿಯು ಅಲ್ಲಿಗೆ ಓಡಿಬಂದು ಅದರಮೇಲೆ ಮಸಿಯ ಕುಡಿಕೆಯನ್ನು ಉರುಳಿಸಿತು. ಕೃಷ್ಣಸ್ವಾಮಿಯು ಆ ವೇಳೆಗೆ ಅಲ್ಲಿಗೆ ಬಂದನು. ತಾನು ಬೆಳಗಿನಿಂದಲೂ ಮಾಡಿದ್ದ ಕೆಲಸವೆಲ್ಲಾ ವ್ಯರ್ಥವಾದುದನ್ನು ನೋಡಿ, ಅವನಿಗೆ ಬಹಳ ವ್ಯಥೆಯಾಯಿತು. ಅವನಿಗೆ ನಾಯಿಮರಿಯನ್ನು ಮುಟ್ಟಲು ಬಹಳ ದಿಗಿಲು. ದೂರದಲ್ಲೇ ನಿಂತು "ಛೀ, ಛೂ, ಛೂ, ಆಚೆಗೆ ನಡಿ" ಎಂದು ಎಷ್ಟು ಬೆದರಿಸಿದರೂ ನಾಯಿಮರಿಯು ಸ್ಥಳವನ್ನು ಬಿಟ್ಟು ಕದಲಲಿಲ್ಲ.

ಭೀಮರಾಯರು "ಏನೋ ಗದ್ದಲ" ಎಂದುಕೊಂಡು ಅಲ್ಲಿಗೆ ಬಂದರು. ಕೃಷ್ಣಸ್ವಾಮಿಯು ಅವರಿಗೆ ಸಂಗತಿಗಳನ್ನೆಲ್ಲ ತಿಳಿಸಿದನು. ಅವರು ಬಹಳ ಕೋಪದಿಂದ "ಎಲೋ ರಾಮುಗ! ನಿನ್ನ ಹಾಳು ನಾಯಿ ಮರಿಯನ್ನು ಕರೆದುಕೊಂಡು ಹೋಗು. ನೀನಂತು ಅಡ್ಡೇ ಭಾಗವತ. ಓದುವವರಿಗೂ ನಿನ್ನಿಂದ ವಿಘ್ನ" ಎಂದು ಕೂಗಿದರು. ರಾಮಸ್ವಾಮಿಯು

ಓಡಿಬಂದು ನಾಯಿಮರಿಯನ್ನು ಕರೆದುಕೊಂಡು ಹೋದನು. ಕೃಷ್ಣ ಸ್ವಾಮಿಯು ಅಳುತ್ತ "ನಾನು ಬೆಳಗಿನಿಂದ ಬರೆದುದೆಲ್ಲಾ ದಂಡ ವಾಯಿತು. ಮೇಷ್ಟರು ಹೊಡೆಯುತ್ತಾರೆ. ಈಗಾಗಲೇ ಒಂಬತ್ತು ಗಂಟೆ. ನಾನು ಆರು ಗಂಟೆಯಿಂದ ಮ್ಯಾಪು ಬರೆದಿದ್ದೆ" ಎಂದನು. ಭೀಮರಾಯರು ರಾಮಸ್ವಾಮಿಯನ್ನು ಕರೆದು "ಹೀಗೆ ಅವನ ಕೆಲಸವೆಲ್ಲಾ ದಂಡವಾಯಿ ತಲ್ಲಾ, ಅವನು ಏನುಮಾಡಬೇಕೋ ಈಗ? ಅವನಿಗೆ ಬದಲಾಗಿ ನೀನು ಏಟು ತಿನ್ನಬೇಕಾಗುತ್ತದೆ. ನಿನ್ನಿಂದ ನಿರ್ವಾಹವಿಲ್ಲ" ಎಂದರು. ರಾಮ ಸ್ವಾಮಿಯು "ಅವನು ಏಟು ತಿನ್ನುವುದೂ ಬೇಡ; ನಾನು ಏಟು ತಿನ್ನುವುದೂ ಬೇಡ; ನಾನು ಮ್ಯಾಪನ್ನು ಬರೆದುಕೊಡುತ್ತೇನೆ. ಅವನು ತೆಗೆದುಕೊಂಡುಹೋಗಲಿ" ಎಂದನು. ರಾಯರು, ವ್ಯಂಗ್ಯವಾಗಿ "ಹಾಗಾದರೆ ಯೋಚನೆಯೇ ಇಲ್ಲ. ಕಿಟ್ಟು! ನಿನಗೇನಪ್ಪ ಕಡಮೆ? ಇಂಥಾ ಬುದ್ಧಿವಂತನಾದ ಅಣ್ಣನಿದ್ದಾನೆ. ಮ್ಯಾಪು ಬರೆಸಿಕೊಂಡು ತೆಗೆದುಕೊಂಡು ಹೋಗು; ನಿಮ್ಮ ಮೇಷ್ಟರು ನಿನಗೇ ಎಲ್ಲರಿಗಿಂತ ಹೆಚ್ಚಾಗಿ ನಂಬರು ಕೊಡುತ್ತಾರೆ" ಎಂದರು.

ರಾಮಸ್ವಾಮಿಯು ಸೋಲಲಿಲ್ಲ. "ಮ್ಯಾಪು ಚನ್ನಾಗಿದ್ದರೆ ಅವನು ತೆಗೆದುಕೊಂಡು ಹೋಗಲಿ. ಇಲ್ಲದೆ ಹೋದರೆ, ನಾನೇ ಅವರ ಮೇಷ್ಟರ ಬಳಿಗೆ ಹೋಗಿ, ನಡೆದ ಸಂಗತಿಯನ್ನು ಹೇಳಿ, ಏಟುಕೊಟ್ಟರೆ ನನಗೆ ಕೊಡಬೇಕೇ ಹೊರತು ಕಿಟ್ಟುವಿಗಲ್ಲವೆಂದು ಹೇಳುತ್ತೇನೆ" ಎಂದು ಉತ್ತರ ಹೇಳಿದನು. ರಾಯರು "ಧರ್ಮರಾಯ ಇವನನ್ನೇ ಬದಲೀ ಇಟ್ಟು ರಜದಮೇಲೆ ಹೋಗಿದ್ದಾನೆ" ಎಂದುಕೊಂಡು ಅಡಿಗೆಯ ಮನೆಗೆ ಹೋದರು.

ರಾಮಸ್ವಾಮಿಯು ಅಟ್ಲಾಸನ್ನು ತೆಗೆದುಕೊಂಡು ಮ್ಯಾಪನ್ನು ಬರೆಯಲು ಸಿದ್ಧವಾದನು. ಕೃಷ್ಣಸ್ವಾಮಿಯು "ಸೀಮೆಯ ಎಣ್ಣೆ ಯನ್ನು ತರಲೆ?" ಎಂದನು. ರಾಮಸ್ವಾಮಿಯು "ಬೇಡ ಕಾಗದಕ್ಕೆ ಎಣ್ಣೆಯನ್ನೇಕೆ ಹಚ್ಚಬೇಕು? ಹಾಗೇ ಬರೆದುಕೊಡುತ್ತೇನೆ" ಎಂದು ಹೇಳಿದನು. ಕೃಷ್ಣಸ್ವಾಮಿಗೆ ಏನೋದ. ತಾನು ಕಾಗದಕ್ಕೆ ಎಣ್ಣೆಯನ್ನು ಸವರಿ ಅವಸರದಲ್ಲಿ ಬುಡ್ಡಿಯ ಮಸಿಯನ್ನು ಕೈಗೂ ಮುಖಕ್ಕೂ ಹಚ್ಚಿಕೊಂಡು ಬರೆದಿದ್ದೂ ಕೂಡ ಭೂಪಟವು ಚೆನ್ನಾಗಲಿಲ್ಲ. ಬರಿಯ

ಕಾಗದದಮೇಲೆ ಬರೆದರೆ ಅದು ಚೆನ್ನಾದೀತೇ ಎಂದು ಅವನಿಗೆ ನಗು. ಆದುದರಿಂದ, ಅವನು ರಾಮಸ್ವಾಮಿಯು ಬರೆಯುತ್ತಿದ್ದುದನ್ನೇ ಇಣಿಕಿ ಇಣಿಕಿ ನೋಡುತ್ತಿದ್ದನು. ರಾಮಸ್ವಾಮಿಯು "ಕೆಲಸವು ಪೂರ್ತಿಯಾಗುವವರೆಗೂ ನೀನು ನೋಡಕೂಡದು" ಎಂದನು. ಕೃಷ್ಣಸ್ವಾಮಿಯು—ಇನ್ನುಮುಂದೆ ನಾವು ಅವನನ್ನು ಕಿಟ್ಟು ಎಂದು ಕರೆಯೋಣ—"ಹಾಗೇ ಆಗಲಿ ನನಗೇನಂತೆ 'ಅಳಿಯನ ಕುರುಡು ಬೆಳಗಾದರೆ ತಿಳಿಯುತ್ತದೆ.' ನೀನು ಬರೆದ ಕಾಲಕ್ಕಲ್ಲವೆ! ನೀನು ಬರೆದಿಡು. ನಾನು ಗೋಪಾಲನ ಮನೆಗೆ ಹೋಗಿ ನನ್ನ ಪುಸ್ತಕವನ್ನು ತೆಗೆದುಕೊಂಡು ಬರುತ್ತೇನೆ. ನಂದು ಹೊಸ ಪುಸ್ತಕ. ಅವನು ಹಿಸಿದು ಓದಿಬಿಡುತ್ತಾನೆ. ಪಟ್ಟೇಸೀರೆ ಎರವು ಕೊಟ್ಟು ಮಣೆಹಿಡಿದು ತಿರುಗಬೇಕು" ಎಂದುಕೊಂಡು ಹೊರಟುಹೋದನು.

ರಾಮಸ್ವಾಮಿಗೆ ಕಿವಿಗಳಿದ್ದೂ ಆದೊಂದೂ ಕೇಳಿಸಲಿಲ್ಲ. ಅವನ ಜ್ಞಾನವೆಲ್ಲಾ ಭೂಪಟದಮೇಲಿದ್ದಿತು. ಅವನಿಗೆ ಚಿತ್ರವನ್ನು ಬರೆಯುವುದೆಂದರೆ ಹಸಿದ ಆನೆಗೆ ಕಬ್ಬಿನ ಜಲ್ಲೆಗಳು ಸಿಕ್ಕಿದಂತೆ. ಅವನು ಭೂಪಟವನ್ನು ಬರೆದು ಮುಗಿಸಿದನು. ಅದಕ್ಕೆ ಬಣ್ಣವನ್ನೂ ಹಾಕಿದನು. ದಾಳಿಂಬದ ಹೂವಿನ ರಸವೇ ಕೆಂಪು ಬಣ್ಣವಾಯಿತು. ಹಳದಿಯ ಬಣ್ಣಕ್ಕೆ ಅರಿಸಿನ; ಹಸಿರು ಬಣ್ಣಕ್ಕೆ ಹಸಿರುಮಸಿ. ಹಂಚಿಯ ಕಡ್ಡಿಗೆ ಹತ್ತಿಯನ್ನು ಸುತ್ತಿ ಅಂದವಾಗಿ ಬಣ್ಣವನ್ನು ಹಾಕಿ, ಅಚ್ಚಿನ ಅಕ್ಷರದಂತೆಯೇ ಅಕ್ಷರವನ್ನು ಬರೆದು, ಭೂಪಟವನ್ನು ಸಿದ್ಧಮಾಡಿದನು. ಆ ವೇಳೆಗೆ ಕಿಟ್ಟುವು "ಮ್ಯಾಪು ಮುಗಿಯಿತೆ?" ಎಂದುಕೊಂಡು ಓಡಿಬಂದನು; ಅಣ್ಣನ ಭೂಪಟವನ್ನು ನೋಡಿ "ಅಯ್ಯೋ! ಮ್ಯಾಪು ಬರೆಯುತ್ತೇನೆಂದು ಹೇಳಿ ಅಟ್ಲಾಸನ್ನು ಹರಿದಿಟ್ಟೆಯಾ?" ಎಂದನು. "ಮ್ಯಾಪು" ಅಷ್ಟು ಸೊಗಸಾಗಿದ್ದಿತು.

ನಿಜಸ್ಥಿತಿಯು ಗೊತ್ತಾದಮೇಲೆ ಕಿಟ್ಟುವು ಆನಂದದಿಂದ ಕುಣಿದಾಡಿದನು. ಅದನ್ನು ತೆಗೆದುಕೊಂಡುಹೋಗಿ ರಾಯರಿಗೆ ತೋರಿಸಿ "ಅಯ್ಯಾ! ಅಯ್ಯಾ! ರಾಮಸ್ವಾಮಿಯು ಮ್ಯಾಪು ಎಷ್ಟು ಚೆನ್ನಾಗಿ ಬರೆದಿದ್ದಾನೆ ನೋಡು" ಎಂದನು. ಅವರು ಉದಾಸೀನಭಾವದಿಂದ "ಉದ್ಧಾರ

ವಾಯಿತು. ನನಗೂ ಸ್ವರ್ಗಕ್ಕೂ ಉಳಿದಿರುವುದು ಒಂದೇ ಬೆರಳು'' ಎಂದರು. ಮದುವೆಯಾದ ಮೊದಲನೆಯ ವರುಷ, ಮಂಗಳಗೌರೀ ವ್ರತಕ್ಕೆ ಹುಡುಗಿಯರು ಪರಿಕರಗಳನ್ನು ಎಷ್ಟು ಸಡಗರದಿಂದ ಸಿದ್ಧಮಾಡಿಕೊಳ್ಳುತ್ತಾರೆ, ನೋಡಿದ್ದೀರಷ್ಟೆ. ಇಂದು ಕಿಟ್ಟುವು ಪಾಠಶಾಲೆಗೆ ಹೊರಡಲು ಅಷ್ಟು ಸಡಗರದಿಂದ ಸಿದ್ಧವಾದನು. ಭೂಪಟದ ಸೊಗಸು ಅವನನ್ನು ಹಾಗೆ ಕುಣಿಸಿತು.

ಅಂದು ಸಾಯಂಕಾಲ, ಕಿಟ್ಟುವು ಗಾಬರಿ ಗಾಬರಿಯಾಗಿ ಓಡಿಬಂದು ಭೀಮರಾಯರೊಡನೆ ''ಅಯ್ಯ! ಅಯ್ಯ! ಇವತ್ತು ನಮ್ಮ ಮೇಷ್ಟರು ಮ್ಯಾಪನ್ನು ಎಷ್ಟು ಹೊಗಳಿದರೋ ನೋಡು. ನಾನು ಮ್ಯಾಪನ್ನು ಬರೆದೆನೆಂದು ಹೇಳಿದೆ. ಮೇಷ್ಟರು ನಂಬಲಿಲ್ಲ. ಆಮೇಲೆ ನಿಜವನ್ನು ಹೇಳಿದೆ. ಮೇಷ್ಟರು ಸ್ವಲ್ಪ ಹೊತ್ತು ಬೆರಗಾಗಿ ಸುಮ್ಮನೆ ಕುಳಿತುಕೊಂಡುಬಿಟ್ಟರು. ಕಡೆಗೆ ನಿಮ್ಮಣ್ಣನು ಮುಂದೆ ಭಾರಿ ಚಿತ್ರಗಾರನಾಗುವ 'ನ್ಯೂಕ್ಲಿಯಸ್' ಇದೆ ಎಂದರು. 'ನ್ಯೂಕ್ಲಿಯಸ್' ಅಂದರೇನು?'' ಎಂದನು. ರಾಯರು ನಿಟ್ಟುಸಿರನ್ನು ಬಿಟ್ಟು ''ಚಿತ್ರಗಾರನಾದರೂ ಆಗಲಿ, ಗಾರೆಯವನಾದರೂ ಆಗಲಿ; ಕಿಟ್ಟು! ನೀನು ಮಾತ್ರ ಅವನ ಹಾಗೆ ಆಗಬೇಡ, ಕಂಡೆಯಾ?'' ಎಂದರು.

೨

ಭೀಮರಾಯರಿಗೆ ಬಹಳ ಕಾಯಿಲೆ. ವಿಷಮಸೀತಜ್ವರ. ಅವರು ನೆಲಕ್ಕೆ ತಲೆಯನ್ನೂರಿದುದು ಮೊದಲುಗೊಂಡು, ರಾಮಸ್ವಾಮಿಯು ಅವರ ಸೇವೆಗೆ ಆನುವಾದನು. ಅವನು ಯಾವಾಗಲೂ ಅವರ ಬಳಿಯಲ್ಲಿಯೇ ಕುಳಿತಿರುತ್ತಿದ್ದನು. ವಿದ್ಯಾರ್ಥಿಗಳಲ್ಲಿ ಅನೇಕರಿಗೆ ಸರಸ್ವತಿಯ ಹಬ್ಬವಾದ ಮೇಲೆ ನಾಲ್ಕು ದಿನಗಳೂ ಬಹಳ ಆನಂದ. ಏಕೆಂದರೆ, ದೊಡ್ಡವರೇನಾದರೂ ಓದಬೇಕೆಂದು ಅವರಿಗೆ ಹೇಳಿದರೆ, ರೈಲಿಗೆ ಟಿಕೀಟು ಕೊಡುವವರು ಚಿಲ್ಲರೆಯು ಇಲ್ಲವೆಂದು ಹೇಳುವ ಧ್ವನಿಯಲ್ಲಿ ''ಪುಸ್ತಕಗಳೇ ಇಲ್ಲವಲ್ಲಾ; ನಾನೇನು ಮಾಡಲಿ'' ಎಂದು ಹೇಳಿ ಆಟಗಳಾಡುತ್ತ ಇರಬಹುದು. ಸರಸ್ವತಿಯ ಹಬ್ಬವು ಬಾರದೆಯೇ, ರಾಮಸ್ವಾಮಿಗೆ ಓದಿನ ರಗಳೆಯು ತಪ್ಪಿತು. ಆದರೂ ಅವನಿಗೆ ಸಂತೋಷವಿಲ್ಲ. ತಂದೆಗೆ

ಕಾಯಿಲೆಯೆಂದು ವ್ಯಸನ. ಆದರೂ ಅವನು ತನ್ನ ಬೆಳಗಿನ ದಿನಚರಿಯನ್ನು ಬಿಡುತ್ತಿರಲಿಲ್ಲ.

ಅಣ್ಣತಮ್ಮಂದಿರ ದಿನಚರಿಯ ವಿಚಾರದಲ್ಲಿ ಒಂದೆರಡು ಮಾತು. ಕಿಟ್ಟುವು ಬೆಳಗಿನ ಜಾವ ಐದು ಗಂಟೆಗೆ ಎದ್ದು ಬಟ್ಟೆಯನ್ನು ತಲೆಗೆ ಮುಸುಕಿಟ್ಟು ಹೊದೆದುಕೊಂಡು, ಆಗಾಗ ಆಕಳಿಸಿ ತೂಕಡಿಸುತ್ತ ನಿರ್ವಾಹವಿಲ್ಲದೆ ಮಾಘ ಮಾಸದಲ್ಲಿ ತಣ್ಣೀರಿನ ಸ್ನಾನ ಮಾಡಿದಂತೆ, ಪರೀಕ್ಷೆಯು ಹತ್ತಿರವಾಯಿತೆಂದು ಪಾಠಗಳನ್ನು ಓದುತ್ತಿದ್ದನು. ರಾಮಸ್ವಾಮಿಯೂ ಅವನ ಜೊತೆಯಲ್ಲಿಯೇ ಏಳುವನು. ಆದರೆ ಧರ್ಮಾಂಬುಧಿ ಕೆರೆಯ ಬಳಿ ಓಡಿಹೋಗಿ ಬಯಲಿನಲ್ಲಿ ಪ್ರಕೃತಿ ಸೌಂದರ್ಯವನ್ನು ನೋಡಿ ಹಕ್ಕಿಯ ಜೊತೆಗೆ ತಾನೂ ಹಕ್ಕಿಯಾಗಿ ಕುಣಿದು, ದುಂಬಿಯ ಜೊತೆಗೆ ತಾನೂ ಝೇಂಕರಿಸಿ, ಅರಳಿದ ಮಲ್ಲಿಗೆಯಂತೆ ಮುಖದಲ್ಲಿ ಉಲ್ಲಾಸವನ್ನು ಬೀರುತ್ತ ಮನೆಗೆ ಬರುವನು. ಹಿತ್ತಿಲಿನಲ್ಲಿ ತಾನು ಹಾಕಿದ್ದ ಗಿಡಗಳನ್ನು ನೋಡಿ ಹಿಗ್ಗುವನು. ಗುಲಾಬಿಯ ಗಿಡದಲ್ಲಿ ಹಿಮಸಿಕ್ತವಾಗಿ ಸೊಂಪುಗೂಡಿ ಅರಳಿದ್ದ ಗುಲಾಬಿಯ ಹೂವನ್ನು ಗಿಡಕ್ಕೆ ನೋವಾಗದಂತೆ ಮೃದುವಾಗಿ ಕಿತ್ತು, ತಾಯಿಯ ಬಳಿಗೆ ಓಡಿಹೋಗಿ "ಅಮ್ಮ! ಅಮ್ಮ! ಈ ಹೂವು ನೋಡಿದೆಯಾ, ಹೇಗೆ ನಗುತ್ತದೆ? ಎಲ್ಲಿ ತಿರುಗು, ನಾನು ಬೆಳೆದ ಹೂವನ್ನು ನಾನೇ ನಿನಗೆ ಮುಡಿಸುತ್ತೇನೆ. ಮುಂದೆ ನೀನು ನಗುತ್ತಿರು, ಹಿಂದೆ ಅದು ನಗುತ್ತಿರಲಿ" ಎಂದು ಹೇಳಿ ಕುಣಿದಾಡುವನು. (ಇದೊಂದು ಮಾತ್ರ ಅವನಿಗೆ ಹನ್ನೆರಡು ವರುಷಗಳಾಗುವುದಕ್ಕಿಂತ ಮುಂಚಿನ ಮಾತು.) ರಮಾಬಾಯಮ್ಮನವರು ನಗುತ್ತಾ "ಸುಮ್ಮನೆ ಹೋಗೋ; ನನಗೆ ವಯಸ್ಸಾಗಿ, ತಲೆ ನರೆಯುತ್ತ ಬಂತು. ಬೆಳಗಾಗುತ್ತಲೇ ನನಗೇಕೋ ಅಲಂಕಾರ" ಎನ್ನುವರು. ರಾಮಸ್ವಾಮಿಯು "ತಲೆ ನರೆಯುತ್ತಾ ಬಂದರೂ ನೀನು ನಮ್ಮ ಅಮ್ಮನೆ" ಎಂದು ಹೇಳಿ ಹೂವನ್ನು ಮುಡಿಸಿ ಚಪ್ಪಾಳೆ ಹೊಡೆದುಕೊಂಡು ನಗುವನು. ಅವರು ಮಗನನ್ನು ಆದರದಿಂದ ಮುದ್ದಿಟ್ಟುಕೊಳ್ಳುವರು. ತಾಯಿಯ ಪ್ರೀತಿಯೇ ಪ್ರೀತಿ. ಆ ವೇಳೆಗೆ ಕಿಟ್ಟುವು ಬಂದು "ಕಾಫೀ ಆಗಿದೆಯೇ?" ಎಂದು ಕೇಳುವನು. ಅಂತು ತಾಯಿಯ ಬಳಿ ರಾಮಸ್ವಾಮಿಯ ಲಲ್ಲೆಯು ಒಂದೊಂದು ದಿನ ಒಂದೊಂದು ವಿಧ.

ಒಂದು ದಿನ ಅವನು ಕಿಟ್ಟುವನ್ನು ಕುರಿತು "ಕಿಟ್ಟು! ಪ್ರಾತಃಕಾಲ ಸಾಯಂಕಾಲಗಳೂ ಬಹಳ ಸೊಗಸೋ! ಮುಸುಕು ಹಾಕಿಕೊಂಡು ಓದಿ ಓದಿ ಮುಖವನ್ನು ಮಣ್ಣಿನ ಹಣತೆಯಂತೇಕೆ ಮಾಡಿಕೊಳ್ಳು ತ್ತೀಯೋ? ನನ್ನೊಡನೆ ಬಂದು ಬೆಳಗಿನ ಬೆಡಗನ್ನು ನೋಡೋ. ಅದಕ್ಕೆ ಸ್ಕೂಲು ಫೀಜು ಕೊಡಬೇಕಾಗಿಲ್ಲ. ಅದು ನಿನ್ನ ಪುಸ್ತಕದ ಹಾಗೆ ಹರಿದು ಹೋಗುವುದಿಲ್ಲ. ಹಳದಾಗುವುದಿಲ್ಲ. ಎಂದು ನೋಡಿದರೂ ಅಂದವೇ; ಯಾವಾಗಲೂ ಹೊಸದೇ. ನಾವು ನೋಡುವವರು ಹಳಬರಾಗಬೇಕು; ಅಷ್ಟೇ ಹೊರತು ಅದೇನೋ ಹೊಸದೇ. ಆಗತಾನೆ ಹುಟ್ಟುತ್ತಿರುವ ಸೂರ್ಯನನ್ನು ನೋಡಿದರೆ ಸಾಕು. ಅವನ ಕೆಂಪು ಬೆಳಕಿನಿಂದ, ಕರಗಿದ ಚಿನ್ನದಲ್ಲಿ ಅದ್ದಿದಂತೆ ಥಳಥಳಿಸುತ್ತಿರುವ ಮೋಡವನ್ನು ನೋಡಿದರೆ ಸಾಕು. ನೀನು ಓದುವ ಗೂಡಿಗರೂ ಸಂಗೆ ಬೇಡ, ನಿನ್ನ ಗಂಧದ ಸಾಮಾನೂ ಬೇಡ, ಸೊರಬದ ತಂಟೆಯೂ ಬೇಡ, ನೋಡುವ ಸೊಗಸನ್ನು ಬಿಟ್ಟು, ನೋಡದ ಸೊರಬವೇಕೋ?" ಎಂದು ಹೇಳಿದನು. ಕಿಟ್ಟುವು ವ್ಯಂಗ್ಯವಾಗಿ "ಅದಕ್ಕೋಸ್ಕರವೇ ರಾಯರಿಗೆ ಪ್ರತಿದಿನವೂ ಮರ್ಯಾದೆಯಾಗುತ್ತಿರು ವುದು. ನನಗೆ ಅದೊಂದೂ ಬೇಡ" ಎಂದು ಹೇಳಿ ನಗುತ್ತ ಹೊರಟು ಹೋದನು. ಆಗಾಗ ಹೀಗೆ ವಿವಾದವು ನಡೆಯುತ್ತಲೇ ಇರುವುದು.

ಭೀಮರಾಯರಿಗೆ ಕಾಯಿಲೆಯಾದಾಗಿನಿಂದ ಈ ವಿನೋದವೂ ನಗುವೂ ಮರೆಯಾದುವು. ಪ್ರಕೃತ ಭೀಮರಾಯರಿಗೆ ರಾತ್ರಿಯ ವೇಳೆ ನಿದ್ರೆಯು ಬರುತ್ತಿರಲಿಲ್ಲ; ಜ್ವರದ ತಾಪ; ಬೆಳಕು ಹರಿಯುವ ವೇಳೆಗೆ ಸ್ವಲ್ಪ ನಿದ್ರೆಯು ಹತ್ತುತ್ತಿದ್ದಿತು. ಆ ಸಮಯದಲ್ಲಿ ರಾಮಸ್ವಾಮಿಯು ಪಂಜರ ದಿಂದ ಹೊರಬಿದ್ದ ಗಿಳಿಯ ಹಾಗೆ ಹಾರಿಹೋಗಿ, ತನ್ನ ಬೆಳಗಿನ ದಿನಚರಿ ಯನ್ನು ಮುಗಿಸಿಕೊಂಡು ಬರುತ್ತಿದ್ದನು.

ಕಿಟ್ಟು ತಂದೆಗೆ ಎಚ್ಚರವಾಗುವ ವೇಳೆಗೆ ಅವರ ಕೋಣೆಗೆ ಬಂದು ರೋಗವು ಹೇಗಿದ್ದಿತೆಂಬುದನ್ನು ವಿಚಾರಿಸಿಕೊಂಡು ಪಾಠವನ್ನು ಓದಲು ಹೊರಟುಹೋಗುವನು; ಹೋಗುತ ಹೋಗುತ "ಬೇಗ ವಾಸಿಯಾಗು ತ್ತದೆ" ಎಂದುಕೊಂಡು ಹೋಗುವನು. ರಾಮಸ್ವಾಮಿಯೇನೋ

"ದೇವರೇ ಇನ್ನೂ ವಾಸಿಯಾಗಲಿಲ್ಲವೇ! ಎಂದಿಗಪ್ಪಾ ಅಯ್ಯ ಸರಿಯಾಗಿ ಎದ್ದು ಓಡಾಡುವುದು?" ಎನ್ನುವನು.

ರಾಮಸ್ವಾಮಿಯು ಹಗಲಿರುಳೂ ತಮ್ಮನನ್ನು ಸೇವಿಸುತ್ತಿದ್ದುದನ್ನೂ ಕಿಟ್ಟುವು ಓದಿನ ಅವಾಂತರದಿಂದ, ತಮ್ಮ ಬಳಿಗೆ ಹೆಚ್ಚಾಗಿ ಬಾರದೆ ಇದ್ದುದನ್ನೂ ನೋಡಿ ನೋಡಿ, ಭೀಮರಾಯರ ಮನಸ್ಸು ಏನೋ ಒಂದು ವಿಧವಾಗಿ ಹೋಯಿತು. ಅವರು "ಓದಿಲ್ಲದೆ ಇದ್ದರೆ ಕೊಳ್ಳೆಹೋದುದೇನು! ರಾಮಸ್ವಾಮಿ ಎಷ್ಟು ಒಳ್ಳೆಯ ಹುಡುಗ. ನನ್ನಲ್ಲಿ ಎಷ್ಟು ಪ್ರೀತಿ. ನಾನು ಅವನನ್ನು ಸರಿಯಾಗಿ ಪ್ರೀತಿಸಲಿಲ್ಲವಲ್ಲಾ! ಇನ್ನು ಮೇಲಾದರೂ ಸರಿಯಾಗಿ ಆದರಿಸಬೇಕು" ಎಂದುಕೊಳ್ಳುವರು.

ಒಂದು ದಿನ ರಾತ್ರಿಯಂತು, ಅವರ ಮನಸ್ಸು ಕರಗಿ ನೀರಾಗಿ ಹೋಯಿತು. ಅದಕ್ಕೆ ಕಾರಣವನ್ನು ಹೇಳುತ್ತೇನೆ. ಕಿಟ್ಟುವಿಗೆ ಪರೀಕ್ಷೆ ಮೊದಲಾಗಿದ್ದಿತು. ಮರುದಿನವೇ ಪರೀಕ್ಷೆಯ ಕೊನೆಯ ದಿನ. ಅಂದು ಭೂಗೋಳದಲ್ಲಿ ಪರೀಕ್ಷೆ. ಒಟ್ಟು ನಂಬರನ್ನೆಲ್ಲಾ ಗುಡ್ಡೆ ಹಾಕಿಕೊಂಡು, "ಮೇಷ್ಟರನ್ನು ಬೆರಗು ಮಾಡಬೇಕೆಂದು" ಕಿಟ್ಟುವಿಗೆ ಹಠ. ಅವನು ನಿದ್ರೆ ಬಾರದಿರಲು ಜೋರಾಗಿ ನಾಲ್ಕು ಬಟ್ಟಲು ಟೀ ಕುಡಿದು ಕುಳಿತು, ಬೆಳಗೂ ಓದಿಬಿಡಬೇಕೆಂದು ಸಂಕಲ್ಪ ಮಾಡಿದ್ದನು. ಅವನು ಗಟ್ಟಿಯಾಗಿ ಓದುತ್ತ "ಕಾಂದಹಾರ ಇಂಡಿಯಾ ದೇಶದ ಬೀಗದ ಕೈ; ಕಾಂದಹಾರ ಇಂಡಿಯಾ ದೇಶದ ಬೀಗದ ಕೈ; ಕಾಂದಹಾರ ಇಂಡಿಯಾ ದೇಶದ ಬೀಗದ ಕೈ" ಎಂದು ಹೇಳುತ್ತಿದ್ದನು. ರಾಮಸ್ವಾಮಿಯು "ಅಯ್ಯನಿಗೆ ಆಯಾಸವಾಗುತ್ತದೆ, ಮೆಲ್ಲಗೆ ಓದಿಕೊಳ್ಳೋ; ಮನೆಯ ಬೀಗದ ಕೈಯೇ ಮೂಲೆಯಲ್ಲಿ ಮಲಗಿದೆ; ಇಂಡಿಯಾ ದೇಶದ ಬೀಗದ ಕೈಗೆ ಅಳುತ್ತಾನೆ. ಅಯ್ಯೋ! ರಾಮ!" ಎಂದನು.

ಅಣ್ಣ ತಮ್ಮಂದಿರಿಗೆ ವಾಕ್ಯಾರ್ಥಗಳು ನಡೆದುವು. ಕಿಟ್ಟುವು ಸೋತು ಮೆಲ್ಲಗೆ ಓದಲಾರಂಭಿಸಿದನು; ತಪ್ಪು ಮಾತು ಹೇಳಿ ಎದುರು ಕಡೆಯ ಲಾಯರ ಹೊಡೆತಕ್ಕೆ ಸಿಕ್ಕಿದ ಸಾಕ್ಷಿಯ ಹಾಗೆ, ಅವನ ಧ್ವನಿಯು ಕುಗ್ಗಿ ಹೋಯಿತು. ಭೀಮರಾಯರ ಮನಸ್ಸು ಏನೋ ಒಂದು ವಿಧವಾಯಿತು.

ರಮಾಬಾಯಮ್ಮನವರೂ ರಾಮುಸ್ವಾಮಿಯ ಪರವಾಗಿ ಮಾತು ಜೋಡಿಸಿದರು. ಇನ್ನು ಹೇಳಬೇಕಾದುದೇನು? ಆದರೂ ರೋಗವು ವಾಸಿಯಾಗುತ್ತ ಬಂದಹಾಗೆಲ್ಲಾ, ಹಿಂದಿನ ರೀತಿಯೇ ಮತ್ತೆ ನೆಲೆಗಟ್ಟುತ್ತ ಬಂದಿತು. ಆದರೂ ಪೂರ್ತಿಯಾಗಿ ಹಾಗಾಗಲಿಲ್ಲ.

ಏನಾದರೂ ಮಾಡಿ, ರಾಮುಸ್ವಾಮಿಯ ತಲೆಗೆ ವಿದ್ಯೆಯನ್ನು ತುಂಬಬೇಕೆಂದು ಭೀಮರಾಯರಿಗೆ ಅಭಿಲಾಷೆಯು ಹುಟ್ಟಿತು. ಕೊನೆಗೆ "ಮನೆ ಪಾಠದ ಮೇಷ್ಟರನ್ನಿಡಬೇಕೆಂದು" ಯೋಚಿಸಿದರು. ಅದಕ್ಕೆ ತಕ್ಕಂತೆ ರಮಾಬಾಯಮ್ಮನವರು "ಹಾಗಾದರೂ ಮಾಡಿ. ಪ್ರಪಂಚದಲ್ಲಿ ಬುದ್ಧಿವಂತರೂ ಇರುತ್ತಾರೆ, ದಡ್ಡರೂ ಇರುತ್ತಾರೆ. ಐದು ಬೆರಳೂ ಒಂದೇ ಸಮವೆ? ನಮ್ಮ ಕರುಳನ್ನು ನಾವೇ ತಿವಿದುಕೊಂಡರೆ, ಕರುಣದಿಂದ ಕಣ್ಣೀರು ಸುರಿಸುವರು ಯಾರು? ನೀವು ಮೊನ್ನೆ ಮೊನ್ನೆ ಕಣ್ಣಿಗೆ ಕನ್ನಡಕವನ್ನು ತಂದಾಗ್ಗೆ, ಡಾಕ್ಟರು ಎಡಗಣ್ಣಿಗಿಂತ ಬಲಗಣ್ಣು ದುರ್ಬಲವಾಗಿದೆ, ಅಂದರಲ್ಲಾ. ಒಂದೇ ದೇಹದಲ್ಲಿ ಹೀಗೇಕಾಯಿತು? ಕನ್ನಡಕದ ಗಾಜು ಸರಿಯಾದ್ದು ಜೋಡಿಸಿದ್ದರಿಂದ, ಎರಡು ಕಣ್ಣೂ ಸಮವಾಗಿ ಕಾಣುತ್ತೋ ಇಲ್ಲವೋ? ನಮ್ಮ ಹುಡುಗರ ಮಾತೂ ಹಾಗೆ. ಪಾಠವನ್ನು ಹೇಳಿಸಿಬಿಟ್ಟರೆ ರಾಮುಸ್ವಾಮಿಯು ಸರಿಹೋಗುತ್ತಾನೆ" ಎಂದರು.

**ಭೀಮರಾಯರು.**—"ಅದೇನೋ ಸರಿ. ಆದರೆ ಸಂಪಾದನೆಯ ಕಾಲ ಕಳೆದುಹೋಯಿತು. ಈಗ ದುಡ್ಡು ಕೊಡಬೇಕಾದರೆ ಕಷ್ಟವಾಗುವುದಿಲ್ಲವೆ?"

**ರಮಾಬಾಯಮ್ಮನವರು.**—"ಸರಿ. ಚೆನ್ನಾಗಿ ಹೇಳುತ್ತೀರಿ ಅಂದರೆ! ಹೆಂಡತಿ ಮಕ್ಕಳಿಗಲ್ಲದೆ ಆ ಹಾಳು ದುಡ್ಡೇತಕ್ಕೆ? ನಿಮಗೆ ದೇವರು ಕಡಮೆ ಮಾಡಿರುವುದೇನು?"

**ಭೀಮರಾಯರು.**—"ಕಡಮೆಯೇನೋ ಮಾಡಿಲ್ಲ. ಆದರೂ ಹಿಂದಿನ ಕೆಲಸದ ಭರಾಟೆ ಈಗಿಲ್ಲ. ಈಗ ಒಂದೊಂದು ರೂಪಾಯಿಗೂ ತುಂಬ ಬೆಲೆ."

ಹೆಂಗಸು ಎಷ್ಟಾದರೂ ಶಕ್ತಿಯ ಅಂಶ. ರಮಾಬಾಯಮ್ಮನವರ ವಾದವೇ ಗೆದ್ದಿತು. ರಾಮುಸ್ವಾಮಿಗೆ ಮನೆಯ ಮೇಷ್ಟರನ್ನಿಟ್ಟುದಾಯಿತು.

ಮೇಷ್ಟರ ಹೆಸರು ನಾರಾಯಣಸ್ವಾಮಯ್ಯಂಗಾರ್. ಆತನನ್ನು ನಾರಾಯಣಸ್ವಾಮಿಯೆಂದು ಕರೆಯುತ್ತಿದ್ದರು. ಅವನು ಪಾಠ ಹೇಳ ಲಾರಂಭಿಸಿದ ಇಪ್ಪತ್ತು ದಿನಕ್ಕೆಲ್ಲ ರಾಮಸ್ವಾಮಿಯು ಅರವ ಮಾತನ್ನು ಕಲಿತನು. ಇದೊಂದು ಹೊರತು ಉಳಿದುದೆಲ್ಲ ಯಥಾಸ್ಥಿತಿ. ಒಂದು ಭಾನುವಾರ, ನಾರಾಯಣಸ್ವಾಮಿಯು ಬೇಗ ಪಾಠವನ್ನು ಮುಗಿಸಿ ಕೊಂಡು ಬರಬೇಕೆಂದು ಮಧ್ಯಾಹ್ನ ಮೂರು ಗಂಟೆಗೇ ಭೀಮರಾಯರ ಮನೆಗೆ ಹೋದನು. ರಾಯರು "ಟೀ" ತೆಗೆದುಕೊಳ್ಳುವ ಹೊತ್ತು; ತನಗೂ ಸ್ವಲ್ಪ ಸಿಕ್ಕೀತೆಂಬ ಆಶೆ. ಅವನು ಮನೆಗೆ ಬರುತ್ತಲು ರಾಮ ಸ್ವಾಮಿಯು "ಮೇಷ್ಟ್ರೇ! ನಾನು ಇವೊತ್ತು ಒಂದು ಗುಲಾಬಿ ಹೂವಿನ ಚಿತ್ರವನ್ನು ಬರೆದಿದ್ದೇನೆ. ಅದು ಎಷ್ಟು ಚೆನ್ನಾಗಿದೆಯೋ ನೋಡಿ" ಎಂದು ಹೇಳಿ ಹೊಟ್ಟೆಯ ತುಂಬ ಹಾಲು ಕುಡಿದು ಚಂಗನೆ ಹಾರಾಡುವ ಎಳಗರುವಿನಂತೆ ಕುಣಿಕುಣಿದು ಹೂವಿನ ಚಿತ್ರವನ್ನು ತಂದು, ನಾರಾಯಣ ಸ್ವಾಮಿಯ ಮುಂದಿಟ್ಟನು.

ಚಿತ್ರದ ಸೊಬಗನ್ನು ನೋಡಿ ನಾರಾಯಣಸ್ವಾಮಿಯು ಅಚ್ಚರಿ ಗೊಂಡು, "ರಾಮಸ್ವಾಮಿ! ಯಾವುದನ್ನಾದರೂ ಬಿಡು; ನೀನು ಚಿತ್ರ ವನ್ನು ಬರೆಯುವುದನ್ನು ಮಾತ್ರ ಬಿಡಬೇಡ, ಒಂದಿಲ್ಲದಿದ್ದರೆ ಮತ್ತೊಂದು ದಿನ ನೀನು ರವಿವರ್ಮರಿಗೆ ಸಮಾನವಾಗುತ್ತೀ. ಆದರೆ, ಚೆನ್ನಾಗಿ ಅಭ್ಯಾಸ ಮಾಡಬೇಕು. ನಾನು ನಿನಗೆ ಇದನ್ನೆಲ್ಲಾ ಹೇಳುತ್ತಲೇ ಇದ್ದೇನೆ" ಎಂದನು. ರಾಮಸ್ವಾಮಿಯು ಅಲೆಗಳ ಮಧ್ಯದಲ್ಲಿ ನೊರೆಯು ಉಬ್ಬಿದಂತೆ ಉಬ್ಬಿ ಹೋದನು; ಆಗ ಅವನ ಮನಸ್ಸಿಗೆ ತಾನು ಆಕಸ್ಮಿಕವಾಗಿ ಒಂದು ಗೇಣು ಎತ್ತರ ಬೆಳೆದ ಹಾಗೆ ತೋರಿತು. ಆ ಬಳಿಕ ಪಾಠಕ್ಕೆ ಆರಂಭವಾಯಿತು. ಹುಡುಗನಿಗೆ ಬರಲಿಲ್ಲ. "ಮೇಷ್ಟರಿಗೆ" ಮರೆಯಲಿಲ್ಲ. ಅಂತು ಬರಲು ಸಂತೆಯೇನೋ ತಪ್ಪಿಲ್ಲ. ಅಷ್ಟರಲ್ಲಿ ರಾಮಸ್ವಾಮಿಯ ತರಗತಿಯ (ಸ್ಕೂಲಿನ) "ಮೇಷ್ಟರು" ಬಂದರು. ಮೂಲ ವಿಗ್ರಹವೂ ಉತ್ಸವ ವಿಗ್ರಹವೂ ಎರಡೂ ಸೇರಿದಂತಾಯಿತು. ಅವರು ಭೀಮರಾಯರ ದೂರದ ಬಳಗ; ಭೀಮರಾಯರು ಅವರೇ ರಾಮಸ್ವಾಮಿಗೆ ಮನೆಯಲ್ಲಿ ಪಾಠ ಹೇಳಬೇಕೆಂದು ಕೇಳಿದ್ದರು. ಆದರೆ ಅವರಿಗೆ ಉಚಿತವಾಗಿ ಪಾಠ ಹೇಳಲು

ಬಿಗುವಮಾನ. ದುಡ್ಡನ್ನು ಕೇಳಲು ಹೀನಾಯ. ಅದು ಹಿಂದಿನ ಮಾತು. ಇದು ಹಾಗಿರಲಿ. ರಾಯರಿಗೂ ಮೇಷ್ಟರಿಗೂ ಮಾತುಕಥೆಗಳು ನಡೆದುವು. ಆ ಬಳಿಕ ರಾಯರು ಮೇಷ್ಟರನ್ನು ಕುರಿತು "ಏನಪ್ಪಾ! ಅಪರೂಪವಾಗಿ ಬಂದೆ?" ಎಂದರು. ಅವರು "ಅಪರೂಪವೂ ಇಲ್ಲ; ಒಂದೂ ಇಲ್ಲ; ಸುಮ್ಮನೆ ಬಂದೆ. ನಿಮ್ಮ ರಾಮುಸ್ವಾಮಿ ಪರೀಕ್ಷೆಯಲ್ಲಿ ಬಹಳ ಚೆನ್ನಾಗಿ ಉತ್ತರವನ್ನು ಬರೆದಿದ್ದಾನೆ. ಬೇಕಾದ ಹಾಗೆ ನಂಬರು ಬಂದಿದೆ" ಎಂದು ಹೇಳಿದರು.

**ಭೀಮರಾಯರು.**—"ದೇವರೆ! ಅಷ್ಟುಮಟ್ಟಿಗಾಯಿತೆ? ಪರವಾಯಿಲ್ಲ. ಹುಡುಗನಿಗೆ ಪಾಠ ಹೇಳಿಸಿದುದು ಸಾರ್ಥಕವಾಯಿತು" ಎಂದರು. (ರಮಾಬಾಯಮ್ಮನವರು ಮರೆಯಲ್ಲಿ ನಿಂತು "ನಾನು ಅದಕ್ಕೇ ಹೇಳಿದ್ದು" ಎಂದರು.)

ನಾರಾಯಣಸ್ವಾಮಿಯು ಬಹಳ ಸಂತೋಷದಿಂದ "ನಾನೂ ಬಹಳ ಕಷ್ಟಪಟ್ಟು ಪಾಠ ಹೇಳುತ್ತಿದ್ದೇನೆ" ಎಂದನು. ಮುಂದಿನ ತಿಂಗಳಿಂದ ಇನ್ನೂ ಒಂದೆರಡು ರೂಪಾಯಿಗಳನ್ನು ಹೆಚ್ಚಾಗಿ ಕೇಳಬೇಕೆಂದು ಅವನು ಮನಸ್ಸಿನಲ್ಲೇ ಮಂಡಿಗೆಗೆ ಆರಂಭಿಸಿದನು.

**ಮೇಷ್ಟರು.**—"ರಾಮುಸ್ವಾಮಿಗೆ ಅರವವು ಬೇರೇ ಬರುತ್ತದೆ. ಅವನು ಅದರ ಜ್ಞಾನವನ್ನೂ ತೋರ್ಪಡಿಸಿಕೊಂಡಿದ್ದಾನೆ."

**ಭೀಮರಾಯರು.**—"ಮತ್ತೂ ಸೊಗಸಾಯಿತು, ಎರಡು ಭಾಷೆಯಲ್ಲೂ ಪರಿಶ್ರಮವನ್ನು ತೋರಿಸಿದ್ದಾನೆಯೆ? ಅವನು ಅರವ ಮಾತನ್ನು ಕಲಿತಿದ್ದಾನೆ. ಅದೂ ಮನೆಯ ಮೇಷ್ಟರೊಡನೆ ಮಾತನಾಡಿ ಕಲಿತದ್ದು."

ಪುರೋಹಿತರು ಯುಗಾದಿ ಹಬ್ಬದ ದಿನ ಪಂಚಾಂಗ ಶ್ರವಣಕ್ಕೆ ಪಂಚಾಂಗವನ್ನು ತೆಗೆಯುವಹಾಗೆ ಮೇಷ್ಟರು ಕಾಗದದ ಕಟ್ಟನ್ನು ತೆಗೆದು "ಇದು ಗಣಿತದ ಪೇಪರು; ರಾಮುಸ್ವಾಮಿಯು ಇದರಲ್ಲಿ ಬಹಳ ಚೆನ್ನಾಗಿ ಉತ್ತರ ಬರೆದಿದ್ದಾನೆ. (ರಾಮುಸ್ವಾಮಿಯು ಮನೆಯಿಂದ ಹೊರಗೆ ಓಡಿ ಹೋದನು.) ಇತರ ಪೇಪರುಗಳಲ್ಲೂ ಹೀಗೆಯೇ ಬರೆದಿದ್ದಾನೆ. ಈ ಸಾರಿ ಕೊಟ್ಟಿದ್ದುದು ಎಂಟು ಲೆಕ್ಕ. ಒಂದಕ್ಕೆ ಉತ್ತರ 'ಬರದಿಲ್ಲೆ,' ಮತ್ತೊಂದಕ್ಕೆ ರಾಮುಸ್ವಾಮಿಯ ಉತ್ತರ 'ಬರದಿಲ್ಲಪ್ಪಾ,' ಮಗದೊಂದಕ್ಕೆ 'ಬರದಿಲ್ಲಪ್ಪಾ

ಒರದಿಲ್ಲೆ,' ನಾಲ್ಕನೆಯುದಕ್ಕೆ 'ಒರದಿಲ್ಲಯ್ಯಾ ಒರದಿಲ್ಲೆ,' ಮತ್ತೊಂದಕ್ಕೆ 'ಪೆರುಮಾಳ್ ಆಣೆಗೂ ಒರದಿಲ್ಲೆಯಪ್ಪಾ?' ಆರನೆಯುದಕ್ಕೆ 'ಖಂಡಿತಮಾ ಒರದಿಲ್ಲೆಯೇ ನಾ ಯೆನ್ನಪಂಣುಟಂ?' ಉಳಿದ ಎರಡು ಲೆಕ್ಕಗಳನ್ನು ಮಾಡಿದ್ದಾನೆ. ಆದರೆ ಉತ್ತರವು ತಪ್ಪು. ನಂಬರು ಸೊನ್ನೆ. ಅಲ್ಲಿಗೆ ಉತ್ತರವು ಪೂರೈಸಿತು. ಭೂಗೋಳದಲ್ಲಿ 'ಕಿಂಬರ್ಲಿ. ಇದು ಹಿಮ ವತ್ಪರ್ವತದ ತಪ್ಪಲಿನಲ್ಲಿ ಸಮಭಾಜಕ ವೃತ್ತದ ಗೆರೆಯಮೇಲಿದೆ. ಅಲ್ಲಿನ ಗಣಿಯಲ್ಲಿ ಕಲ್ಲಿದ್ದಲು ವಿಶೇಷವಾಗಿ ಸಿಕ್ಕುತ್ತದೆ' ಎಂದು ಮುಂತಾಗಿ ಬರೆದಿದ್ದಾನೆ. ಚರಿತ್ರೆಯಲ್ಲಿ 'ಪೃಥ್ವೀರಾಜನು ಯಾವಾಗ, ಎಲ್ಲಿ, ಹೇಗೆ ಸತ್ತ!' ಎಂದು ಕೇಳಿದ್ದರೆ, 'ಪೃಥ್ವೀರಾಜನು ಹಗಲು, ಅಥವಾ ರಾತ್ರಿ, ತಪ್ಪಿದರೆ ಬೆಳಗಿನ ಜಾವದಲ್ಲಿ ಸತ್ತಿರಬೇಕು. ಅವನು ರಾಜ, ಯುದ್ಧ ರಂಗದಲ್ಲಿ ಸತ್ತ, ಎಲ್ಲರಂತೆಯೇ ಅವನೂ ಬಹಳವಾಗಿ ಕೊರಗಿ ಸಂಕಟ ದಿಂದ ಸತ್ತ' ಎಂದು ಬರೆದಿದ್ದಾನೆ.''

ಅದನ್ನು ಕೇಳಿ ಎಲ್ಲರೂ ಕಲ್ಲಿನ ಬೊಂಬೆಗಳಂತೆ ಕುಳಿತರು. ನಾರಾಯಣಸ್ವಾಮಿಯ ಮಂಡಿಗೆಗಳು ಮಾಡಿದೆಡೆಯೇ ಮುರಿದು ಬಿದ್ದುವು. ಮುಂದೆ ನಡೆದ ಹಗರಣವು ನಮಗೆ ಬೇಡ.

ಸ್ವಲ್ಪ ಕಾಲವು ಕಳೆಯಿತು; ರಾಮಸ್ವಾಮಿಯು ಎಂದಿನಂತೆಯೇ ಇದ್ದನು. ''ಹೇಗೂ ಮೇಷ್ಟರಿದ್ದಾರೆ; ಮನೆಯಲ್ಲಿ ಹೇಳಿಕೊಡುತ್ತಾರೆ'' ಎಂದುಕೊಂಡು ಅವನು ಪಾಠಶಾಲೆಯಲ್ಲಿ ಮೊದಲನಷ್ಟು ಮಟ್ಟಿಗೂ ಗಮನಕೊಟ್ಟು ಕೇಳುವುದನ್ನು ಬಿಟ್ಟುಬಿಟ್ಟನು. ಭೀಮರಾಯರು ಮನೆಯ ಮೇಷ್ಟರಿಂದ ಪ್ರಯೋಜನವಿಲ್ಲವೆಂದು ತಿಳಿದು, ಅವನನ್ನು ಬಿಡಿಸಿಬಿಡ ಬೇಕೆಂದಿದ್ದರು.

ಹಾಗೆ ಮಾಡಲು ಕಾರಣವೂ ಸಿಕ್ಕಿತು. ಒಂದು ದಿನ ರಾಮ ಸ್ವಾಮಿಯು ಮೇಷ್ಟರನ್ನು ಕುರಿತು ''ನಮ್ಮ ಅಯ್ಯನ ಚಿತ್ರವನ್ನು ಬರೆದಿದ್ದೇನೆ. ಅವರು ಕ್ಷೌರಮಾಡಿಸಿಕೊಳ್ಳುತ್ತಾ ಕೂತಿದ್ದಾಗ, ಅವರನ್ನು ನೋಡಿ ಬರೆದಿಟ್ಟಿದ್ದೇನೆ'' ಎಂದು ಹೇಳಿ ಚಿತ್ರವನ್ನು ತೆಗೆದು ತೋರಿ ಸಿದನು. ಚಿತ್ರದಲ್ಲಿ ರಾಯರು ತಲೆಯನ್ನು ಕೆದರಿಕೊಂಡು, ಜನಿವಾರ

ವನ್ನು ನಿವೀತಿಹಾಕಿಕೊಂಡು ಕುಳಿತಿದ್ದಹಾಗೆ ಬರೆದಿತ್ತು. ನಾರಾಯಣ ಸ್ವಾಮಿಯು "ಚಿತ್ರವು ಸೊಗಸಾಗಿದೆ" ಎನ್ನುವ ವೇಳೆಗೂ ರಾಯರು "ಅದೇನು? ಅದೇನು?" ಎಂದು ಅಲ್ಲಿಗೆ ಬರುವ ವೇಳೆಗೂ ಸರಿ ಹೋಯಿತು. ಸಂಗತಿಯು ಅವರಿಗೆ ತಿಳಿಯಿತು. ಹುಡುಗನೂ ಮೇಷ್ಟರೂ ಸೇರಿ ತಮ್ಮನ್ನು ಹಾಸ್ಯಮಾಡಲು ಹಾಗೆ ಬರೆದಿದ್ದಾರೆಂದು ಅವರು ಕೋಪಗೊಂಡರು. ಅತ್ತೆಯ ಮೇಲಿನ ಕೋಪ, ಕೊತ್ತಿಯ ಮೇಲೆ; ಕೆಂಡೇ ಇದೆ. ರಾಮುಸ್ವಾಮಿಗೆ ಚೆನ್ನಾಗಿ ಏಟುಗಳು ಬಿದ್ದುವು. ಆ ಬಳಿಕ ಸುಂಟರಗಾಳಿಯು ಒಂದು ಕಡೆಯಿಂದ ಮತ್ತೊಂದು ಕಡೆಗೆ ತಿರುಗುವಂತೆ, ಅವರು ನಾರಾಯಣಸ್ವಾಮಿಯ ಮೇಲೆ ರೇಗಿ "ಇದೇನೋ ನೀನು ಈ ಪೋರನಿಗೆ ಹೇಳಿಕೊಡುವುದು! ಇಬ್ಬರೂ ಸರಿ. ಇನ್ನು ಮೇಲೆ ಈ ಕಡೆ ಸುಳಿಯಬೇಡ. ಚೆನ್ನಾಗಿ ಪಾಠ ಹೇಳಿದೆ. ಚೆನ್ನಾಗಿ ತರಬೇತು ಮಾಡಿದ್ದೀಯೆ" ಎಂದು ಗದರಿಸಿದರು. "ಮನೆಯ ಪಾಠವು" ಅಂದಿಗೆ ಮುಗಿಯಿತು.

೩

ಒಂದು ದಿನ ಭೀಮರಾಯರ ಮನೆಗೆ ಕೆಲವರು ನೆಂಟರು ಬಂದಿದ್ದರು. ಗದ್ದಲವೋ ಗದ್ದಲ. ಭೀಮರಾಯರಿಗೆ ಬಹಳ ಓಡಾಟ; ಈಗ ಹೇಳಿದುದು ಇನ್ನೊಂದು ಗಳಿಗೆಗೆ ಮರೆತುಬಿಡುವರು; ಎಲ್ಲರ ಮೇಲೂ ಹಾರಾಡು ವರು. ರಾಯರು ನೂರು ರೂಪಾಯಿನ ಒಂದು ಹೊಸ ನೋಟನ್ನು ಹಿಡಿದುಕೊಂಡಿದ್ದರು. ರಾಮುಸ್ವಾಮಿಗೆ ಅದನ್ನು ನೋಡಲು ಆಸೆ ಯಾಯಿತು. ಅದನ್ನು ತೆಗೆದುಕೊಂಡು ಸ್ವಲ್ಪ ಹೊತ್ತು ನೋಡುತ್ತಿದ್ದು ಕೊನೆಗೆ ತಂದೆಯ ಕೈಗೆ ಕೊಟ್ಟನು. ಇದು ನಡೆದುದು ಬೆಳಗ್ಗೆ ೧೦ ಗಂಟೆ ಯಲ್ಲಿ. ಮಧ್ಯಾಹ್ನ ಭೀಮರಾಯರು ನೋಟನ್ನು ಜ್ಞಾಪಿಸಿಕೊಂಡರು; "ರಾಮುಸ್ವಾಮಿ, ನೋಟು ಜೋಪಾನವಾಗಿಟ್ಟೆಯಾ? ಎಲ್ಲಿ, ಅದನ್ನು ತಂದುಕೊಡು" ಎಂದರು. ರಾಮುಸ್ವಾಮಿಯು "ನೋಟನ್ನು ಬೆಳಗ್ಗೆಯೇ ಕೊಟ್ಟೆನಲ್ಲಾ" ಎಂದನು. ಭೀಮರಾಯರು ಇಲ್ಲವೆಂದರು. ನೂರು ರೂಪಾಯಿನ ಉಂಡೆ ನೋಟು. ಎಲ್ಲರಿಗೂ ಆತಂಕ. ಎಲ್ಲರೂ ಹುಡುಕಿ ದರು. ನೋಟು ಸಿಕ್ಕಲಿಲ್ಲ. ರಾಮುಸ್ವಾಮಿಯಂತು ಭೂಮಿಗೇ ಇಳಿದು

ಹೋದನು. ತಂದೆಯ ಬೈಗುಳಕ್ಕಂತು ಕೊನೆ ಮೊದಲೇ ಇಲ್ಲ. ಏಟುಗಳೂ ಬಿದ್ದುವು. ರಾಮಸ್ವಾಮಿಯು ನೋಟನ್ನೇ ಕೊಡಲಿಲ್ಲವೆಂದೂ, ಏನೋ ಕೃತ್ರಿಮವನ್ನು ನಡೆಸಿರಬೇಕೆಂದೂ ಭೀಮರಾಯರು ಆರ್ಭಟಿಸಿದರು.

ಮನೆಗೆ ಬಂದಿದ್ದ ನೆಂಟರೂ ಕೂಡ, ರಾಮಸ್ವಾಮಿಯಿಂದ ಕುಲಕ್ಕೇ ಅವಮಾನವಾಯಿತೆಂದೂ, ಹವಳದ ಬಳ್ಳಿಯಂತಿದ್ದ ಕಿಟ್ಟುವಿನಿಂದ ಮಾತ್ರವೇ ವಂಶವು ಉದ್ಧಾರವಾಗಬೇಕೆಂದೂ, ಕಡಲೆಯನ್ನು ಹುರಿದಂತೆ ಮಾತುಗಳನ್ನು ಆಡಿ, ಬಿರುನುಡಿಯ ಬಾಣಗಳನ್ನು ಬಿಟ್ಟರು. ತೋಳ ಹಳ್ಳಕ್ಕೆ ಬಿದ್ದರೆ ಆಳಿಗೊಂದು ಕಲ್ಲು. ಇದೆಲ್ಲವನ್ನೂ ನೋಡಿ ರಮಾ ಬಾಯಮ್ಮನವರಿಗೆ ಮನಸ್ಸಿಗೆ ಏನಾಯಿತೋ ಏನೋ! ಅವರು ಅಳ ತೊಡಗಿದರು. ರಾಮಸ್ವಾಮಿಯು ಅದನ್ನು ನೋಡಿ, "ಇದನ್ನು ಮಾತ್ರ ಸಹಿಸಲಾರೆ ದೇವರೆ? ಅಪ್ಪ ನನ್ನನ್ನು ಕಡಿದುಹಾಕಿದರೂ ಸಹಿಸಬಲ್ಲೆ. ಅಮ್ಮನ ಕಣ್ಣಿನಲ್ಲಿ ನೀರು ಬರುವುದನ್ನು ಮಾತ್ರ ನೋಡಲಾರೆ" ಎಂದು ಕೊಂಡನು.

ರಾಮಸ್ವಾಮಿಯು ನೋಟನ್ನು ತಂದು ಕೊಟ್ಟಲ್ಲದೆ ತಮಗೆ ಮುಖವನ್ನು ತೋರಿಸಕೂಡದೆಂದೂ, ಅವನು ತಮ್ಮ ಮನೆಯಲ್ಲಿರಕೂಡ ದೆಂದೂ, ಅವನು ಹುಟ್ಟಿದುದು "ಕುಲಕ್ಕೆ ಮೃತ್ಯು ಕೊಡಲಿಯ ಕಾವು" ಎಂಬಂತಾಯಿತೆಂದೂ ಹೇಳಿ ಭೀಮರಾಯರು ಅವನನ್ನು ಹೊರಕ್ಕೆ ತಳ್ಳಿ ಬಿಟ್ಟರು. ರಾಮಸ್ವಾಮಿಯು ಅಳುತ್ತ ಬೀದಿಯ ಬಾಗಿಲಿನಲ್ಲಿ ನಿಂತು ಕೊಂಡನು. ರಮಾಬಾಯಮ್ಮನವರು ಅವನನ್ನು ಸಂತೈಸಲು ಒಳಗಿನಿಂದ ಎದ್ದುಬಂದರು. ಭೀಮರಾಯರು "ನಿನ್ನ ಮುದ್ದಿನಿಂದಲೇ ಅವನು ಹೀಗಾದ್ದು; ನಡೀ ಒಳಕ್ಕೆ. ಹೋಗೊ. ಎಲ್ಲಿಗೆ ಬೇಕಾದರೂ ಹೋಗೋ. ನಿನ್ನಂಥವರು ಇರುವುದಕ್ಕಿಂತ ಸಾಯುವುದು ಲೇಸು" ಎಂದು ಗರ್ಜಿಸಿ ದರು. ರಾಮಸ್ವಾಮಿಯು ಎಲ್ಲಿಗೋ ಹೊರಟುಹೋದನು. ಅವನು ಹೊರಟುಹೋದ ಬಗೆಯನ್ನು ನೋಡಿ ರಮಾಬಾಯಮ್ಮನವರಿಗೆ ಏನೋ ಒಂದು ವಿಧದಲ್ಲಿ ಭಯವಾಯಿತು.

ಸಾಯಂಕಾಲವಾಗುತ್ತ ಬಂತು. ರಾಮಸ್ವಾಮಿಯು ಹೊರಟು ಹೋದ ಮೇಲೆ ಎಲ್ಲರೂ ತಿಂಡಿಯನ್ನು ತಿಂದು "ಟೀ"ಯನ್ನು ಕುಡಿದರು.

ನೆಂಟರು ಮಾತ್ರ ಬಾರದೇ ಇದ್ದಿದ್ದರೆ ನೋಟು ಹೋದ ಗಲಭೆಯಲ್ಲಿ ಅದಕ್ಕೆಲ್ಲ ಅವಕಾಶವಿರುತ್ತಿರಲಿಲ್ಲ. ಭೀಮರಾಯರಿಗೆ ಅದೊಂದೂ ಬೇಕಿರಲಿಲ್ಲ. ಆದರೂ ನೆಂಟರ ಜೊತೆಯಲ್ಲಿದ್ದುದರಿಂದ ನಿರ್ವಾಹವಿಲ್ಲದೆ ತಿಂಡಿಯನ್ನು ತಿಂದರು. ಒಳಗೆ ರಮಾಬಾಯಮ್ಮನವರಿಗೆ ತಿಂಡಿಯು ಇಳಿಯಲಿಲ್ಲ. ಸಂಜೆಯಾಯಿತು; ಭೀಮರಾಯರು ನೆಂಟರ ಸಂಗಡ ಬಯಾಸ್ಕೋಪಿಗೆ ಹೋದರು. ರಮಾಬಾಯಮ್ಮನವರು ಮಾತ್ರ ಹೊರಡ ಲಿಲ್ಲ. ನೆಂಟರು ಕೋಪಿಸಿಕೊಳ್ಳುವರೆಂದೆಣಿಸಿ ತಲೆನೋವೆಂದು ನೆವವನ್ನು ಹೇಳಿದರು. ಅದಕ್ಕೋಸ್ಕರವೇ ವೇದಪುರುಷನು "ಪಿತೃ ದೇವೋ ಭವ" ಎನ್ನುವುದಕ್ಕೆ ಮೊದಲೇ "ಮಾತೃ ದೇವೋ ಭವ" ಎಂದು ಗಾನ ಮಾಡಿರುವುದು!

ರಾತ್ರಿಯಾಯಿತು: ರಾಮಸ್ವಾಮಿಯು ಬರಲಿಲ್ಲ. ರಮಾಬಾಯಮ್ಮ ನವರಿಗೆ ತುಂಬ ಆತಂಕವಾಯಿತು; ಆದರೆ ಅವನೂ ಬಹುಶಃ ಮನೆಯ ವರಿಗೆ ದಾರಿಯಲ್ಲಿ ಸಿಕ್ಕಿ ಬಯಾಸ್ಕೋಪಿಗೆ ಹೋಗಿರಬಹುದೆಂದು ಯೋಚಿಸಿ ಕೊಂಡರು. ಬಯಾಸ್ಕೋಪಿಗೆ ಹೋಗಿದ್ದವರೆಲ್ಲರೂ ಬಂದರು; ರಾಮ ಸ್ವಾಮಿಯು ಬರಲಿಲ್ಲ. ಸ್ವಲ್ಪ ಹೊತ್ತಿನಲ್ಲಿ ಬರಬಹುದೆಂದು ಎಲ್ಲರೂ ನಿರೀಕ್ಷಿಸಿ ದಣಿದರು. ಅವನು ಬರಲಿಲ್ಲ. ಆ ಬಳಿಕ ಹುಡುಕಿ ಸಾಕಾದರು. ರಾಮಸ್ವಾಮಿಯು ಸಿಕ್ಕಲಿಲ್ಲ.

ಭೀಮರಾಯರು ರಾಮಸ್ವಾಮಿಯನ್ನು ಪತ್ತೆಮಾಡಲು ಎಷ್ಟೋ ಪ್ರಯತ್ನ ಮಾಡಿದರು. ಎಲ್ಲೆಲ್ಲೋ ಹುಡುಕಿದರು. ವರ್ತಮಾನ ಪತ್ರಿಕೆ ಗಳಲ್ಲಿ ಪ್ರಕಟಿಸಿದರು. ರಾಮಸ್ವಾಮಿಯು ಬಂದಿದ್ದರೆ ಹಿಂದಕ್ಕೆ ಕಳುಹಿಸ ಬೇಕೆಂದು ಅವರು ತಮ್ಮ ಬಂಧುಗಳಿಗೆಲ್ಲ ಕಾಗದವನ್ನು ಬರೆದರು. ರಾಮಸ್ವಾಮಿಯ ಸುಳಿವೇ ಸಿಕ್ಕಲಿಲ್ಲ. ತಾಯಿತಂದೆಗಳ ವ್ಯಥೆಗೆ ಪಾರವೇ ಇಲ್ಲವಾಯಿತು. ಯಾರ ಇಚ್ಛೆಗೂ ನಿಲ್ಲದ ಕಾಲಚಕ್ರವು ಸುತ್ತುತ್ತಲೇ ಬಂದಿತು. ಎಷ್ಟು ದಿನಗಳು ಕಳೆದರೂ ರಾಮಸ್ವಾಮಿಯು ಪತ್ತೆಯಾಗಲಿಲ್ಲ. "ಪುತ್ರ ಶೋಕಂ ನಿರಂತರಂ;" ಗೊತ್ತೇ ಇದೆ. ಭೀಮರಾಯರಿಗೂ ರಮಾಬಾಯಮ್ಮನವರಿಗೂ ಯಾವಾಗಲೂ ಅವನ ಯೋಚನೆಯೇ; ಅವನು ಮಾಡುತ್ತಿದ್ದ ಕೆಲಸ ಕಾರ್ಯಗಳನ್ನು ಸ್ಮರಿಸಿ

ಕೊಂಡು ಅವರು ದುಃಖಪಡುತ್ತಿದ್ದರು. ರಮಾಬಾಯಮ್ಮನವರು ಗುಲಾಬಿಯ ಗಿಡವನ್ನು ನೋಡಿ ನೋಡಿ ಕಣ್ಣೀರು ಬಿಡುವರು. ರಾಮಸ್ವಾಮಿಯು ಹೂಗಳನ್ನು ತಂದು ಮುಡಿಸುತ್ತಿದ್ದುದು ನೆನಪಿಗೆ ಬಂದು, ಮರಣಯಾತನೆಯಾಗುತ್ತಿದ್ದಿತು.

ರಾಮಸ್ವಾಮಿಯು ಹೊರಟುಹೋದ ಕೆಲವು ದಿನಗಳ ಮೇಲೆ ಏಕಾದಶಿಯು ಎಂದೆಂಬುದನ್ನು ನೋಡಲು ಭೀಮರಾಯರು ಪಂಚಾಂಗವನ್ನು ತೆಗೆದರು ; ನೂರುರೂಪಾಯಿನ ನೋಟು ಅದರಲ್ಲಿದ್ದಿತು. ರಾಮಸ್ವಾಮಿಯು ನೋಟನ್ನು ಕೊಟ್ಟಿದ್ದುದು ನಿಜ. ಭೀಮರಾಯರು ಅದನ್ನು ಪಂಚಾಂಗದಲ್ಲಿಟ್ಟು ಮರೆತುಬಿಟ್ಟಿದ್ದರು. ಅದನ್ನು ನೋಡಿ ರಾಮಸ್ವಾಮಿಯು ನಿರಪರಾಧಿಯೆಂದು ತಿಳಿದ ಮೇಲೆ ಅವರ ದುಃಖವು ಮೊದಲಿಗಿಮ್ಮಡಿಯಾಯಿತು. ದಿನ ದಿನವೂ ಚಿಂತೆಯು ಹೆಚ್ಚಿತು. ಅಜೀರ್ಣವನ್ನೇ ಕಂಡರಿಯದ ಭೀಮರಾಯರಿಗೆ ಆಹಾರವು ಅರಗುವುದೇ ಕಷ್ಟವಾಗಿ ಅವರು ಬಡವಾಗುತ್ತ ಬಂದರು. ಅವರು ಮೊದಲು ರಾಮಸ್ವಾಮಿಯು ಸಾಕುತ್ತಿದ್ದ ನಾಯಿಯನ್ನು ಕಂಡು ಅಸಹ್ಯಪಡುತ್ತಿದ್ದರಷ್ಟೆ. ಈಗ ಅವರು ಅದನ್ನು ಆದರದಿಂದ ಸಾಕಲಾರಂಭಿಸಿದರು. ರಮಾಬಾಯಮ್ಮನವರ ದುಃಖಕ್ಕಂತು ಮಿತಿಯೇ ಇಲ್ಲ. ರಾಮಸ್ವಾಮಿಯು ಹಾಕಿಕೊಳ್ಳುತ್ತಿದ್ದ ಬಟ್ಟೆಯನ್ನು ನೋಡಿ ಅಳು, ತಿಂಡಿಯನ್ನು ಮಾಡಿದರೆ ಅಳು ; ಅವನ ಲಲ್ಲೆಗಳನ್ನು ನೆನಸಿಕೊಂಡು ಅಳು. ಅಳುವಿಗೆ ಕೊನೆ ಮೊದಲೇ ಇಲ್ಲ.

೪

ಕೆಲವು ವರುಷಗಳೂ ಕಳೆದುಹೋದವು. ಒಂದು ದಿವಸ ಭೀಮರಾಯರು ತಮ್ಮ ನೆಂಟರ ಮನೆಗೆ ಊಟಕ್ಕೆ ಹೋಗಿದ್ದರು. ಅಲ್ಲಿ ಒಂದು ಚಿತ್ರಪಟವನ್ನು ನೋಡಿದರು. ಪಟವು ಬಹಳ ಸೊಗಸಾಗಿದ್ದಿತು. ಬಾಲಮೋಹನನಾದ ಮುದ್ದು ಕೃಷ್ಣನ ಲೀಲಾವಿನೋದವು ಅದರಲ್ಲಿ ಚಿತ್ರಿಸಲ್ಪಟ್ಟಿದ್ದಿತು. ಸುಮಾರು ಎಂಟು ವರುಷದ ಬಾಲಕೃಷ್ಣನು ಒಬ್ಬರ ಮನೆಗೆ ನುಗ್ಗಿದ್ದಾನೆ. ಮನೆಯವರು ಕಾಣದ ಹಾಗೆ ಮೊಸರಿನ ಮಡಕೆಯನ್ನು ಮುಂದಿಟ್ಟುಕೊಂಡು, ಮೊಸರು ಕುಡಿಯುತ್ತ ಕಿಟಕಿಯ ಕಡೆಗೆ ತಿರುಗಿದ್ದಾನೆ. ಗೋಪಿಯು ನಿಂತು, ದುರದುರನೆ

ತನ್ನ ಕಡೆಗೆ ದೃಷ್ಟಿಸಿ ನೋಡುವುದನ್ನು ಕಂಡು ಕಾತರನಾಗಿದ್ದಾನೆ. ಹಣತೆಯಲ್ಲಿ ದೀಪವು ಮಿನುಗುತ್ತಿದೆ. ಆ ದೀಪದ ಬೆಳಕು ಮುಖದ ಮೇಲೆ ಬಿದ್ದು ಬಾಲಕನ ಕಮನೀಯ ರೂಪವು ಕಂಗೊಳಿಸುತ್ತಿವೆ. ಹೊಟ್ಟೆಯ ಮೇಲೆ ಮೊಸರು ಹರಿಯುತ್ತಿದೆ. ಹಿಡಿಯಲ್ಲಿ ಮೊಸರು ತೆಗೆದುಕೊಂಡು ಚೀಪುತ್ತ ತನ್ನ ಮುಖವೈಖರಿಯಿಂದ ಆ ದೃಶ್ಯವನ್ನು ಅವನು ಬೆಳಗಿಸುತ್ತಿದ್ದಾನೆ. ನೀರು ತುಂಬಿದ ಮೋಡವು ಹೊತ್ತು ಮೂಡಿದ ಸೂರ್ಯನಿಗೆ ಅಡ್ಡವಾಗಿ ಬಂದಾಗ ಒಂದೊಂದು ವೇಳೆ ನೀವು ನೋಡಿರಬಹುದು; ಅದು ದೇದೀಪ್ಯಮಾನವಾಗಿ ತೊಳಗುತ್ತ ಅಂತರಿಕ್ಷ ವನ್ನೆಲ್ಲ ಬೆಳಗುಸುತ್ತದೆ. ಕೃಷ್ಣನ ಚಿತ್ರವೂ ಅದೇ ರೀತಿ ಕಂಗೊಳಿಸುತ್ತಿದೆ. ಅವನ ಸೊಂಟದಲ್ಲಿ ಚಿನ್ನದ ಉಡಿದಾರ, ಚಿನ್ನದ ಉಡಿಗೆಜ್ಜೆ; ಬೆರಳಿನಲ್ಲಿ ರನ್ನದುಂಗುರ; ಕೊರಳಿನಲ್ಲೊಂದು ಮುತ್ತಿನ ಸರ; ಕಿವಿಗಳಲ್ಲಿ ಕಡಕು ಗಳು; ತಲೆಯಲ್ಲಿ ನವಿಲುಗರಿ; ಇವು ಶೋಭಿಸುತ್ತಿವೆ. ಮುಖವನ್ನು ನೋಡಿದರೆ "ಕಳ್ಳತನದ ಮಧ್ಯದಲ್ಲಿ ಸಿಕ್ಕಿಬಿದ್ದೆನಲ್ಲಾ" ಎಂಬ ಭಾವವೂ, "ನನ್ನ ಸಮಾನ ತುಂಟ ಉಂಟೇ" ಎಂಬ ಭಾವವೂ, "ದಕ್ಕಿದಷ್ಟು ದಕ್ಕಲಿ? ತಿಂದು ಮುಗಿಸೋಣ" ಎಂಬ ಭಾವವೂ ಮೂರೂ ಐಕ್ಯವಾಗಿ ವ್ಯಕ್ತ ವಾಗುತ್ತಿವೆ. ಭೀಮರಾಯರು ಪಟವನ್ನು ನೋಡಿ ಬೆರಗಾಗಿ ಹೋದರು; ಅಷ್ಟರಲ್ಲಿ ಮನೆಯ ಯಜಮಾನನು ಅಲ್ಲಿಗೆ ಬಂದುದನ್ನು ನೋಡಿ "ನಾಣಿ! ಈ ಪಠವು ಎಲ್ಲಿತ್ತಯ್ಯಾ! ಎಷ್ಟು ನೋಡಿದರೂ ತೃಪ್ತಿಯೇ ಆಗುವುದಿಲ್ಲ" ಎಂದರು. ಆತನು "ಅದು ನೋಡತಕ್ಕ ಹೊಸ ಪಠ; ಅದಕ್ಕೆ ಬಹಳ ಗಿರಾಕಿಯಂತೆ; ಅದನ್ನು ಬರೆದವರಿಗೆ ಲಂಡನ್ನಿನಲ್ಲಿ ಕೂಡ ಮೆಡಲು ಬಂದಿರುವುದಂತೆ; ನಿನಗೆ ಬೇಕಾದರೆ ತೆಗೆದುಕೊಂಡು ಹೋಗು. ನಾನು ಮತ್ತೊಂದನ್ನು ತಂದುಕೊಳ್ಳುತ್ತೇನೆ" ಎಂದನು. ಭೀಮರಾಯರು ಸಂತೋಷದಿಂದ ಪಟವನ್ನು ತೆಗೆದುಕೊಂಡು ಹೋದರು.

೩

ನಾರಾಯಣಸ್ವಾಮಿಯು ಬೊಂಬಾಯಿಗೆ ಹೋಗಿ ಅಲ್ಲಿ ಲಾಯರು ಪರೀಕ್ಷೆಯಲ್ಲಿ ತೇರ್ಗಡೆಹೊಂದಿ ಅಲ್ಲಿಯೇ ಲಾಯರಾಗಿದ್ದನು. ಸ್ವಶಕ್ತಿಯೂ ಇದ್ದಿತು; ಸ್ವಶಕ್ತಿಯ ಜೊತೆಗೆ ದೇವರ ದಯೆಯೂ ಸೇರಿತು.

ಬೇಕಾದಷ್ಟು ಹಣ ಸಂಪಾದನೆಯಾಗುತ್ತ ಬಂದಿತು. ಕೋರ್ಟುಗಳಿಗೆಲ್ಲಾ ರಜ ಬಂದಮೇಲೆ ಒಮ್ಮೆ ಅವನು ಬೆಂಗಳೂರಿಗೆ ಬಂದಿದ್ದನು. ಭೀಮ ರಾಯರ ಮನೆಗೂ ಹೋದನು. ಅವನನ್ನು ನೋಡಿದೊಡನೆಯೇ ಭೀಮರಾಯರಿಗೆ ರಾಮಸ್ವಾಮಿಯ ನೆನಪುಂಟಾಗಿ ಮುಖವು ಪೆಚ್ಚುಬಿದ್ದಿತು. ಮಾತು ಕಥೆಗಳೆಲ್ಲಾ ನಡೆದುವು. ಭೀಮರಾಯರೂ ರಮಾಬಾಯಮ್ಮನವರೂ ರಾಮಸ್ವಾಮಿಯ ವಿಚಾರವನ್ನು ಪ್ರಸ್ತಾಪಿಸಿ ಪೇಚಾಡಿಕೊಂಡರು. ನಾರಾಯಣಸ್ವಾಮಿಯು ಕಾಲೋಚಿತವಾಗಿ ಉತ್ತರ ಹೇಳಿದನು. ಆ ಬಳಿಕ ಅವನು ಕಿಟ್ಟುವಿನ ಸುದ್ದಿಯನ್ನೆತ್ತಿದನು. "ಅವನೇನು ಮಾಡುತ್ತಿದ್ದಾನೆ?" ಎಂದು ಕೇಳಿದನು. ಭೀಮರಾಯರು "ಅವನೇನೋ ಓದುತ್ತಿದ್ದಾನೆ, ಆದರೆ ಮೊದಲಿನಷ್ಟು ಬುದ್ಧಿವಂತನಾಗಿಲ್ಲ, ಆದರೂ ಓದಿಕೊಂಡಿದ್ದಾನೆ" ಎಂದರು.

ಅಷ್ಟರಲ್ಲಿ ನಾರಾಯಣಸ್ವಾಮಿಯು ಕೃಷ್ಣನ ಪಟದ ಕಡೆಗೆ ನೋಡಿ "ಓಹೋ ಈ ಪಠವು ನಿಮ್ಮ ಮನೆಗೂ ಬಂತೇ?" ಎಂದನು. ರಾಯರು "ಹೌದಯ್ಯಾ. ಬಹಳ ಸೊಗಸಾದ ಪಠ. ಇದನ್ನು ಬರೆದ ಪುಣ್ಯಾತ್ಮನು ಯಾರೋ ತಿಳಿಯದು. ಅವನು ಎಷ್ಟು ಬುದ್ಧಿವಂತನೋ, ಏನೋ! ಅವನು ಕೃಷ್ಣಪರಮಾತ್ಮನಲ್ಲಿ ವಿಶೇಷ ಭಕ್ತಿಯುಳ್ಳವನಾಗಿರ ಬೇಕು. ಬಹಳ ಮೇಧಾವಿಯಾಗಿಯೂ ಕುಶಲನಾಗಿಯೂ ಇರಬೇಕು. ಇಲ್ಲದ ಪಕ್ಷಕ್ಕೆ ಬೇರೆ, ಇಷ್ಟು ಸುಂದರವಾದ ಪಠವನ್ನು ಬರೆಯಲು ಆಗುತ್ತಲಿರಲಿಲ್ಲ" ಎಂದರು.

**ನಾರಾಯಣಸ್ವಾಮಿ.**—"ಭೀಮರಾಯರೇ! ಚಿತ್ರಕಲೆಯು ಅಷ್ಟು ಉತ್ತಮವೆ? ಚಿತ್ರವನ್ನು ಬರೆಯಲು ಅಷ್ಟು ಬುದ್ಧಿವಂತಿಕೆ ಇರಬೇಕೆ?"

**ಭೀಮರಾಯರು.**—"ಅಯ್ಯಾ, ಮರ್ಮಭೇದಕವಾಗಿ ಆ ರೀತಿ ಮಾತನಾಡಬೇಡಯ್ಯಾ. ನನಗೆ ಬಹಳ ವ್ಯಥೆಯಾಗುತ್ತದೆ. ನನ್ನ ರಾಮಸ್ವಾಮಿಯೂ ಹೀಗೇ ಚಿತ್ರಗಳನ್ನು ಬರೆಯುತ್ತಿದ್ದನೋ ಏನೋ! ನನ್ನ ಬುದ್ಧಿಯು ಮೋಸಹೋಯಿತು. ನಾನಾಗಿಯೇ ಮಾಡಿಕೊಂಡದ್ದಕ್ಕೆ ಹಲುಬಿ ಫಲವೇನು? ಮಾಡಿದ ಪಾಪವನ್ನು ಅನುಭವಿಸಿಯೇ ತೀರಬೇಕು.

ಹೋಗಲಿ. ಈ ಚಿತ್ರವನ್ನು ಬರೆದವನನ್ನು ಎಷ್ಟು ಹೊಗಳಿದರೂ ಸಾಲದು.''

**ನಾರಾಯಣಸ್ವಾಮಿ.**—''ಅದೇನೋ ನಿಜ! ಅವರನ್ನು ನಾನು ಬಲ್ಲೆ. ಬೊಂಬಾಯಿಯಲ್ಲಿ ಇದ್ದಾರೆ. ಅವರು ಇನ್ನೂ ಅನೇಕ ಪಟಗಳನ್ನು ಬರೆದಿದ್ದಾರೆ. ಅವರು ಒಂದು ಚಂದ್ರಶೇಖರನ ಪಟವನ್ನು ಬರೆದಿದ್ದಾರೆ. ಈಶ್ವರನೇ ಎದ್ದು ಬರುವಂತಿದೆ. ಅರ್ಧ ಚಂದ್ರರೇಖೆಯು ಹೇಗೆ ಹೊಳೆಯುತ್ತಿದೆಯೋ ನೋಡಿ. ನಿಜವಾಗಿಯೂ ಚಂದ್ರ ನಿದ್ದಂತೆಯೇ ಇದೆ. ಭಕ್ತರು. ಪ್ರಸಿದ್ಧರು.''

**ಭೀಮರಾಯರು.**—''ಇರಬಹುದು. ಈ ಪಟದ ದೀಪವನ್ನು ನೋಡಿದರೇ ಅದು ತಿಳಿಯುತ್ತದೆ. ದೀಪವನ್ನು ನೋಡಿದರೆ ನಿಜತ್ವದ ಭ್ರಾಂತಿಯುಂಟಾಗಿ, ಪ್ರಭೆಯನ್ನೆರಚಿದಂತಾಗುತ್ತದೆ. ನೀನು ಇದನ್ನು ಬರೆದವರನ್ನು ಬಲ್ಲೆನೆಂದು ಹೇಳಿದೆಯಲ್ಲಾ. ಅವರು ಪುಣ್ಯವಂತರೇನಯ್ಯಾ?''

**ನಾರಾಯಣಸ್ವಾಮಿ.**—''ಅವರಿಗೇನು? ಬೇಕಾದಷ್ಟು ಹಣ ವನ್ನು ದೋಚಿ ಗುಡ್ಡೇಹಾಕಿದ್ದಾರೆ. ಒಂದು ಕಡೆ ಚಿತ್ರದ ಸಂಪಾದನೆ, ಮತ್ತೊಂದು ಕಡೆ ವ್ಯಾಪಾರದಿಂದ ಸಂಪಾದನೆ. ಕುಬೇರರಾಗಿದ್ದಾರೆ. ಅವರು ನೀಲಗಿರಿಗೆ ಹೋಗಬೇಕೆಂದಿದ್ದಾರೆ. ನಾಳೆ ಇಲ್ಲಿಗೆ ಬರುತ್ತಾರೆ. ಬೇಕಾದರೆ, ಮಧ್ಯಾಹ್ನದ ಮೇಲೆ ನಿಮ್ಮ ಮನೆಗೂ ಕರೆದುಕೊಂಡು ಬರುತ್ತೇನೆ.''

**ಭೀಮರಾಯರು.**—''ಹಾಗೆ ಮಾಡಯ್ಯ; ಅವರು ಇಲ್ಲೇ ಟಿಫನ್ನಿಗೆ ಬರಲಿ. ಕರೆದುಕೊಂಡು ಬಾ. ಅಂಥವರಿಂದ ದೇಶಕ್ಕೇ ಗೌರವ. ನಾನೂ ಅವರನ್ನು ನೋಡಿ ಧನ್ಯನಾಗುತ್ತೇನೆ.''

**ನಾರಾಯಣಸ್ವಾಮಿ.**—''ಅವರಿಗೆ ನಿಮ್ಮಷ್ಟು ವಯಸ್ಸಾಗಿಲ್ಲ, ಹಾಗೆನ್ನಬೇಡಿ.''

**ಭೀಮರಾಯರು.**—''ವಿದ್ಯೆಯ ಮುಂದೆ, ಯೋಗ್ಯತೆಯ ಮುಂದೆ, ವಯಸ್ಸು ಕಟ್ಟಿಕೊಂಡೇನಯ್ಯ? ನಾಳೆ ಖಂಡಿತವಾಗಿ ಅವರನ್ನು ಕರೆದು ಕೊಂಡು ಬಾ.''

ಮರುದಿವಸ ಮಧ್ಯಾಹ್ನ, ಚಿತ್ರವನ್ನು ಬರೆದವರೊಡನೆ ನಾರಾಯಣಸ್ವಾಮಿಯು ಎಷ್ಟು ಹೊತ್ತಿಗೆ ಬರುವನೋ ಎಂದು ಭೀಮರಾಯರು ತವಕಪಡುತ್ತಿದ್ದರು. ರಾಮಸ್ವಾಮಿಯು ಮನೆಯಲ್ಲಿದ್ದಾಗ ಮಾತ್ರ ಹಿತ್ತಿಲ ಗಿಡವು ಮುದ್ದಾಗಲಿಲ್ಲ. ಗಿಡವು ತಲೆಯೆತ್ತುವುದಕ್ಕೇ ಅವಕಾಶ ಕೊಡಲಿಲ್ಲ. ಈಗ ನೆರೆಯ ಹಿತ್ತಿಲಿನ ಗಿಡವನ್ನು ನೋಡುವುದರಲ್ಲಿ ಉತ್ಸಾಹ. ಪಾಪ! ಅವರು ತಾವು ಮಾಡಿದ ಕೆಲಸಕ್ಕಾಗಿ ಬಹಳ ಪಶ್ಚಾತ್ತಾಪಪಟ್ಟು ಬಳಲಿಹೋಗಿದ್ದರು. ಇಷ್ಟಕ್ಕೂ ಅವರ ಉದ್ದೇಶವೇನೂ ಕೆಟ್ಟುದಲ್ಲ.

ಭೀಮರಾಯರು ಕ್ಷಣ ಕ್ಷಣಕ್ಕೂ ಬೀದಿಯ ಕಡೆಗೇ ನೋಡುತ್ತಿದ್ದರು. ಕೊನೆಗೆ ನಾರಾಯಣಸ್ವಾಮಿಯೊಬ್ಬನೇ ಕೆಲವು ಪೆಟ್ಟಿಗೆಗಳನ್ನೂ, ಇತರ ಸಾಮಾನುಗಳನ್ನೂ ತೆಗೆಸಿಕೊಂಡು ಬಂದನು. ರಾಯರು ಅವನನ್ನು ಕುರಿತು "ಏನಯ್ಯಾ! ಒಬ್ಬನೇ ಬಂದೆ! ಅವರೆಲ್ಲಿ" ಎಂದರು.

**ನಾರಾಯಣಸ್ವಾಮಿ.**—"ಅವರು ಈಗಲೇ ಬರುತ್ತಾರೆ. ಈ ರಾತ್ರಿ ಇಲ್ಲೇ ಇದ್ದು ನಾಳೆ ಹೊರಡುತ್ತಾರಂತೆ. ಅದಕ್ಕೋಸ್ಕರವೇ ಸಾಮಾನುಗಳನ್ನು ತೆಗಿಸಿಕೊಂಡು ಬಂದೆ. ನಾನು ತುಂಬ ಸ್ವಾತಂತ್ರ್ಯ ತೆಗೆದುಕೊಂಡೆ. ನಮ್ಮ ಮನೆ ಕಿಷ್ಕಿಂಧಾಪಟ್ಟಣ. ಅದಕ್ಕೋಸ್ಕರ."

**ಭೀಮರಾಯರು.**—"ನಿನಗೇನಯ್ಯ? ಈಗ ಕುಬೇರ. ಕಿಷ್ಕಿಂಧಾಪಟ್ಟಣ ಹೋಗಿ ಅಳಕಾಪಟ್ಟಣವಾಗುವ ಕಾಲ. ಅವರು ಇಲ್ಲಿಗೆ ಬರುವುದು ಬಹಳ ಸಂತೋಷ. ಅವರಲ್ಲಿ ವಿದ್ಯೆಗೆ ತಕ್ಕ ವಿನಯವೂ ಇದೆ. ವಜ್ರಕ್ಕೆ ಕುಂದಣವೂ ಸೇರಿ, ಆಭರಣವಾದಂತೆ ಎಷ್ಟು ದೊಡ್ಡ ಗುಣವಯ್ಯಾ ಅವರದು! ಹಾಗಿಲ್ಲದಿದ್ದರೆ ಇಷ್ಟು ಚೆನ್ನಾಗಿ ಪಟವನ್ನು ಬರೆಯಲಾಗುತ್ತಿದ್ದಿತೇ? ಆಹಾ! ಮುದ್ದುಕೃಷ್ಣ ಎದ್ದುಬರುವಂತಿದೆ.

ಭೀಮರಾಯರ ಮಾತುಗಳು ಪೂರೈಸುವ ವೇಳೆಗೆ ನಾರಾಯಣಸ್ವಾಮಿಯು "ಬನ್ನಿ ಬನ್ನಿ, ಚಿತ್ರಗಾರರೇ!" ಎಂದನು. ಭೀಮರಾಯರು ಬಾಗಿಲಿನ ಕಡೆಗೆ ಬೆನ್ನು ತಿರುಗಿಸಿ ಪಟವನ್ನು ನೋಡುತ್ತಿದ್ದವರು ಸರಕ್ಕನೆ ಹಿಂತಿರುಗಿ ನೋಡಿದರು; ಅಪ್ರತಿಭರಾಗಿ ನಿಂತುಬಿಟ್ಟರು;

ನೋಡಿದರೆ ರಾಮಸ್ವಾಮಿ! ಭೀಮರಾಯರು ಕಕ್ಕುಬಿಕ್ಕಾದರು. ಕೊನೆಗೆ **"ನೀನೇ ಮುದ್ದುಕೃಷ್ಣ—!"** ಎಂದರು. ಮುಂದೆ ಮಾತು ಹೊರಡದೆ ಗದ್ಗದಸ್ವರವು ಹುಟ್ಟಿತು. ಅವರು ಹೇಳಹೋದುದು "ನೀನೇ ಮುದ್ದುಕೃಷ್ಣನನ್ನು ಬರೆದವನು!" ಎಂದು; ಹೇಳಿ ನಿಲ್ಲಿಸಿದುದು "ನೀನೇ ಮುದ್ದುಕೃಷ್ಣ!!" ಎಂದು.

ರಾಮಸ್ವಾಮಿಯು ತಂದೆಗೆ ನಮಸ್ಕರಿಸಿದನು. ಆ ಬಳಿಕ ಮನೆಯ ಒಳಕ್ಕೆ ಹೋಗಿ ರಮಾಬಾಯಮ್ಮನವರಿಗೆ ನಮಸ್ಕಾರ ಮಾಡಿದನು. ಅವರು ಬಿಕ್ಕಿಬಿಕ್ಕಿ ಅತ್ತುಬಿಟ್ಟರು. ಭೀಮರಾಯರೂ ಅವನ ಹಿಂದೆಯೇ ಹೋದರು. ತಂದೆತಾಯಿಗಳ ಸಂತೋಷಕ್ಕೆ ಪಾರವೇ ಇಲ್ಲ. ಸತ್ತು ಹೋದನೆಂದು ಭಾವಿಸಿದ್ದ ಮಗನು ಪುಟಕ್ಕೆ ಹಾಕಿದ ಚಿನ್ನದಂತೆ ಮನೆಗೆ ಬಂದಮೇಲೆ ಎಷ್ಟು ಆನಂದವಾಗಿರಬೇಕು! ಅವರಿಗೆ ಸ್ವಲ್ಪ ಹೊತ್ತಿನವರೆಗೆ ಇಂದ್ರಿಯಗಳ ಸ್ವಾಧೀನವೇ ತಪ್ಪಿಹೋಗಿದ್ದಿತು. ಅವರು ರಾಮಸ್ವಾಮಿಯನ್ನು ನೋಡುವರು; ಅವನು ರಾಮಸ್ವಾಮಿಯೆಂಬುದೇ ಮನಸ್ಸಿಗೆ ಬೋಧೆಯಾಗದು; ಬಿಸಿಲು ಬಿದ್ದಿರುವುದನ್ನು ನೋಡುವರು. ಕಿಟಕಿಯಿಂದ ಸೂರ್ಯನ ಬಿಸಿಲು ಬಿದ್ದಿದೆಯೆಂಬುದೇ ಮನಸ್ಸಿಗೆ ತೋರದು. ಅವನು ಹೊರಟುಹೋಗಿದ್ದುದು, ತಾವು ತೊಳಲಿದುದು, ಅವನು ಮತ್ತೆ ಬಂದುದು, ಮೊದಲಾಗಿ ಎಲ್ಲವೂ ಮರೆತುಹೋಯಿತು. ನಾಯಿಯು ಬಾಲವನ್ನು ಅಲ್ಲಾಡಿಸುತ್ತ (ಅದು ಈಗ ದೊಡ್ಡದಾಗಿದ್ದಿತು.) ರಾಮಸ್ವಾಮಿಯ ಹತ್ತಿರ ಬಂದು ನಿಂತುದನ್ನೂ ಅವನು ಅದನ್ನು ಆದರಿಸಿದುದನ್ನೂ ನೋಡಿದರು. ಆದರೂ ಅದು ಬಗೆಹರಿಯಲಿಲ್ಲ. ಈ ಸ್ಥಿತಿಯು ಸ್ವಲ್ಪಕಾಲವಿದ್ದಿತು. ಕಿಟ್ಟುವೂ ಹಿಗ್ಗುತ್ತಿದ್ದನು. ಆದರೆ ಅವನಿಗೆ ಹೀಗಾಗಲಿಲ್ಲ.

ಅವರೆಲ್ಲರೂ ಎಷ್ಟು ಸಾರಿ ರಾಮಸ್ವಾಮಿಯನ್ನು ನೋಡಿದರೂ ಅವರಿಗೆ ತೃಪ್ತಿಯಾಗದು; ಎಷ್ಟು ಮಾತನಾಡಿದರೂ ಅವರ ಮಾತು ಮುಗಿಯದು. ಹೆಚ್ಚು ಮಾತೇಕೆ? ಅವರ ಆನಂದದ ನೆಲೆಯನ್ನು ಪಾಠಕರೇ ಊಹಿಸಿ ಗೊತ್ತುಮಾಡಿಕೊಳ್ಳಬೇಕು.

ಹಿಂದೆ ನಾರಾಯಣಸ್ವಾಮಿಯು ಬೊಂಬಾಯಿಗೆ ಹೊರಡುವ ದಿನವು ರಾಮಸ್ವಾಮಿಗೆ ಗೊತ್ತಿದ್ದುದು; ಅಂದಿನ ದಿನವೇ ಭೀಮರಾಯರ

ಮನೆಯಲ್ಲಿ ನೋಟಿನ ಹಗರಣವು ನಡೆದುದು; ಅದುವರೆಗೂ ಆಗಾಗ ತಾಯಿತಂದೆಗಳು ಕೊಡುತ್ತಿದ್ದ ಪುಡಿಕಾಸುಗಳನ್ನೆಲ್ಲ ಸೇರಿಸಿ ಕೂಡಿಟ್ಟಿದ್ದ ದುಡ್ಡನ್ನು ರಾಮಸ್ವಾಮಿಯು ಅಂದು ನೋಟುಗಳಿಗೆ ಮಾರ್ಪಡಿಸಿ ತನ್ನ ಬಳಿಯಲ್ಲಿಟ್ಟುಕೊಂಡಿದ್ದುದು; ನಾರಾಯಣಸ್ವಾಮಿಯು ಕಾಣದ ಹಾಗೆ ರೈಲು ಹತ್ತಿ ಬೊಂಬಾಯಿನಲ್ಲಿ ಅವನನ್ನು ಕಂಡು ಎಲ್ಲ ಸಂಗತಿಗಳನ್ನೂ ತಿಳಿಸಿದುದು; ಅವನು ಊರಿಗೆ ಸುದ್ದಿಯನ್ನು ತಿಳಿಸಿದರೆ, ಅಥವಾ ತಾನು ಊರಿಗೆ ಹೋಗಬೇಕಾಗಿ ಬಂದರೆ ತಾನು ನೀರಿಗೆ ಬಿದ್ದು ಪ್ರಾಣಬಿಡುವುದಾಗಿ ಹೇಳಿದುದು; ನಾರಾಯಣಸ್ವಾಮಿಯು ಮರುಕಗೊಂಡು ಚಿತ್ರಕಲೆಯನ್ನು ಬೋಧಿಸುವ ಪಾಠಶಾಲೆಗೆ ರಾಮಸ್ವಾಮಿಯನ್ನು ಸೇರಿಸಿದುದು; ಅವನ ಚಿತ್ರಕಲಾ ಕೌಶಲಕ್ಕೆ ಬೆರಗಾಗಿ ಉಪಾಧ್ಯಾಯರು ತಮ್ಮ ಮನೆಯಲ್ಲಿಯೇ ಊಟ ಉಪಚಾರಗಳನ್ನು ನಡೆಯಿಸಿ ವಿದ್ಯೆಯನ್ನು ಕಲಿಸಿದುದು; ರಾಮಸ್ವಾಮಿಯ ಹೆಸರು ಪ್ರಸಿದ್ಧಿಗೆ ಬಂದುದು; ಅವನು ಕಾಲಕ್ರಮದಲ್ಲಿ ಚಿತ್ರಕಲೆಯಿಂದಲೂ, ವ್ಯಾಪಾರದಿಂದಲೂ ಹಣವನ್ನು ಸಂಪಾದಿಸಿದುದು ಮುಂತಾದ ಸಂಗತಿಗಳನ್ನೆಲ್ಲ ಕೇಳಿ, ಅವನ ತಂದೆತಾಯಿಗಳು ಆನಂದದಿಂದಲೂ ಆಶ್ಚರ್ಯದಿಂದಲೂ ಬೆರಗಾಗಿ ಹೋದರು. ಕಿಟ್ಟುವಿಗೂ ಸಂತೋಷವಾಯಿತು.

ಭೀಮರಾಯರು ನಾರಾಯಣಸ್ವಾಮಿಯನ್ನು ಆಲಿಂಗಿಸಿಕೊಂಡು "ನಿನ್ನಿಂದಲ್ಲವೇ ಈ ಭಾಗ್ಯವನ್ನು ಕಂಡದ್ದು! ನಾನು ಪಾಪಿ! ನಿನ್ನನ್ನು ಕೂಡ ಆ ದಿನ ಸಿಕ್ಕಿದಂತೆ ಬಯ್ದೆನಲ್ಲಯ್ಯಾ. ನಾನು ಎಷ್ಟು ವ್ಯಥೆ ಪಡುತ್ತೇನೋ ದೇವರಿಗೇ ಗೊತ್ತು. ನಾನು ಅಂದದ್ದನ್ನು ಮನಸ್ಸಿನಲ್ಲಿಡಬೇಡ ನಮ್ಮಪ್ಪಾ" ಎಂದರು. ಹೀಗೆಂದಾಗ ಅವರ ಧ್ವನಿಯು ಗೊಗ್ಗರವಾಗಿ ಕಣ್ಣಿನಲ್ಲಿ ನೀರು ತುಂಬಿತು. ನಾರಾಯಣಸ್ವಾಮಿಯೂ ಉಚಿತ ರೀತಿಯಲ್ಲಿ ಉತ್ತರ ಹೇಳಿದನು.

ಒಂದು ದಿನ ರಾಮಸ್ವಾಮಿಯು ತಂದೆಯನ್ನು ಕುರಿತು "ನನಗಂತೂ ವಿದ್ಯೆಯು ಹತ್ತಲಿಲ್ಲ. ಕಿಟ್ಟುವಾದರೂ ಚೆನ್ನಾಗಿ ಓದಲಿ. ಎಷ್ಟು ಹಣವನ್ನಾದರೂ ಕೊಡುತ್ತೇನೆ. ಅವನು ಎಷ್ಟು ವರುಷವಾದರೂ ಓದಲಿ. ಬೊಂಬಾಯಿಗೆ ಹೊರಟುಹೋಗೋಣ" ಎಂದನು. ಭೀಮರಾಯರು

ತಾವೆಲ್ಲರೂ ಬೆಂಗಳೂರಿನಲ್ಲಿಯೇ ಇರುವುದೇ, ಅಥವಾ ಬೊಂಬಾಯಿಗೇ ಹೊರಟುಹೋಗುವುದೇ ಎಂದು ಚರ್ಚೆಗಾರಂಭಮಾಡಿದರು. ಅವೆಲ್ಲಾ ನಮಗೇಕೆ? ನಮಗೇನೂ ಇಷ್ಟು ಗೊತ್ತು. ದಿನಗಳು ಕಳೆದ ಹಾಗೆಲ್ಲಾ ಭೀಮರಾಯರಿಗೂ, ರಮಾಬಾಯಮ್ಮನವರಿಗೂ ಒಮ್ಮೆಗೆ ಇಮ್ಮಡಿ ಯಾಗುತ್ತ ಬಂದಿತು. ಅವರ ಆನಂದಕ್ಕೆ ಪಾರವೇ ಇರಲಿಲ್ಲ. ಭೀಮರಾಯರು ಒಂದು ದಿನ "ದೇವರು ದಯಾಮಯ, ಅವನು ಏನು ಮಾಡಿದರೂ ನಮ್ಮ ಒಳ್ಳೆಯದಕ್ಕೇ! ರಾಮಸ್ವಾಮಿಯನ್ನು ನನಗೆ ಮತ್ತೆ ಕರುಣಿಸೆಂದು ನಾನು ಬೇಡಿಕೊಳ್ಳುತ್ತಲೇ ಇದ್ದೆ. ಮಹಾನುಭಾವ ನನ್ನ ಕೋರಿಕೆಯನ್ನು ನೆರವೇರಿಸಿಕೊಟ್ಟ. ಚಕ್ರಬಡ್ಡಿಯೊಡನೆ ಫಲವನ್ನು ಕೊಟ್ಟ ಮಹಾನುಭಾವಾ! ನಿನ್ನ ಕರುಣಕ್ಕೆ ಕೊನೆಮೊದಲೇ ಇಲ್ಲ" ಎಂದು ಹೇಳಿಕೊಂಡು ರಾಮಸ್ವಾಮಿಯು ಬರೆದಿದ್ದ ಪಟವನ್ನೇ ನೋಡುತ್ತ ನಿಂತುಬಿಟ್ಟರು. ರಮಾಬಾಯಮ್ಮನವರು ಪಠವನ್ನು ನೋಡುವುದಕ್ಕೂ ಯತ್ನವಿಲ್ಲದೆ ನಿಶ್ಶಬ್ದವಾಗಿ ನಿಂತು ಕಣ್ಣಿನಲ್ಲಿ ನೀರು ಸುರಿಸುತ್ತಿದ್ದರು. ಅವರ ಕಣ್ಣೀರಿಗೆ ಹಿಂದಿನ ನೆನಪು ಕಾರಣವೋ, ಅಂದಿನ ಆನಂದವು ಕಾರಣವೋ, ಅವರೇ ಹೇಳಬೇಕು.

---

# ಗಿರಿಜಾ ಕಲ್ಯಾಣ

## ೧

ಬಾಲಕೃಷ್ಣರಾಯರು ತಮ್ಮ ಪತ್ನಿ ರುಕ್ಮಿಣಿಯಮ್ಮನವರೊಡನೆ ನಂಜನಗೂಡಿನ ಯಾತ್ರೆಯನ್ನು ಮುಗಿಸಿಕೊಂಡು ಹೆಮ್ಮೆಯಿಂದ ಹಿಂದಿರುಗಿದರು. ಆಗ್ಗೆ ಶ್ರೀರಂಗಪಟ್ಟಣದ ಜನರು ರೈಲನ್ನಾಗಲಿ ಬಸ್ಸನ್ನಾಗಲಿ ಇನ್ನೂ ಕಂಡಿರಲಿಲ್ಲ. ಆದಕಾರಣ, ರಾಯರ ಯಾತ್ರೆಯು ಹೆಮ್ಮೆಪಡತಕ್ಕ ವಿಷಯವೇ ಆಗಿದ್ದಿತು.

ರಾಯರ ಹೆಮ್ಮೆಗೆ ಮೂರು ಕಾರಣಗಳಿದ್ದುವು: ದಂಪತಿಗಳಾದ ತಮ್ಮಿಬ್ಬರ ಹೆಸರುಗಳೂ ಪುರಾಣ ದಂಪತಿಯರಾದ ರುಕ್ಮಿಣೀ ಕೃಷ್ಣರ ಹೆಸರುಗಳನ್ನು ನೆನಪಿಗೆ ತರುವಂತಿದ್ದಕಾರಣ, ನಂಜನಗೂಡಿನ ಯಾತ್ರೆಯಿಂದ ತಮ್ಮ ಜೀವನವು ಕೆತ್ತನೆಯ ಭಾಗ್ಯವನ್ನು ಪಡೆದ ಕಗ್ಗಲ್ಲಿನಂತೆ ಕಲಾವಿಭವದಿಂದೊಡಗೂಡಿ ಸಾರ್ಥಕವಾಯಿತೆಂಬುದು ರಾಯರ ಹೆಮ್ಮೆಗೆ ಮೊದಲನೆಯ ಕಾರಣ. ದಾರಿಯಲ್ಲಿ ಕಳ್ಳಕಾಕರ ಭೀತಿಯಿಂದಲೂ ಹೆದರದೆ ಜೋಡೆತ್ತಿನ ಬಂಡಿಯಲ್ಲಿ ಅಷ್ಟುದೂರ ಹೋಗಿ ಬಂದ ಎದೆಗಾರಿಕೆಯು ಅವರ ಹೆಮ್ಮೆಗೆ ಎರಡನೆಯ ಕಾರಣ. "ದಾರಿಯಲ್ಲಿ ಕಳ್ಳರೇನೂ ಬರಲಿಲ್ಲವಲ್ಲಾ!" ಎಂದು ಹೇಳಿ ಅವರ ಹೆಂಡತಿಯು ಕೊಂಚ ಹಾಸ್ಯಮಾಡಿದಾಗ ಅವರು "ಕಳ್ಳರು ಬಂದಿದ್ದರೂ ನಾನೇನೂ ನಿನ್ನಹಾಗೆ ಹೆದರುತ್ತಿರಲಿಲ್ಲ" ಎಂದು ಉತ್ತರ ಕೊಟ್ಟರು. ಅಲ್ಲದೆ, ರುಕ್ಮಿಣಿಯಮ್ಮನವರು ಆ ರೀತಿ ಹಾಸ್ಯಮಾಡುವಷ್ಟು ಸ್ವಾತಂತ್ರ್ಯವನ್ನು ವಹಿಸಿದುದಕ್ಕಾಗಿ ತಮ್ಮ ಮನಸ್ಸಿನಲ್ಲುಂಟಾದ ಸಸುಮುಸಿಸನ್ನೂ ಧ್ವನಿಯಿಂದಲೇ ವ್ಯಕ್ತಪಡಿಸಿ, ಹೆಂಡತಿಯು ತಮ್ಮ ಹೆಮ್ಮೆಯ ಮೇಲೆ ಹಾಸುಗಲ್ಲನ್ನು ಹೇರದಂತೆ ಮಾಡಿಕೊಂಡರು. ಇನ್ನು ಮೂರನೆಯ ಕಾರಣದ ವಿಚಾರ. ಸ್ಮಾರ್ತರು ಹೆಚ್ಚೆಂದೂ ವೈಷ್ಣವರು ಹೆಚ್ಚೆಂದೂ ಪ್ರಾಣದೇವರ ದೇವಾಲಯದಲ್ಲಿ ವಾದಗಳು ನಡೆಯುತ್ತಿದ್ದ ಕೂಗಿನ ಅವಾಂತರದಲ್ಲಿ ವೃದ್ಧನಾದ ಆಂಜನೇಯನಿಗೆ

ನಿಜವಾಗಿಯೂ ಕಿವಿಗಳ ಪಾಟವವೇ ಕುಗ್ಗಿರಬೇಕೆಂದು ಅನೇಕರು ಸಿದ್ಧಾಂತ ಮಾಡುತ್ತಲೇ ಇದ್ದರು. ಈ ಬಗೆಯ ಸ್ಥಳವಿದ್ಯಮಾನವಿದ್ದೂ ಮಾಧ್ವರಾದ ತಾವು ಅನ್ಯಮತ ಸಹಿಷ್ಣುತೆಗೆ ಮಾದರಿಯಾಗಿ ನಂಜನಗೂಡಿನ ಸ್ಮಾರ್ತರ ಶಿವ ದೇವಾಲಯಕ್ಕೆ ಹೋಗಿಬಂದುದು ಅವರ ಹೆಮ್ಮೆಗೆ ಮೂರನೆಯ ಕಾರಣ.

ಅವರ ಹೆಮ್ಮೆಯ 'ಭರಾಟೆ'ಯಲ್ಲಿ ಮಾಧ್ವರು ಶಿವನನ್ನೂ, ಗೌರಿಯನ್ನೂ, ಗಣೇಶನನ್ನೂ ಪೂಜಿಸುವ ಸಂಪ್ರದಾಯವೇ ಅವರ ಮನಸ್ಸಿಗೆ ಹೊಳೆಯಲಿಲ್ಲ. ಆದರೆ ಚನ್ನಪಟ್ಟಣದಿಂದ ಬಂದಿದ್ದ "ನಾಮದ ಅಯ್ಯಂಗಾರಿ" ಅದೇ ಶಿವದೇವಾಲಯಕ್ಕೆ ಬಂದು ತೀರ್ಥ ಪ್ರಾಶನಮಾಡಿದ್ದ ದೃಶ್ಯವು ಅವರ ಕಣ್ಣೆದುರಿಗೆ ನಿಂತಾಗಲೆಲ್ಲ, ಅವರ ಹೆಮ್ಮೆಯು ಕೊಂಚ ಕುಂಠಿತವಾದಂತೆ ತೋರುತ್ತಿದ್ದಿತು. ಆನೆಯು ಅಟ್ಟಿಸಿಕೊಂಡು ಬಂದರೂ ಶಿವದೇವಾಲಯ ಪ್ರವೇಶ ಮಾಡಕೂಡದ "ನಾಮದ ಅಯ್ಯಂಗಾರಿ" ಶ್ರೀಕಂಠೇಶ್ವರ ಸನ್ನಿಧಿಗೆ ಭಕ್ತಿಯಿಂದ ಬಂದುದನ್ನು ಕಂಡು ರಾಯರು ಅಪ್ರತಿಭರಾಗಿದ್ದರು. ಆದರೂ ಅವರ ಮನಸ್ಸಿನ ವಿಚಾರ ಸರಣಿಯು ಹೀಗಿದ್ದಿತು: ಆನೆಯು ನಿಜವಾಗಿಯೂ ಅಟ್ಟಿಸಿಕೊಂಡು ಬಂದರೆ—ಶಿವ ದೇವಾಲಯ ಪ್ರವೇಶದ ಮಾತು ಹಾಗಿರಲಿ—ಗುಂಬಜಿನಂತಹ ಗೋರಿಯ ಕಟ್ಟಡಕ್ಕಾದರೂ ಶಂಕೆಯಿಲ್ಲದೆ ಪ್ರವೇಶಿಸಿ "ನಾಮದ ಅಯ್ಯಂಗಾರಿಯು" ಪ್ರಾಣವನ್ನುಳಿಸಿಕೊಳ್ಳುತ್ತಿದ್ದ. ಗುಂಡು ಗೋವಿಯಂತೆ ಒಬ್ಬನೇ ನಂಜನಗೂಡಿಗೆ ಬರುವುದು ಕಷ್ಟವೆ? ತಮ್ಮ ಹಾಗೆ ಅವನು ತನ್ನ "ಮನೆಯವಳನ್ನೂ" ಶಿವದೇವಾಲಯ ಪ್ರವೇಶ ಮಾಡಿಸಿ ತಾನು ಮೇಲುಗೈಯಂತೆ ತೋರಿಸಿಕೊಂಡಿದ್ದರೆ ಆಗ ರಾಯರಿಗೆ ಚಿಂತೆಗೆ ಕಾರಣವಿರುತ್ತಿದ್ದಿತು. ಅನ್ಯಮತ ಸಹಿಷ್ಣುತೆಯನ್ನು ಗಂಡಸರು ತೋರಿಸುವುದೇನೂ ಅತಿಶಯವಲ್ಲ. ಅದರಲ್ಲಿ ಅಷ್ಟು ಕಷ್ಟವೂ ಇಲ್ಲ. ಈ ರೀತಿ ಬಾಲಕೃಷ್ಣರಾಯರು ತಮ್ಮ ಮನಸ್ಸಿನ ಮೆದೆಯಿಂದ ಒಣಹುಲ್ಲನ್ನು ಹಿರಿದು ಹಿರಿದು ರಾಶಿಹಾಕುತ್ತಿದ್ದರು. ಅಲ್ಲದೆ, ಅವನು ಬಂದುದನ್ನು ಶ್ರೀರಂಗಪಟ್ಟಣದವರಾರೂ ನೋಡಲಿಲ್ಲ. ಇನ್ನು ರಾಯರಿಗೆ ಭಯವೆಲ್ಲಿಯದು?

ನಂಜನಗೂಡಿನ ಯಾತ್ರೆಯ ದೆಸೆಯಿಂದ ಬಾಲಕೃಷ್ಣರಾಯರ ಹೆಮ್ಮೆಯು ಎಷ್ಟು ಬಳೆದು ಎಷ್ಟು ದೂರ ಹಬ್ಬಿದ್ದಿತೋ, ಗಿರಿಜಾ ಕಲ್ಯಾಣದ

ಉತ್ಸವವನ್ನು ನೋಡಿ ರಾಯರ ಮನಸ್ಸಿನ ಅಸಮಾಧಾನವೂ ಅಷ್ಟೇ ಬೆಳೆದು ಅಷ್ಟೇ ದೂರ ಹಬ್ಬಿದ್ದಿತು. ಶ್ರೀರಂಗಪಟ್ಟಣಕ್ಕೆ ಹಿಂತಿರುಗಿದ ದಿನ ಮಧ್ಯಾಹ್ನದ ಮೇಲೆ ರುಕ್ಮಿಣಿಯಮ್ಮನವರು ಅಡಿಗೆಯವನಿಂದ "ವಾಂಗಿ ಭಾತನ್ನೂ, ಕೀರನ್ನೂ" ಮಾಡಿಸಿ ಪತಿದೇವರಿಗೆ ಸಮರ್ಪಿಸಿದರು. ರಾಯರು ಸುಪ್ರೀತರಾಗಿ "ಇದೀಗ ಸರಿ. ಅಲ್ಲಿ ನಡೆದ ವಿಚಿತ್ರದ ಹಾಗಿಲ್ಲ". ಎಂದರು. ರುಕ್ಮಿಣಿಯಮ್ಮನವರು ತಮ್ಮ ಪತಿದೇವರು ಹೀಗೆ ಪ್ರಸನ್ನ ಮುಖಮುದ್ರೆ ಯಿಂದ ಮಾತನಾಡುತ್ತಿದ್ದುದನ್ನು ಕೇಳುತ್ತಿದ್ದುದೇ ಅತಿ ವಿರಳ. ಆದ ಕಾರಣ ಅವರು ಬಹಳ ಸಂತೋಷದಿಂದ, "ಅಲ್ಲಿ ನಡೆದ ವಿಚಿತ್ರ ಅಂದರೆ ಎಲ್ಲಿ ನಡೆದ ವಿಚಿತ್ರ? ಎಲ್ಲಿ ಅನ್ನೋದನ್ನ ಹೇಳದೆ ಗೋಡೆ ಕಡೆಗೆ ಕೈತೋರಿಸಿ ಅಲ್ಲಿ ನಡೆದ ವಿಚಿತ್ರ ಅಂದರೆ ನನ್ನಂಥ ಮೂಢಳಿಗೆ ಅರ್ಥವಾಗುವ ಬಗೆ?" ಎಂದು ಉತ್ತರ ಹೇಳಿ ಮೃದುವಾಗಿ ನಕ್ಕರು.

ರಾಯರು "ಇಷ್ಟು ತಿಳಿಯದಿದ್ದರೆ ಹೇಗೆ? ಅಲ್ಲ ಅಂದರೆ ಇನ್ನೆಲ್ಲಿ, ನಂಜನಗೂಡಿನಲ್ಲಿ ಅಂತ. ಗಿರಿಜಾ ಕಲ್ಯಾಣದ ದಂಪತಿಗಳಿಗೆ ಫಲಾಹಾರಕ್ಕೆ ಬಡಿಸಿದರಲ್ಲ. ಇದೇ ವಾಂಗಿಭಾತು, ಕರಿದ ಸೇವುಗೆ ಪಾಯಸ, ಕೋಸಂಬರಿ ಗಳು ಎಲ್ಲ ಬಡಿಸಿದ್ದರು. ಬಂದ ಭಾಗ್ಯವೇನು ಹೇಳು. ಬಡಿಸಿದ ಎಲೆ ಬಡಿಸಿದಹಾಗೇ ಇತ್ತು. ಹೀಗೆ ತಿನ್ನುವವರಿಗಾದರೂ ಬಡಿಸಿದ್ದರೆ?" ಎಂದು ಹೇಳಿ ಸ್ವಲ್ಪ ಕಿರುನಗೆಯನ್ನು ಸೂಸಿ, ಪ್ರೌಢಿಮೆಯ ಹೆಮ್ಮೆಯ ಠೀವಿ ಯಿಂದ ಸೆಡೆತು ಕುಳಿತರು.

ಅಪೂರ್ವ ವಸ್ತುವಾಗಿದ್ದ ಆ ಕಿರುನಗೆಗೆ ರುಕ್ಮಿಣಿಯಮ್ಮನವರ ಮನಸ್ಸಿನ ಭಂಡಾರದಲ್ಲಿ ಬಹಳ ಬೆಲೆ. ಆದಕಾರಣ, ಅವರು ಉತ್ಸಾಹ ದಿಂದ ಮೈಮರೆತು "ತಿನ್ನುವವರಿಗೆ ಬಡಿಸಿದ್ದರೆ, ಬಡಿಸಿದುದೆಲ್ಲ ಮಾಯ ವಾಗುತ್ತಿತ್ತು. ದೇವರು ಊಟಮಾಡಲು ಪ್ರಾರಂಭಿಸಿದರೆ, ಯಾರೂ ಆಮೇಲೆ ನೈವೇದ್ಯವನ್ನೇ ಇಡುವುದಿಲ್ಲ. ಅದಿರಲಿ. ದೇವರುಗಳ ವಿಷಯ. ಹಾಸ್ಯಮಾಡಬೇಡಿ. ಗಿರಿಜಾ ಕಲ್ಯಾಣ ನೋಡಿಬಂದ ಪುಣ್ಯ ಕಡಮೆಯಾಗಿ ಹೋದೀತು. ಅಮ್ಮನವರಿಗಾಗಲಿ ಸ್ವಾಮಿಗಾಗಲಿ ಕೋಪ ಬಂದೀತು. ನಿಮ್ಮ ಧರ್ಮಕ್ಕೆ ಸುಮ್ಮನಿರಿ" ಎಂದರು. ರಾಯರು ಗಹಗಹಿಸಿ ನಗುತ್ತ "ಇದೂ ಸರಿ. ಮಕ್ಕಳ ಚೆಲ್ಲಾಟಕ್ಕೆ ಸಂತೋಷಿಸದೆ ತಾಯಿತಂದೆಗಳೇ

ಕೋಪಿಸಿಕೊಳ್ಳುವುದೂ ಉಂಟೆ?'' ಎಂದು ಕೇಳಿದರು. ರುಕ್ಮಿಣಿಯಮ್ಮ ನವರು ನಗುತ್ತ ''ಮಕ್ಕಳ ವಿಚಾರ ನಿಮಗೆ ಗೊತ್ತಿರುವುದು ಬಹಳ. ಬಹಳ ಮಕ್ಕಳನ್ನ ಕಂಡಿರುವವರ ಹಾಗೆ ಏನೋ ಹೇಳ್ತಾರೆ ಇವರು'' ಎಂದರು.

ರುಕ್ಮಿಣಿಯಮ್ಮನವರು ನಗುತ್ತಿದ್ದರೂ ಆ ನಗುವಿನ ತೆರೆಯ ಹಿಂದೆ ಮಕ್ಕಳಿಲ್ಲದ ದುಃಖವು ಭೂತದಂತೆ ಅಡಗಿಕೊಂಡಿದ್ದಿತು. ರಾಯರಿಗೆ ಅದರ ಮರ್ಮವು ತಿಳಿಯದು. ಅವರು ಅಣಕದ ನಗುವಿನಿಂದ ''ಓಹೊ ಹಾಗೊ? ಮಕ್ಕಳನ್ನು ಕಾಣಬೇಕೆಂಬ ಹರಕೆಯಿಂದಲೋ ಸವಾರಿ ಗಿರಿಜಾ ಕಲ್ಯಾಣಕ್ಕೆ ಹೋಗಿದ್ದದ್ದು?'' ಎಂದು ಕೇಳಿದರು. ಲೋಕಾಭಿರಾಮವಾಗಿ ರಾಯರು ಕೇಳಿದ ಪ್ರಶ್ನೆಯು ರುಕ್ಮಿಣಿಯಮ್ಮನವರು ಬೆಚ್ಚುವಂತೆ ಮಾಡಿತು. ರಾಯರ ಕುಶಾಗ್ರ ಬುದ್ಧಿಯು ತಮ್ಮ ಗುಟ್ಟನ್ನು ರಟ್ಟುಮಾಡಿತೆಂದು ಅವರು ನಿರ್ಧರಿಸಿದರು.

ಶ್ರೀಕಂಠೇಶ್ವರನು ಅಷ್ಟೇನೂ ಹೆಚ್ಚು ಕರುಣಾಶಾಲಿಯಲ್ಲದಿದ್ದರೂ ಹೊಸ ''ಮದುಮಗಳು'' ಗಿರಿಜಾ ತಾಯಿಯು ತಮ್ಮ ಕೋರಿಕೆಯನ್ನು ಸಲ್ಲಿಸುವಳೆಂದು ರುಕ್ಮಿಣಿಯಮ್ಮನವರಿಗೆ ಭರವಸೆ. ಆದರೆ ತಮ್ಮ ಪತಿಯ ಪರಿಹಾಸ್ಯದಿಂದ ಆಕೆಗೆ ಕೋಪ ಒಂದರೆ ಕಾರ್ಯವು ಕೆಟ್ಟುಹೋದೀತೆಂದೂ ಅವರಿಗೆ ಶಂಕೆ. ಗಿರಿಜಾ ಕಲ್ಯಾಣದ ನೋಟವನ್ನು ನೋಡಿ ಸೊಂಪಿನ ಸಾಗರದಲ್ಲಿ ಮಿಂದಿದ್ದ ಅವರ ಮನಸ್ಸು ನಿಜವಾಗಿ ಗಿರಿಜಾ ಕಲ್ಯಾಣವು ಅದೇ ವರ್ಷ ನಡೆಯಿತೆಂದೇ ನಂಬಿದ್ದಿತು.

ರಾಯರ ಹಾಸ್ಯಾಲಾಪವನ್ನು ನಿಲ್ಲಿಸುವ ಬಯಕೆಯಿಂದ ರುಕ್ಮಿಣಿ ಯಮ್ಮನವರು ''ಹರಕೆಯೋ ಗಿರಕೆಯೋ ಅದೆಲ್ಲ ನಿಮಗೇಕೆ? ವಾಂಗಿ ಭಾತೂ, ಕೀರೂ ಚೆನ್ನಾಗಿದೆಯೋ ಇಲ್ಲವೋ ನೋಡಿ. ಸಿಕ್ಕಿದಹಾಗೆ ಮಾತ ನಾಡಿ ದೇವರಿಗೆ ಕೋಪ ಬರುವಹಾಗೆ ಮಾಡಬೇಡಿ'' ಎಂದರು. ರಾಯರು ಮತ್ತಷ್ಟು ನಕ್ಕು ''ಈ ಅರ್ಚಕರ ಕೈಗೆ ಸಿಕ್ಕಿ ದೇವರ ಪಾಡು ಬಹಳ ಕಷ್ಟ ಕ್ಕಿಟ್ಟಿದೆಯೆಂದರೆ, ದೇವರಿಗೇಕೆ ಕೋಪ? ಉರಿಗಣ್ಣನ್ನು ತೆಗೆದ ಮಾತ್ರಕ್ಕೇ ಹದಿನಾಲ್ಕು ಲೋಕಗಳನ್ನೂ ಸುಟ್ಟು ಬೂದಿಮಾಡುವ ಸಾಮರ್ಥ್ಯವುಳ್ಳ

ರುದ್ರದೇವರು ಕಳ್ಳನ ಕೈಗೆ ಸಿಕ್ಕಿ ಪಾಡುಪಟ್ಟಹಾಗೆ ವಿಗ್ರಹಗಳನ್ನ ಮೆರೆಸಿ ರಗಳೆ ಮಾಡ್ತಾರೆ. ಪೂಜಾರಿ ಕೈಗೆ ಸಿಕ್ಕಿದಮೇಲೆ ದೇವರೂ ಕಿರುಗುಟ್ಟಿ ಹೋಗೋದೆ. ಅಲ್ಲಿ ಪುರೋಹಿತ ಪುರೋಹಿತರೇ ಸೇರಿ ಉರುಟಣೆ ಮಾಡಿ ಕೊಂಡರು. ಸ್ವಾಮಿ ಕಡೆ ಅರ್ಚಕರು 'ಎನ್ನರಸಿ ಚೆನ್ನರಸಿ' ಹೇಳಿದರು. ಅಮ್ಮನವರ ಕಡೆ ಅರ್ಚಕರು 'ಎನ್ನರಸ ಚೆನ್ನರಸ' ಹೇಳಿದರು. ಹಾಗೆ ಮಾಡದೆ ನಮ್ಮಂಥ ದಂಪತಿಗಳನ್ನ ಲಕ್ಷಣವಾಗಿ ಹಸೆಯಮೇಲೆ ಕೂರಿಸಿ ಎನ್ನರಸ ಚೆನ್ನರಸ ಹೇಳಿಸಿ ಉರುಟಣೆಮಾಡಿಸಿದ್ದರೆ, ಶ್ರೀಕಂಠೇಶ್ವರನೇನು ಬೇಡವೆನ್ನುತ್ತಿದ್ದನೆ?'' ಎಂದರು.

ರಾಯರ ಕುಹಕವನ್ನು ಕಂಡು ಅಮ್ಮನವರಿಗೆಷ್ಟು ಕೋಪ ಬಂದಿದೆಯೋ ಎಂದು ಕಳವಳಪಟ್ಟು ರುಕ್ಮಿಣಿಯಮ್ಮನವರು ಬಹಳ ಕಿರಿಕಿರಿ ಪಟ್ಟರು. ರಾಯರ ಹುಚ್ಚು ಮಾತುಗಳನ್ನು ನಿಲ್ಲಿಸುವ ಕೊನೆಯ ಪ್ರಯತ್ನ ವಾಗಿ ಅವರು ''ಪಾಪ! ನಿಮ್ಮ ಜೊತೆಗೆ ನನ್ನನ್ನು ಕೂರಿಸಿದರೇನು ಚೆನ್ನ ಹೇಳಿ. ಚಿಕ್ಕ ಹೆಂಡತಿಯೊಬ್ಬಳನ್ನು ಕೂರಿಸಿ ಉರುಟಣೆ ಮಾಡಿಸಬೇಕಾ ಗಿತ್ತು. ಅವರಿಗೆ ಅದೇಕೋ ತೋರಲೇ ಇಲ್ಲ. ನಿಮಗೆಲ್ಲೋ ಇನ್ನೊಂದು ಮದುವೆ ಮಾಡಿಕೊಳ್ಳುವ ಆಸೆ. ಒತ್ತಿ ಒತ್ತಿ ಹೇಳಿ, ಸಂಜನಗೂಡಿಗೆ ಕರೆದು ಕೊಂಡು ಹೋಗುವಂತೆ ನಿಮ್ಮನ್ನು ಕೇಳಿಕೊಂಡದ್ದಕ್ಕೆ ಕೊನೆಗೆ ಒಳ್ಳೆಯ ಫಲವೆ ಸಿಕ್ಕಿತು. ನಿಮಗೆ ಮದುವೆ ಹುಚ್ಚು. ಉರುಟಣೆಯಲ್ಲಿ ಆಸೆ. ಅಲ್ಲವೇ?'' ಎಂದರು. ರಾಯರು ಅದಕ್ಕೆ ನಗ್ಗದೆ, ''ಉರುಟಣೆ ನೋಡುವ ಆಸೆಯು ಯಾರಿಗಿಲ್ಲ?'' ಎಂದರು.

ರುಕ್ಮಿಣಿಯಮ್ಮನವರು ಬಗೆ ಬಗೆಯಾಗಿ ಶಂಕಿಸಿ ತಳಮಳಗೊಂಡರು. ಗಿರಿಜಾ ಕಲ್ಯಾಣವನ್ನು ನೋಡಿ ಬೆಲ್ಲದ ಸವಿಯಿಂದ ಚಪ್ಪರಿಸುತ್ತಿದ್ದ ಬಾಯಿಗೆ ಬೇವನ್ನು ಬಲವಂತವಾಗಿ ತುರುಕಿದಂತಾಯಿತು. ರಾಯರು ತಮ್ಮ ಮನಸ್ಸಿಗೆ ಬೇಕೆಂದು ತೋರಿದುದನ್ನು ಸಾಧಿಸಿಯೇ ಸಾಧಿಸುವ ಛಲಗಾರರೆಂಬ ಅಂಶವು ಅವರ ಮನಸ್ಸಿನ ಮುಂದೆ ಮಿಂಚಿದಂತಾಗಲು ಅವರು ಭೀತಿಯಿಂದ ನಡುಗಿದರು. ಒಂದೆರಡು ನಿಮಿಷಗಳ ಕಾಲ ಚಿಂತಾಪರವಶರಾಗಿ ನಿಂತಿದ್ದು ಕೊನೆಗೆ, ''ಒಬ್ಬ ಹೆಂಡತಿಯು ಬದುಕಿರು ವಾಗ ಗಂಡಸರು ಇನ್ನೊಬ್ಬ ಹೆಂಡತಿಯನ್ನು ಮದುವೆಯಾಗ್ತಾರೆ. ಇದು

ನ್ಯಾಯವೆ?'' ಎಂದು ಕೇಳಿದರು. ಆಗ ರಾಯರು ಏನನ್ನೋ ಯೋಚಿಸು ತ್ತಿದ್ದರು. ಆದಕಾರಣ, ಯಾವುದೋ ಒಂದು ಸ್ವಪ್ನ ಪ್ರಪಂಚದಿಂದ "ನ್ಯಾಯವಲ್ಲದೆ ಏನು? ಅದು ಶಾಸ್ತ್ರ ಸಮ್ಮತ. ಶಾಸ್ತ್ರವು ಹೇಳುವುದು ನ್ಯಾಯವೇ ತಾನೆ?'' ಎಂದರು.

ರುಕ್ಮಿಣಿಯಮ್ಮನವರ ಹೃದಯಕ್ಕೆ ಹಾರೆಯು ನಾಟಿಕೊಂಡಂತಾಗಿ ಅವರು ವ್ಯಥೆಯಿಂದ ತಲ್ಲಣಿಸಿದರು. ತಕ್ಕಷ್ಟು ಕಾರಣವು ಇನ್ನೂ ಒದಗಿಲ್ಲ ದಿದ್ದೂ ಸವತಿ ಮಾತ್ಸರ್ಯದ ಪೆಡಂಭೂತವೊಂದು ಅವರ ಮನಸ್ಸನ್ನು ಪ್ರವೇಶಿಸಿ ವಿಕಟವಾದ ಅಟ್ಟಹಾಸದಿಂದ ನರ್ತನಮಾಡಿತು. ಪತಿಯ ಮನಸ್ಸನ್ನು ತಿರುಗಿಸಿಕೊಟ್ಟು ಕಾಪಾಡುವಂತೆ ಅವರು ಹಲವು ದೇವರು ಗಳನ್ನು ಮನಸ್ಸಿನಲ್ಲಿಯೇ ಪ್ರಾರ್ಥಿಸುತ್ತ ಬಗೆ ಬಗೆಯ ಹರಕೆಗಳನ್ನು ಮಾಡಿ ಕೊಳ್ಳುತ್ತ ಚಿತ್ರದ ಬೊಂಬೆಯಂತೆ ಒಂದೆರಡು ನಿಮಿಷಗಳ ಕಾಲ ನಿಂತರು. ರಾಯರು ತಾಂಬೂಲವನ್ನಗಿಯುತ್ತ, ತಮ್ಮ ಸ್ನೇಹಿತನೊಬ್ಬನ ಮನೆಗೆ ಹೋದರು.

೨

ಆದೇ ದಿನ ಸಾಯಂಕಾಲದ ಸುಮಾರಿಗೆ ಬಾಲಕೃಷ್ಣರಾಯರು ತಮ್ಮ ದಿನಚರಿಯ ಪದ್ಧತಿಯಂತೆ ಈಜಾಡಿ ಸ್ನಾನಮಾಡಲು ಕಾವೇರೀ ನದಿಯ ಸ್ನಾನಘಟ್ಟಕ್ಕೆ ಬಂದರು. ತಾವು ದಿನಕ್ಕೆರಡು ವೇಳೆ ತಣ್ಣೀರಿನ ಸ್ನಾನಮಾಡುತ್ತಿದ್ದುದೇ ತಮ್ಮ ಜೀವಮಾನದಲ್ಲಿ ತಮಗೆ ಇತರರಂತೆ ಆಗಾಗ ಹಲವು ಸಾರಿ ಜ್ವರವು ಬಾರದಿದ್ದುದಕ್ಕೆ ಕಾರಣವೆಂದು ರಾಯರ ನಂಬಿಕೆ. ಅವರು ಸ್ನಾನಘಟ್ಟಕ್ಕೆ ಬಂದಾಗಲೆಲ್ಲ ಬಟ್ಟೆಯನ್ನಿಡಲು ತಪ್ಪದೆ ಪ್ರೀತಿಯಿಂದ ಉಪಯೋಗಿಸುತ್ತಿದ್ದ ವಿಶಾಲವಾದ ಸೋಪಾನದ ಕಲ್ಲಿನ ಮೇಲೆ ಇತರರಾರೋ ದಂಪತಿಗಳು ತಮ್ಮ ಸಾಮಾನುಗಳನ್ನಿಟ್ಟಿದ್ದರು. ಬಹುಕಾಲದಿಂದ ಬಂದಿದ್ದ ಪದ್ಧತಿಯನ್ನು ಬಿಟ್ಟು ಬೇರೆ ಕಲ್ಲನ್ನುಪಯೋಗಿ ಸಲು ರಾಯರಿಗೆ ಇಷ್ಟವಿಲ್ಲ. ಆದಕಾರಣ, ಕಲ್ಲು ಬಿಡುವಾಗುವವರೆಗೂ ಕಾದಿರಬೇಕೆಂದು ನಿರ್ಧರಿಸಿ ಅಲ್ಲಿಯೇ ಒಂದೆರಡು ಹೆಜ್ಜೆಗಳ ದೂರದಲ್ಲಿದ್ದ ಕಲ್ಲು ಕಟ್ಟೆಯ ಮೇಲೆ ಕುಳಿತುಕೊಂಡರು. ಆಗಂತುಕನಾದ ಗಂಡಸು ಸ್ನಾನಮಾಡುತ್ತಿದ್ದನು. ಆತನ ಹೆಸರು ಲಕ್ಷ್ಮೀನಾರಣಪ್ಪನವರೆಂದು.

ಅವರ ಪತ್ನಿಯ ಹೆಸರು ರಂಗಮ್ಮನವರೆಂದು. ರಂಗಮ್ಮನವರು ಸಾಮಾನು ಗಳ ಬಳಿಯಲ್ಲಿ ಕುಳಿತು ಯಾರನ್ನೋ ನಿರೀಕ್ಷಿಸುವಂತೆ ದಡದ ಕಡೆಗೆ ದೂರ ದೂರಕ್ಕೆ ಆಗಾಗ ಕುತೂಹಲದೃಷ್ಟಿಯಿಂದ ತಿರುಗಿ ತಿರುಗಿ ನೋಡುತ್ತಿದ್ದರು.

ಅತ್ತ ಬಾಲಕೃಷ್ಣರಾಯರು ನದಿಯ ನೀರು ಮಂದಗಮನದಿಂದ ಹರಿಯುತ್ತಿದ್ದುದನ್ನೂ, ಸೂರ್ಯನ ಹೊಂಬಿಸಿಲು ಅದರಮೇಲೆ ಬಿದ್ದು ಕರಗಿದ ಚಿನ್ನದ ಭ್ರಾಂತಿಯನ್ನುಂಟುಮಾಡುತ್ತಿದ್ದ ಸೊಬಗನ್ನೂ ನೋಡು ತ್ತಿದ್ದರು. ಆಗ "ಮುಳುಗುವ ಸೂರ್ಯನು ಈಗ ಈ ನೀರನ್ನು ಬೆಳಗಿಸು ತ್ತಿದ್ದಾನೆ. ಅವನು ಕಿರಣಗಳನ್ನು ಹಿರಿದುಕೊಂಡಮೇಲೆ ಈ ನೀರು ಹೀಗೆಲ್ಲಿ ತೊಳಗುವುದು? ನಮ್ಮ ಜೀವನದ ಹೊಳೆಯ ನೀರೂ ಹೀಗೆಯೇ ಅಲ್ಲವೆ? ಭಗವಂತನ ದಯೆಯ ಕಿರಣಗಳು ಪಸರಿಸಿರುವವರೆಗೆ ಆ ನೀರೂ ಬೆಳಗಿ ನಲಿ ದಾಡುವುದಲ್ಲವೆ? ಆಮೇಲೆ ಆಮೇಲೆ?" ಎಂದು ಅವರ ಮನಸ್ಸು ಪ್ರಶ್ನೆ ಗಳನ್ನು ಹಾಕಿ ವಿಚಾರ ತರಂಗವನ್ನೆಬ್ಬಿಸಿತು. ಒಡನೆಯೇ ಅವರ ಬುದ್ಧಿಯು "ಆಮೇಲೆ ಉಳಿದಿರುವುದು ಚಿನ್ನದ ಕಾಂತಿಯಲ್ಲ, ನೀಲಿಮೆಯ ತೆರೆ" ಎಂದು ಉತ್ತರ ಹೇಳಿತು. ರಾಯರು ಒಂದೆರಡು ನಿಮಿಷಗಳ ಕಾಲ ಬಗೆ ಬಗೆಯ ವಿಚಾರ ತರಂಗಗಳಲ್ಲಿ ಮುಳುಗುಹಾಕುತ್ತಿದ್ದರು. ಕೊನೆಗೆ ಅವರು ತಮ್ಮ ಮನಸ್ಸಿನಲ್ಲಿ "ದೇವರ ಅನುಗ್ರಹವು ಜೀವನವನ್ನು ಬೆಳಗುತ್ತಿರುವಾಗ ಸರಿಯಾದ ಕೆಲಸಮಾಡದೆ ಮನುಷ್ಯರು ಪ್ರಮಾದವನ್ನೇ ಮಾಡುವರು. ಗಿರಿಜಾ ಕಲ್ಯಾಣವೆಂದು ಹೆಸರಿಟ್ಟು, ಕೆಲಸಕ್ಕೆ ಬಾರದ ತುಚ್ಛ ಮನುಷ್ಯರನ್ನು ಪರ್ವತರಾಜನ ಪ್ರತಿನಿಧಿಗಳೆಂದೂ ಶಿವನ ಸಂಗಡಿಗರಾದವರ ಪ್ರತಿನಿಧಿಗಳೆಂದೂ ಬೀಗತನಕ್ಕೆ ಬಿಟ್ಟು, ದೊಡ್ಡವರೆಲ್ಲ ಸೇರಿ ಕಣ್ಣುಕಟ್ಟಿನ ಆಟವನ್ನಾಡುವರಲ್ಲಾ! ಅದಕ್ಕೆ ಬದಲು ಬಡಹುಡುಗಿ ಯೊಬ್ಬಳನ್ನು ತಂದು ಗಿರಿಜಾ ಕಲ್ಯಾಣದ ಸವಿನೆನಪಿನಮೇಲೆ ಸಾಲಂಕೃತ ಕನ್ಯಾದಾನ ಮಾಡಿ, ದೇವರ ಉತ್ಸವದ ಹಿಂದೆ ನೂತನ ದಂಪತಿಗಳ ಮೆರೆ ವಣಿಗೆಯನ್ನೇರ್ಪಡಿಸಿದ್ದರೆ, ಪಾರ್ವತೀಪರಮೇಶ್ವರರಿಗೆ ಸಂತೋಷವಾಗು ತ್ತಿರಲಿಲ್ಲವೆ? ಆ ರೀತಿ ಮಾಡದೆ ಮನುಷ್ಯರನ್ನು ಪರ್ವತರಾಜನ ಮತ್ತು ದೇವರ ಪ್ರತಿನಿಧಿಗಳೆಂದು ಸಾರಿ ಎಂಥ ಪಾಪವನ್ನು ಮಾಡಿದರು! ಅವರ ಬೊಂಬೆಯ ಕುಣಿತದಲ್ಲಿ ಭಾಗಿಯಾದ ನನಗೂ ಅವರ ಪಾಪದಲ್ಲಿ ಪಾಲಿದೆ

ಯಲ್ಲವೆ? ಪಾಮರರ ಈ ಮರುಳಾಟವನ್ನು ಕಂಡು ಪಾರ್ವತೀಪರಮೇಶ್ವರ ರಿಗೆಷ್ಟು ಸಂಕಟವಾಗಿದೆಯೋ ಬಲ್ಲವರಾರು? ಇತರರನ್ನು ಆಕ್ಷೇಪಿಸಲು ನನಗೆಲ್ಲಿಯ ಅಧಿಕಾರ? ಅಥವಾ ನಾನೂ ಪಾಪದಲ್ಲಿ ಭಾಗವನ್ನು ಪಡೆದ ಮೇಲೆ ನನಗೂ ಪ್ರಾಯಶ್ಚಿತ್ತವಾಗಬೇಡವೆ?'' ಎಂದು ಗುಣಿತಹಾಕಿ ಕೊನೆಗೆ ಪ್ರಾಯಶ್ಚಿತ್ತವಾಗಬೇಕೆಂದೇ ನಿರ್ಧರಿಸಿದರು. ಪ್ರಾಯಶ್ಚಿತ್ತವು ಒಡವೆಯಾದ ಕನ್ಯೆಯ ಮದುವೆಯ ವ್ಯವಸ್ಥೆಯ ರೂಪವನ್ನೇ ತಳೆಯ ಬೇಕೆಂದೂ ಸಿದ್ಧಾಂತಮಾಡಿದರು.

ಅಷ್ಟರಲ್ಲಿ ಆಗಂತುಕರ ಸಾಮಾನುಗಳಿದ್ದ ಸ್ಥಳದಿಂದ, ''ಅಮ್ಮಾ! ಈ ಹೂವುಗಳನ್ನು ನೋಡಮ್ಮ, ಇವನ್ನೆಲ್ಲಾ ಸೇರಿಸಿ ಹಾರವೊಂದನ್ನ ಕಟ್ಟಲೇನಮ್ಮ?'' ಎಂಬ ಮಾತುಗಳು ಕೇಳಿಸಿದುವು. ರಾಯರು ತಿರುಗಿ ನೋಡಿ ಬೆಕ್ಕಸಬೆರಗಾದರು. ವಯಸ್ಸು ಹನ್ನೆರಡಾದರೂ ದೇಹಪುಷ್ಟಿ ಯಲ್ಲಿ ಹದಿನಾಲ್ಕು ವರುಷ ವಯಸ್ಸಿನವರನ್ನೂ ಮೀರಿಸಿದ ಹುಡುಗಿ ಯೊಬ್ಬಳು ಕಾವೇರಿಯ ತೀರಪ್ರದೇಶದಿಂದ ತಾನು ಕೊಯ್ದು ತಂದಿದ್ದ ಬಗೆಬಗೆಯ ಬಣ್ಣಗಳ ಹೂಗಳನ್ನು ತಾಯಿಗೆ ತೋರಿಸುತ್ತ ನಿಂತಿದ್ದಳು. ದಿಗಂತದ ಕಡೆಗೆ ಜಾರುವುದಕ್ಕಾಗಿ ಇಳಿಮುಖವಾಗಿದ್ದ ಸೂರ್ಯಬಿಂಬದ ಹೊಂಬಿಸಿಲು ಮುಖದ ಮೇಲೆ ಬಿದ್ದು ಅವಳ ರೂಪವು ಇಮ್ಮಡಿಯಾಗಿ ರಮಣೀಯವಾಗಿದ್ದಿತು. ಬಾಲ್ಯವಯಸ್ಸಿಗೆ ತಕ್ಕ ಮುಗ್ಧಭಾವವು ಆ ರೂಪಕ್ಕೆ ಒಪ್ಪವಿಕ್ಕಿತು.

ಮನುಷ್ಯರನ್ನು ದೇವರ ಪ್ರತಿನಿಧಿಗಳೆಂದು ಭಾವಿಸುವುದು ಪಾಪ ವೆಂದು ಸಿದ್ಧಾಂತಮಾಡಿದ್ದ ಬಾಲಕೃಷ್ಣರಾಯರ ಮನಸ್ಸು ಕೂಡ ಅವಳ ಸೌಂದರ್ಯಕ್ಕೆ ಮನಸೋತು ತನ್ನ ಸಿದ್ಧಾಂತವನ್ನು ಕ್ಷಣಕಾಲ ಮರೆತು ಅವಳು ಕನ್ಯಕಾಪರಮೇಶ್ವರಿಯಂತಿದ್ದಳೆಂದು ಭ್ರಮಿಸಿತು. ರಂಗಮ್ಮನವರು ಸಂಭ್ರಮದಿಂದ ಮೇಲಕ್ಕೆದ್ದು ಮಗಳನ್ನಪ್ಪಿ ''ಬಂದೆಯಾ ತಾಯಿ! ಎಲ್ಲಿ ಹೋದೆಯೋ ಎಂದು ನಾನು ಆ ಕಡೆಗೆ ತಿರುಗಿ ತಿರುಗಿ ನೋಡುತ್ತಲೇ ಇದ್ದೆ'' ಎಂದು ಹೇಳಿ ಮಗಳನ್ನೇ ದೃಷ್ಟಿಸಿ ನೋಡುತ್ತಾ ನಿಂತರು. ಮಗಳ ರೂಪವು ತಾಯಿಯ ಪ್ರೇಮದ ದೆಸೆಯಿಂದ ದ್ವಿಗುಣಿತವಾಗಿ, ತಾಯಿಯ ಮನಸ್ಸನ್ನು ಮುಗ್ಧಗೊಳಿಸುವ ಸಮ್ಮೋಹಿನೀ ಪ್ರಯೋಗವಾಗಿ ಪರಿಣಮಿ

ಸಿತು. ರಂಗಮ್ಮನವರು ಮಗಳ ಕೆನ್ನೆಗೆ ಮುತ್ತಿಟ್ಟು, "ಪುಟ್ಟ! ಗಿರಿಜ! ದೃಷ್ಟಿಯಾಗುವಂತಿದ್ದೀಯಲ್ಲೆ! ನಿಜವಾಗಿಯೂ ಕನ್ಯಾಕುಮಾರಿಯಂತಿದ್ದೀಯಮ್ಮ. ನಿನ್ನ ಹೆಸರಿಗೆ ತಕ್ಕಹಾಗಿದ್ದೀಯೆ. ನಿನ್ನ ಕೈಹಿಡಿಯುವವನ ಪುಣ್ಯವೇ ಪುಣ್ಯ" ಎಂದರು.

ಅತ್ತ, ಬಿಟ್ಟ ಕಣ್ಣುಗಳು ಬಿಟ್ಟಂತೆಯೇ ಬೆರಗಾಗಿ ಕುಳಿತಿದ್ದ ಬಾಲಕೃಷ್ಣರಾಯರು "ನಿಜ, ನಿಜ ಅವನ ಪುಣ್ಯವೇ ಪುಣ್ಯ. ಹುಡುಗಿ ಕೈತೊಳೆದುಕೊಂಡು ಮುಟ್ಟುವಂತಿದ್ದಾಳೆ. ಬ್ರಹ್ಮನ ಕೈವಾಡಕ್ಕೂ ಜಾಣತನಕ್ಕೂ ಆದರ್ಶವಾಗಿದ್ದಾಳೆ" ಎಂದುಕೊಂಡರು. ತಾಯಿಯು ಆಡಿದ ಮಾತಿಗೆ ನಸುನಾಚಿ ಗಿರಿಜ ಹೂಗಳ ಗೊಂಚಲುಗಳಿಂದ ತಾಯಿಯ ಬೆನ್ನಿನಮೇಲೆ ಹೊಡೆದು "ಹೋಗಮ್ಮ, ಹೋಗೆ. ಏನೇನೋ ಹೇಳುತ್ತೀಯೆ" ಎಂದಳು. ಲಜ್ಜೆಯಿಂದ ಕೆಂಪೇರಿದ ಅವಳ ಮುಖವು ಮತ್ತಷ್ಟು ಸೊಗಸಾಗಿ ರಂಜಿಸಿತು. ತಾಯಿ ಮಗಳ ಸಂಭಾಷಣೆಯನ್ನು ಕೇಳಿ ಲಕ್ಷ್ಮೀನಾರಣಪ್ಪನವರು ನಿಟ್ಟುಸಿರು ಬಿಟ್ಟು "ತ್ರಿಕಾಲ ಸ್ನಾನ ಮಾಡುತ್ತೇನೆ. ಯಾವ ಕರ್ಮಕ್ಕೂ ಲೋಪವಿಲ್ಲದಂತೆ ಕರ್ಮಠನಾಗಿದ್ದೇನೆ. ಆದರೂ ಭೇತಾಳ ಮಾತ್ರ ಬೆನ್ನು ಬಿಡುವಂತಿಲ್ಲ. ಕನ್ಯಾದಾನ ಮಾಡುವ ಪುಣ್ಯ ನನಗೆಲ್ಲಿದೆ, ಹೇಳು" ಎಂದು ಹೇಳಿ ತಲೆಯ ಕೂದಲನ್ನು ಚೌಕದಿಂದ ಒರಸಿಕೊಳ್ಳುತ್ತ ನಿಂತರು.

ಪತಿಯ ಮಾತನ್ನು ಕೇಳಿ ರಂಗಮ್ಮನವರೂ ನಿಟ್ಟುಸಿರು ಬಿಟ್ಟು "ಋಷಿಗಳ ಹಾಗಿದ್ದೀರಿ. ನಿಮ್ಮನ್ನು ದೂಷಿಸುವ ಜನರಿಗೆ ನಿಜವಾಗಿಯೂ ಕಣ್ಣಿಲ್ಲ. ನೋಡೋಣ. ಹರಕೆ ಹನ್ನೆರಡು ವರ್ಷವೆಂತ ಹೇಳ್ತಾರೆ. ಹನ್ನೆರಡು ವರ್ಷದಿಂದ ಹರಕೆ ಸಲ್ಲಿಸಿದ್ದೇವೆ. ಆ ಮಹಾತಾಯಿ ದಯೆ ಹೇಗಿದೆ ಅಂತ ನೋಡೋಣ. ಪೇಚಾಡಬೇಡಿ" ಎಂದು ಸಮಾಧಾನ ಹೇಳಿದರು. ಲಕ್ಷ್ಮೀನಾರಣಪ್ಪನವರು "ಆ ಮಹಾತಾಯಿ ದಯೆ ತೋರಿದರೂ ನಮ್ಮೂರಿನ ಮಹಾಜನರಿದ್ದಾರಲ್ಲ, ಮಹಾನುಭಾವರು. ಅವರು ಒಲಿದರೆ ತಾನೆ ನಮ್ಮ ಕೆಲಸ ಸಿದ್ಧಿಸುವುದು" ಎಂದರು. ರಂಗಮ್ಮನವರು ನಿಟ್ಟುಸಿರುಬಿಟ್ಟು "ಅದೂ ನಿಜ. ಕೆಟ್ಟರೆ ನಗುತ್ತಾರೆ. ಬದುಕಿದರೆ ಹೊಟ್ಟೆ ಕಿವುಚಿಕೊಳ್ಳುತ್ತಾರೆ. ಏನು ಜನವೋ ಹಾಳು ಜನ. ನೀವು

ಮಠದವರಿಗಾದರೂ ತಿಳಿಸಬಾರದೆ?'' ಎಂದರು. ಲಕ್ಷ್ಮೀನಾರಣಪ್ಪನವರು ಸ್ವಲ್ಪ ನಕ್ಕು ''ಆಗ ಉರಿಯುವ ಗಾಯಕ್ಕೆ ಉಪ್ಪು ಕೂರಿದಂತೆಯೇ. ಮಹಾಜನರ ಅಭಿಪ್ರಾಯಕ್ಕೆ ಅವರೇಕೆ ಎದುರು ಹೇಳ್ತಾರೆ? ಅವರು ಸಹಾಯಮಾಡುವ ಭರವಸೆಯೇನು? ಕಾವೇರೀ ತೀರದಲ್ಲಿ ನಿಂತು ಕೆಟ್ಟ ಯೋಚನೆ ಮಾಡಬಾರದು. ಜನರನ್ನು ನಾವು ಆಕ್ಷೇಪಿಸಿದ್ದು ಸರಿಯಲ್ಲ. ನಮ್ಮ ಪ್ರಾರಬ್ಧ ಕರ್ಮಕ್ಕೆ ಯಾರೇನು ಮಾಡುವರು?'' ಎಂದರು.

ಬಾಲಕೃಷ್ಣರಾಯರು ಮೈಯೆಲ್ಲಾ ಕಿವಿಯಾಗಿ ಈ ಮಾತುಗಳನ್ನು ಕೇಳಿದರು. ವಾಸ್ತವ ಸಂಗತಿಗಳೇನೆಂಬುದನ್ನು ತಿಳಿಯಲು ಅವರಿಗೆ ಬಹಳ ಕುತೂಹಲವಾಯಿತು. ಗಿರಿಜು ಮೆಟ್ಟಲಿನ ಮೇಲೆ ಕುಳಿತು ಕಾಲನ್ನು ನೀರಿನಲ್ಲಿ ಇಳಿಯಬಿಟ್ಟುಕೊಂಡು, ಕಾಡುಹೂಗಳನ್ನು ಒಂದೊಂದಾಗಿ ನೀರಿನ ಮೇಲೆ ತೇಲಬಿಟ್ಟು ಅವುಗಳನ್ನು ನೋಡಿ ನೋಡಿ ಆನಂದಿಸು ತ್ತಿದ್ದಳು. ರಂಗಮ್ಮನವರು ''ಕಾಲು ಜಾರೀತೇ ತಾಯಿ, ಜೋಪಾನ'' ಎಂದು ರಾಗವಾಗಿ ಎಳೆದೆಳೆದು ಹೇಳಿ, ಗಂಡನು ಒದ್ದೆಮಾಡಿದ್ದ ಬಟ್ಟೆ ಗಳನ್ನು ಒಗೆಯುತ್ತಿದ್ದರು.

ಬಾಲಕೃಷ್ಣರಾಯರು ತಮ್ಮ ಮಾತಿಗೆ ಅದೇ ಸಮಯವೆಂದು ಭಾವಿಸಿ ಲಕ್ಷ್ಮೀನಾರಣಪ್ಪನವರು ತಮ್ಮ ಬಳಿಗೆ ಬರುವಂತೆ ಸಂಜ್ಞೆಮಾಡಿ ಕರೆದು ಅವರು ಸಮೀಪಕ್ಕೆ ಬಂದ ಕೂಡಲೆ ''ದಯಮಾಡಿ ಸ್ವಾಮಿ. ಕೂತುಕೊಳ್ಳಿ. ಸೂರ್ಯನು ಇನ್ನು ಸ್ವಲ್ಪ ಹೊತ್ತಿಗೆಲ್ಲಾ ಮುಳುಗುತ್ತಾನೆ. ನೀವು ಇಷ್ಟು ಹೊತ್ತಿನಲ್ಲಿ ಸ್ನಾನ ಮಾಡಿದ್ದು ನೋಡಿ ಸಂತೋಷವಾಯಿತು. ನಾನೂ ಸ್ನಾನಕ್ಕೇ ಬಂದೆ. ಕೂಡಿ. ನಿಮ್ಮದು ಯಾವ ಊರು? ಎಲ್ಲಿ ಇಳಿದಿದ್ದೀರಿ?'' ಎಂದರು. ರಾಯರು ಸ್ನಾನಮಾಡುತ್ತಿದ್ದುದು ಆರೋಗ್ಯದ ಉದ್ದೇಶದಿಂದ. ಲಕ್ಷ್ಮೀನಾರಣಪ್ಪನವರಿಗೆ ಅದು ತಿಳಿಯಲು ಕಾರಣ ವಿರಲಿಲ್ಲ. ರಾಯರೂ ತಮ್ಮಂತೆಯೇ ತ್ರಿಕಾಲ ಸ್ನಾನ ಮಾಡುವ ಕರ್ಮಠ ರೆಂದು ಭಾವಿಸಿ ಅವರು ಆನಂದಪಟ್ಟು ರಾಯರ ಬಳಿ ಕುಳಿತು, ''ನಮ್ಮ ಊರೊಂದು ಕೊಂಪೆ, ದೇವರು. ನಂಜನಗೂಡಿಗೆ ಗಿರಿಜಾ ಕಲ್ಯಾಣ ನೋಡಲು ಹೋಗಿದ್ದೆವು. ಇಲ್ಲಿ ಚತ್ರದಲ್ಲಿ ತಂಗಿದ್ದು ನಾಳೆ ಮುಂದಕ್ಕೆ ಪ್ರಯಾಣಮಾಡುತ್ತೇವೆ. ಈಗ್ಗೆ ಹನ್ನೆರಡು ವರ್ಷಗಳಿಂದಲೂ ಭಕ್ತಿ

ಯಿಂದ ಈ ಉತ್ಸವಕ್ಕೆ ತಪ್ಪದೆ ಪ್ರತಿವರ್ಷವೂ ಬರುತ್ತಿದ್ದೇವೆ. ಆದರೆ ಪ್ರಯಾಣ ಬಹಳ ಕಷ್ಟ. ಇಂಥ ಯಾತ್ರೆ ತೀರ್ಥಗಳೂ ಉತ್ಸವ ವೈಭವಗಳೂ ಬಡವರಿಗಲ್ಲ'' ಎಂದರು. ಸಂಧ್ಯಾಕಾಲದ ಸ್ನಾನವೇ ಅವರಿಬ್ಬರ ಮನಸ್ಸನ್ನೂ ಒಟ್ಟುಗೂಡಿಸುವ ಸಮಾನ ಧರ್ಮವಾಯಿತು.

ಬಾಲಕೃಷ್ಣರಾಯರು ''ಮತ್ತಾವ ಯಾತ್ರಾಸ್ಥಳಕ್ಕೂ ಹೋಗದೆ ನಂಜನಗೂಡಿನ ಗಿರಿಜಾ ಕಲ್ಯಾಣದ ಉತ್ಸವಕ್ಕೇ ಹನ್ನೆರಡು ವರ್ಷಗಳಿಂದ ಹೋಗಿಬರುತ್ತಿರುವುದಕ್ಕೆ ಕಾರಣವೇನೋ ಇರಬೇಕು. ನನಗೆ ತಿಳಿಸ ಬಹುದೆ?'' ಎಂದರು. ಲಕ್ಷ್ಮೀನಾರಣಪ್ಪನವರು ''ತಿಳಿಸದೆ ಏನು, ದೇವರು? ಪರಸ್ಥಳದಲ್ಲಿ ನನ್ನಂಥ ಬಡವನನ್ನ ಇಷ್ಟು ಆದರದಿಂದ ಮಾತನಾಡಿಸುವವರು ಯಾರು? ಆದರೆ ನನ್ನದು ದುಃಖದ ಕಥೆ. ವಿಸ್ತರಿಸಿ ಹೇಳಿ ನಿಮ್ಮ ಚಿತ್ತಕ್ಕೆ ಆಯಾಸಪಡಿಸಲು ನನಗಿಷ್ಟವಿಲ್ಲ. ನಮ್ಮ ತಂದೆ ಯವರ ಸ್ನೇಹಿತರೊಬ್ಬರು ಮೃತರಾದರು. ಅವರಿಬ್ಬರಿಗೂ ಏಕದೇಹ ನ್ಯಾಯ. ಅವರು ಸ್ಮಾರ್ತರು. ನಾವು ವೈಷ್ಣವರು. ಮೃತರ ಮನೆ ಯವರು ಹನ್ನೊಂದನೆಯ ದಿನದ ಹೊತ್ತಿಗೆ ಗೋದಾವರಿ ಬ್ರಾಹ್ಮಣರನ್ನು ಬರಹೇಳಿ ಬರೆದಿದ್ದರು. ಆದರೆ ಅವರು ಬರಲಿಲ್ಲ. ಏಕದೇಹನ್ಯಾಯದಿಂದಿದ್ದ ಸ್ನೇಹಿತನಿಗೆ ಅಪರಕರ್ಮಗಳು ಸರಿಯಾಗಿ ನಡೆಯದೆ ಲೋಪವಾಗುವುದಲ್ಲಾ ಎಂದು ನಮ್ಮ ತಂದೆಯವರು ಕಳವಳಪಟ್ಟು, ಹನ್ನೊಂದನೆಯ ದಿನದ ಕರ್ಮ ಕಾಲದಲ್ಲಿ ಸೂತಕಾನ್ನವನ್ನು ತಾವೇ ತಿಂದು ಪ್ರಾಯಶ್ಚಿತ್ತ ಮಾಡಿಕೊಳ್ಳು ವುದಾಗಿ ನಿರ್ಧರಿಸಿದರು'' ಎಂದರು.

ರಾಯರ ಮನಸ್ಸನ್ನಾವರಿಸಿದ್ದ ಹೆಮ್ಮೆಯು ಎಲ್ಲಿಗೋ ಪಲಾಯನ ಮಾಡಿ ಅವರು ಆಶ್ಚರ್ಯದಿಂದ ಬೆರಗಾದರು. ಒಂದೆರಡು ಕ್ಷಣ ಸ್ತಬ್ಧರಾಗಿ ಕುಳಿತಿದ್ದು ಲಕ್ಷ್ಮೀನಾರಣಪ್ಪನವರು ಮಾತುಗಳನ್ನು ಮುಂದುವರಿಸು ವಷ್ಟರಲ್ಲಿ ''ನಿಮ್ಮ ತಂದೆ ಎಂಥ ಮಹಾನುಭಾವರು, ಸ್ವಾಮಿ. ಅವರ ಸ್ನೇಹವು ಎಷ್ಟು ದೊಡ್ಡದು ನಮ್ಮಪ್ಪ. ಆಮೇಲೆ?'' ಎಂದರು.

ಲಕ್ಷ್ಮೀನಾರಣಪ್ಪನವರು ''ಅವರ ನಿರ್ಣಯವು ನಡೆದೇಹೋಯಿತು. ನಮ್ಮ ತಂದೆಯವರ ದರ್ಪವೂ ನಿರ್ಧರವೂ ಅಂಥವು ನೋಡಿ. ಅವರು ಇಟ್ಟ ಹೆಜ್ಜೆಯನ್ನು ಎಂದೂ ಹಿಂದಕ್ಕೆ ತೆಗೆದವರಲ್ಲ. ಸ್ಮಾರ್ತರ ಮನೆಯ

ಸೂತಕಾನ್ನ ತಿಂದವರೆಂಬ ಕಳಂಕವನ್ನು ಹೇರಿ ಊರಿನವರೆಲ್ಲರೂ ಅವರನ್ನು ಹೊರಗೆ ಹಾಕಿ ಸವ್ಯವಹಾರವನ್ನು ನಿಲ್ಲಿಸಿಬಿಟ್ಟರು. ನಾವುಗಳು ಎಷ್ಟು ಬೇಡಿದರೂ ಫಲವಾಗಲಿಲ್ಲ. ನಮ್ಮೂರಿನ ವೈಷ್ಣವರಿಗೆ ದಯೆ ಬರಲಿಲ್ಲ. ನಮ್ಮ ಗ್ರಹಚಾರಕ್ಕೆ ಯಾರು ಹೊಣೆ ಸ್ವಾಮಿ? ನಮ್ಮ ತಂದೆಯವರು ಸ್ಮಾರ್ತರ ಮನೆಯ ಸೂತಕಾನ್ನ ತಿನ್ನಕೂಡದೆಂತ ಎಷ್ಟೋ ಬೇಡಿದೆವು. ನಾನು ಕೂಡ ಕೇಳಿಕೊಂಡೆ. ಅವರು ಲಕ್ಷ್ಯಮಾಡಲಿಲ್ಲ. ಅವರು ಹೇಳಿದ್ದನ್ನು ಕೇಳೋಣವಾಗಲಿ 'ಅಯ್ಯೋ ಹುಚ್ಚಪ್ಪ! ಮಾಧ್ವರಿಗಿಂತ ಮೊದಲಿದ್ದವರೆಲ್ಲರೂ ಸ್ಮಾರ್ತರೇ. ಅಲ್ಲವೇನೊ! ಸ್ಮಾರ್ತ ರಕ್ತ ಈಗಲೂ ನಮ್ಮ ದೇಹದಲ್ಲಿದ್ದಂತಾಗಲಿಲ್ಲವೆ? ನಮ್ಮ ಶೀನಣ್ಣ ಪ್ರೀತಿಯ ಪುತ್ಥಳಿಯಾಗಿದ್ದ. ಅವನು ಸ್ಮಾರ್ತನೂ ಅಲ್ಲ. ವೈಷ್ಣವನೂ ಅಲ್ಲ. ಶ್ರೀವೈಷ್ಣವನೂ ಅಲ್ಲ. ಅವನು ಸ್ನೇಹದ ಅಮೃತ ಪುತ್ಥಳಿ. ನಾವು ಅವನ ಸ್ನೇಹಕ್ಕೆ ಅಯೋಗ್ಯರು. ಆದಕ್ಕೇ ದೇವರು ಅವನನ್ನು ತನ್ನ ಹತ್ತಿರಕ್ಕೆ ಸೆಳೆದುಕೊಂಡ. ಅವನ ವಿಚಾರದಲ್ಲಿ ಕರ್ಮಲೋಪಕ್ಕೆ ಅವಕಾಶಕೊಟ್ಟು ನಾನು ಕಾಗೆಯಂತೆ ಬದುಕಿರಬೇಕೆ? ಅಲ್ಲಿ ಅವನನ್ನು ಕಂಡಾಗ ಏನು ಹೇಳಲಿ? ವೈದಿಕ ಬ್ರಾಹ್ಮಣರಲ್ಲಿ ಅನೇಕರು ಠಕ್ಕುಗಾರರೋ, ಮಗು, ಠಕ್ಕುಗಾರರು. ದುಡ್ಡಿನ ಆಸೆ ತೋರಿಸಿ ಗೋದಾವರೀ ಬ್ರಾಹ್ಮಣರನ್ನು ಕರೆಸಿ ಸೂತಕಾನ್ನ ತಿನ್ನಿಸುತ್ತಾರೆ. ಸೂತಕಾನ್ನ ತಿನ್ನುವುದು ನಮಗೆ ನಿಷಿದ್ಧವಾದರೆ ಅವರಿಗಲ್ಲವೆ? ಪರಕೀಯರ ಮಕ್ಕಳನ್ನ ಬಾವಿಗೆ ಬಿಟ್ಟು ಆಳವನ್ನೇಕೆ ನೋಡಬೇಕು' ಎಂದರು. ಆ ಬಳಿಕ ಸೂತಕಾನ್ನ ತಿಂದರು. ಪ್ರಾಯಶ್ಚಿತ್ತವನ್ನೂ ಮಾಡಿಕೊಂಡರು. ಆದರೂ ಮಹಾಜನರು ಹೊರದೂಡಿದರು. ನಮ್ಮ ತಂದೆಯವರು ಹೆದರಲಿಲ್ಲ. 'ಅಪವಿತ್ರಃ ಪವಿತ್ರೋ ವಾ ಸರ್ವಾವಸ್ಥಾಂ ಗತೋऽಪಿ ವಾ। ಯಸ್ಸ್ಮರೇತ್ಪುಂಡರೀಕಾಕ್ಷಂ ಸ ಬಾಹ್ಯಾಭ್ಯಂತರ ಶ್ಶುಚಿಃ ॥' ಎಂಬುದನ್ನು ಸಂಧ್ಯಾವಂದನೆಯಲ್ಲಿ ಬೊಗುಳಿಯೂ ಅರ್ಥ ತಿಳಿಯದವರ ಗೊಡವೆಯೇ ನನಗೆ ಬೇಡ ಎನ್ನುತ್ತಿದ್ದು ಕೊನೆಗೆ ಅವರು ಕಣ್ಣು ಮುಚ್ಚಿಕೊಂಡರು. ಮಹಾಜನರು ಅವರ ಮೇಲಿನ ದ್ವೇಷವನ್ನು ನಮ್ಮ ಮೇಲೆ ತೀರಿಸುತ್ತಿದ್ದಾರೆ. ನಮಗೆ ಬಹಿಷ್ಕಾರ ಹಾಕಿದ್ದಾರೆ. ಭಾಗ್ಯವಂತರ ಪಾಪಗಳೆಲ್ಲ ಮುಚ್ಚುತ್ತವೆ. ಬಡವರ ಪಾಪಗಳು ಮುಚ್ಚಲು

ಹಣದ ಹಚ್ಚಡವಿಲ್ಲ. ಇಷ್ಟಕ್ಕೂ ನಾವು ಮಾಡಿದ ಪಾಪವಾದರೂ ಏನು ದೇವರು? ನಾನು ಕರ್ಮಠನಾಗಿದ್ದೇನೆ. ಶಾಸ್ತ್ರರೀತಿ ನಡೆಯುತ್ತಿದ್ದೇನೆ. ಆದರೂ ನಮ್ಮೂರಿನವರಿಗೆ ಕರುಣವಿಲ್ಲ'' ಎಂದರು.

ಮಹಾಜನರ ಅತ್ಯಾಚಾರವನ್ನು ಕೇಳಿ ಬಾಲಕೃಷ್ಣರಾಯರಿಗೆ ರೇಗಿ ಹೋಯಿತು. ಅವರು ರೋಷದ ಆವೇಶ ಭರದಲ್ಲಿ ''ಭ್ರಷ್ಟರು. ಅವರ ಊರನ್ನೇ ಬಿಟ್ಟರಾಯಿತು'' ಎಂದರು. ಲಕ್ಷ್ಮೀನಾರಣಪ್ಪನವರು ''ಊರನ್ನು ಬಿಟ್ಟು ಎಲ್ಲಿಗೆ ಹೋಗೋಣ? ಬಡವರ ಬಾಳು ಗೋಳಿನ ಬಾಳು, ದೇವರು'' ಎಂದರು. ಬಾಲಕೃಷ್ಣರಾಯರು ''ಹಾಗೇಕೆ ಪೇಚಾಡುತ್ತೀರಿ? ನಮ್ಮ ಊರಿನಲ್ಲಿ ನೆಲೆಯಾಗಿ ನಿಂತುಬಿಡಿ. ನಾವೆಲ್ಲ ಅನುಕೂಲ ಮಾಡಿಕೊಡುತ್ತೇವೆ'' ಎಂದರು. ಲಕ್ಷ್ಮೀನಾರಣಪ್ಪನವರು ತಮ್ಮ ಕಿವಿಗಳಿಗೆ ಆ ಮಾತುಗಳು ಕೇಳಿದುದನ್ನೇ ತಾವು ನಂಬಲಾರದೆ ಕೃತಜ್ಞತೆಯಿಂದ ತುಂಬಿದ ನಗುವನ್ನು ಸೂಸಿದರು.

ಬಾಲಕೃಷ್ಣರಾಯರು ಆ ಬಳಿಕ ''ಅದೆಲ್ಲಾ ಸರಿ. ನಿಮ್ಮ ಹನ್ನೆರಡು ವರ್ಷದ ಹರಕೆಯ ಕಥೆಯೇನು?'' ಎಂದು ಕೇಳಿದರು. ಲಕ್ಷ್ಮೀನಾರಣಪ್ಪನವರು ''ಹೆಚ್ಚೇನೂ ಇಲ್ಲ. ನಮ್ಮ ಊರಿನಲ್ಲಿ ನಾವು ವ್ಯವಹಾರ ಬಾಹಿರರಾದ ಕಾರಣ, ನಮ್ಮ ಹುಡುಗಿಗೆ ವಿವಾಹವಾಗುವ ಹಂಬಲೇ ಇಲ್ಲದೆ ಹೋಗಬಹುದೆಂಬ ಶಂಕೆಯೂ ಆತಂಕವೂ ಉಂಟಾದುವು. ಆದಕಾರಣ, ಅವಳಿಗೆ ಗಿರಿಜಾ ಎಂದು ಹೆಸರಿಡಬೇಕೆಂದೂ, ಹನ್ನೆರಡು ವರ್ಷಗಳ ಕಾಲ ಪ್ರತಿ ವರ್ಷವೂ ತಪ್ಪದೆ ಗಿರಿಜಾ ಕಲ್ಯಾಣವನ್ನು ನೋಡಲು ನಂಜನಗೂಡಿಗೆ ಹೋಗಿಬರಬೇಕೆಂದೂ ಸಂಕಲ್ಪ ಮಾಡಿದೆವು. ಮುಳುಗಿ ಹೋಗುವವರಿಗೆ ಜೀವವನ್ನುಳಿಸಿಕೊಳ್ಳುವ ಆಸೆ ಬಹಳ ಪ್ರಬಲ, ದೇವರು, ಬಹಳ ಪ್ರಬಲ. ಈಗ ಗೋದಾವರೀ ತೀರಕ್ಕೆ ಹೋಗಿ, ಗೋದಾವರೀ ಬ್ರಾಹ್ಮಣರಲ್ಲಿ ವೈಷ್ಣವ ಪಂಗಡದವರೇನಾದರೂ ಸಿಕ್ಕಿದರೆ ಅವರಲ್ಲಿ ಗಂಡನ್ನು ಹುಡುಕಿ ಮಗಳಿಗೆ ಮದುವೆ ಮಾಡಬೇಕೆಂದಿದ್ದೇವೆ. ಆ ಮಹಾ ತಾಯಿ ಗಿರಿಜಾ ಮಾತೆಯ ದಯೆಯಿಂದ ನಮ್ಮ ಗಿರಿಜೆಗೊಂದು ಒಳ್ಳೆಯ ಗಂಡು ಸಿಕ್ಕಬೇಕು. ಹುಡುಗಿಗೆ ಹನ್ನೆರಡು ವರ್ಷಗಳಾದುವು. ಎಲ್ಲರೂ ಮೂದಲಿಸುತ್ತಿದ್ದಾರೆ. ಆದರೆ ಗಂಡೇ ದೊರೆತಿಲ್ಲ'' ಎಂದರು.

ಬಾಲಕೃಷ್ಣರಾಯರು ''ಗಂಡು ದೊರೆಯದೆ ಏನಂತೆ! ನಿಮ್ಮ ಹುಡುಗಿಯ ಕೈಹಿಡಿಯುವವನ ಪುಣ್ಯವೇ ಪುಣ್ಯ'' ಎಂದರು. ಆ ಬಳಿಕ ಉಪಚಾರ ವಾಕ್ಯಗಳೆಲ್ಲ ಮುಗಿದಮೇಲೆ, ಆಗಂತುಕರು ಮೂವರೂ ಬಾಲಕೃಷ್ಣರಾಯರ ಮನೆಯಲ್ಲಿ ಮೂರು ದಿನಗಳಿರತಕ್ಕುದೆಂದೂ, ನಾಲ್ಕನೆಯ ದಿನದಿಂದ ರಾಯರ ಸಹಾಯವನ್ನು ಪಡೆದು ಅವರು ರಾಯರ ಮತ್ತೊಂದು ಮನೆಯಲ್ಲಿ ವಾಸಮಾಡತಕ್ಕುದೆಂದೂ ಇತ್ಯರ್ಥವಾಯಿತು.

ರಾಯರು ಅವರು ಮೂವರನ್ನೂ ತಮ್ಮ ಮನೆಗೆ ಕರೆದುಕೊಂಡು ಹೋಗಿ ತಮ್ಮ ಪತ್ನಿಯೊಡನೆ ''ಮಧ್ಯಾಹ್ನ ಮದುವೆಯ ಮಾತನ್ನೂ ಉರುಟಣೆಯ ಮಾತನ್ನೂ ಆಡಿದ್ದೆವು. ಈಗ ಮದುವೆಗೆ ಸೊಗಸಾದ ಹುಡುಗಿಯೇ ಸಿಕ್ಕಿತು, ನೋಡು'' ಎಂದು ಹೇಳಿದರು. ರುಕ್ಮಿಣಿಯಮ್ಮನವರು ಆ ಮಾತುಗಳನ್ನು ಕೇಳಿ ಬೆಚ್ಚಿದರು; ಅವರ ಮನಸ್ಸಿಗೆ ಬರ ಸಿಡಿಲು ಬಡಿದಂತಾಯಿತು. ಮರುಮಾತನಾಡುವುದಕ್ಕೂ ಅವರಿಗೆ ಸಾಮರ್ಥ್ಯವಿರಲಿಲ್ಲ. ದೆಸೆಗೆಟ್ಟಿದ್ದ ಅವರ ಮನಸ್ಸನ್ನು ಅನಿರ್ವಚನೀಯ ವಾದೊಂದು ಕಗ್ಗತ್ತಲೆಯು ಆವರಿಸಿದ್ದಿತು.

೩

ಅಂದು ರಾತ್ರಿ ರುಕ್ಮಿಣಿಯಮ್ಮನವರಿಗೆ ನೀರವ ರೋದನದ ಜಾಗರಣೆ. ತಾವು ಬದುಕಿರುವಾಗ ರಾಯರು ಮತ್ತೊಂದು ಮದುವೆ ಮಾಡಿಕೊಳ್ಳಕೂಡದೆಂದು ಕಂಠೋಕ್ತವಾಗಿ ತಿಳಿಸಿ ಆಕ್ಷೇಪಿಸಿ ಅವರೆದುರಿಗೆ ಕಣ್ಣೀರನ್ನು ಸುರಿಸಬೇಕೆಂದು ರುಕ್ಮಿಣಿಯಮ್ಮನವರು ಮಾಡಿದ ಪ್ರಯತ್ನವು ಸುತರಾಂ ಸಾಗದೆ ಹೋಯಿತು. ಅದಕ್ಕೆ ಹಲವು ಕಾರಣ ಗಳಿದ್ದುವು. ಮೊದಲನೆಯದು, ಅವರ ಹೆದರಿಕೆಯ ಸ್ವಭಾವ. ಕಾವ್ಯಗಳಲ್ಲಿ ಅನೇಕ ವೇಳೆ ಅರ್ಥವಿಲ್ಲದೆ ಪ್ರಯೋಗವಾಗುವ 'ಭೀರು' ಎಂಬ ಪದವು ರುಕ್ಮಿಣಿಯಮ್ಮನವರ ನಿಜಸ್ವಭಾವವನ್ನು ವ್ಯಕ್ತಪಡಿಸುತ್ತಿದ್ದಿತು. ಎರಡನೆಯದು, ರಾಯರ ದರ್ಪ. ಅವರ ದಾಂಪತ್ಯ ಜೀವನವು ಬಹುಕಾಲ ಸಾಗಿದ್ದರೂ, ಬಾಲಕೃಷ್ಣರಾಯರು ತಮ್ಮ ದರ್ಪದ ಕೋಟೆಯನ್ನು ಬಹು ಭದ್ರವಾಗಿ ಕಾಪಾಡಿಕೊಂಡಿದ್ದರು. ಅವರು ತಮ್ಮ ಹೆಂಡತಿಗೆ ಸ್ವಲ್ಪವೂ

ಸಲಿಗೆಯನ್ನು ಕೊಟ್ಟಿರಲಿಲ್ಲ. ಅದು ಸಾಧ್ಯವೇ ಎಂದು ಕೆಲವರಿಗೆ ಸಂಶಯ ವಾಗಬಹುದು. ಅಂತಹವರು ಜನಜೀವನವನ್ನು ಮತ್ತಷ್ಟು ಪರಿಶೀಲಿಸಿ ನೋಡಿದರೆ ಈಗಿನ ಕಾಲದಲ್ಲಿಯೇ ಅನೇಕ ನಿದರ್ಶನಗಳನ್ನು ಕಾಣಬಹುದು. ರುಕ್ಮಿಣಿಯಮ್ಮನವರು ಪತಿಯನ್ನು ಆಕ್ಷೇಪಿಸಲಾರದೆ ಹೋದುದಕ್ಕೆ ಮೂರನೆಯ ಕಾರಣವು ಅಂದಿನ ಸಾಮಾಜಿಕ ಪರಿಸ್ಥಿತಿ. ಅಲ್ಲದೆ, ಬ್ರಾಹ್ಮಣ ರಲ್ಲಿ ಕೆಲವರು ತಮ್ಮ ಪತ್ನಿಯರಲ್ಲಿ ಅಸಮಾಧಾನ ಹೊಂದಿ "ಘಟಶ್ರಾದ್ಧ" ಮಾಡಿ ಪತ್ನಿಯರನ್ನು ಬಿಟ್ಟ ಕೆಲವು ಸಂದರ್ಭಗಳೂ ರುಕ್ಮಿಣಿಯಮ್ಮ ನವರಿಗೆ ತಿಳಿದಿದ್ದುವು.

ತಮ್ಮ ಪತಿಯೂ ತಾವು ಬದುಕಿರುವಾಗಲೇ ತಮಗೆ ಆ ರೀತಿ ಶ್ರಾದ್ಧಮಾಡಿ ಬಿಟ್ಟುಬಿಟ್ಟರೆ ಗತಿಯೇನೆಂದು ಅವರು ನಡುಗಿದರು. "ಘಟ ಶ್ರಾದ್ಧ" ಮಾಡಿ ಪತ್ನಿಯನ್ನು ಬಿಡುವುದು ಅಷ್ಟು ಸುಲಭವಲ್ಲವೆಂಬ ವಿಚಾರವು ಅವರ ಮನಸ್ಸಿಗೆ ಹೊಳೆಯಲೇ ಇಲ್ಲ. ಅಂತು, ಅಂದಿನ ರಾತ್ರಿ ರುಕ್ಮಿಣಿಯಮ್ಮನವರು ತಮ್ಮ ಸ್ಥಿತಿಯು "ಮುಂದೆ ಹೋದರೆ ಕೆರೆ, ಹಿಂದೆ ಬಂದರೆ ಬಾವಿ" ಎಂದ ಹಾಗಿದ್ದಿತೆಂದು ಭಾವಿಸಿದರು. ಕೊರಗಿ ಕೊರಗಿ ಸಾಕಾಗಿ ನೀರವವಾಗಿ ರೋದಿಸಿದರು. ತಾವು ಪತಿಗೆ ಅಸಮಾಧಾನ ವಾಗುವಂತೆ ವರ್ತಿಸಿದಲ್ಲಿ, ಪತಿಯೇನಾದರೂ ಆಕ್ರೋಶವಶದಿಂದ ಘಟಶ್ರಾದ್ಧಮಾಡಿ "ಕೈ ತೊಳಕೊಂಡರೆ" ಗತಿಯೇನೆಂದು ಶಂಕಿಸಿ ಅವರು ಭೀತಿಯಿಂದ ನಡುಗಿದರು. ಇಲ್ಲದುದನ್ನೂ, ಸಲ್ಲದುದನ್ನೂ ಶಂಕಿಸಿ ಸಂಕಟಪಡುವುದು ಅವರ ಸ್ವಭಾವವಾಗಿದ್ದಿತು.

೪

ದಿನಗಳು ಕಳೆದಹಾಗೆಲ್ಲ ರುಕ್ಮಿಣಿಯಮ್ಮನವರ ಸಂಶಯವು ಬಲಿಯುತ್ತ ಬಂದಿತು. ಅಪರಿಚಯಸ್ಥರಾದ ಪರಸ್ಥಳದವರಿಗೆ ಆಶ್ರಯಕೊಟ್ಟು ಬಾಲಕೃಷ್ಣರಾಯರು "ರಾಜೋಪಚಾರ" ಮಾಡಿಸಲು ಸೊಂಟವನ್ನು ಕಟ್ಟಿದುದಕ್ಕೆ ಗಿರಿಜುವನ್ನು ಮದುವೆಮಾಡಿಕೊಳ್ಳಬೇಕೆಂದಿದ್ದುದೇ ಕಾರಣ ವೆಂದು ರುಕ್ಮಿಣಿಯಮ್ಮನವರು ತರ್ಕಿಸಿ ಸಿದ್ಧಾಂತಮಾಡಿದರು. ರಾಯರು ಗಿರಿಜುವನ್ನು ಹೊಗಳಿದಷ್ಟೂ ರುಕ್ಮಿಣಿಯಮ್ಮನವರ ಹೃದಯದಲ್ಲಿ ಉರಿ ಯೆದ್ದಿತು. ಆದರೂ ಅವರು ಹೊರಗೆ ಏನೊಂದು ಭಾವವನ್ನೂ

ತೋರ್ಪಡಿಸದೆ ತಮ್ಮ ಪತಿಯೊಡನೆ "ನಿಮ್ಮ ಮನಸ್ಸಿಗೆ ಬಂದುದನ್ನು ಮಾಡಿಯೇ ತೀರುತ್ತೀರಿ. ಹೋದವರ್ಷ ಹಿತ್ತಿಲಿನಲ್ಲಿದ್ದ ಬೇವಿನಮರವನ್ನು ಕಡಿದುಹಾಕಬೇಕೆಂದು ತೋರಿದಾಗ ಆ ದಿನ ಬೆಳಗ್ಗೆ ಜ್ವರ ಬಿಟ್ಟಿತ್ತೆಂಬು ದನ್ನೂ ಲಕ್ಷ್ಯಮಾಡದೆ ಮರವನ್ನು ಕಡಿದುರುಳಿಸಿ ಆಮೇಲೆ ತಿಂಗಳು ಕಾಯಿಲೆ ಬಿದ್ದುದಕ್ಕಿಂತಲೆ?" ಎಂದು ಹೇಳಿ ನಕ್ಕರು.

ಬಾಲಕೃಷ್ಣರಾಯರು ಯಾವುದೋ ದೊಡ್ಡ ವಿಷಯವನ್ನು ಪ್ರಸ್ತಾ ವಿಸಲು ಇದು ಅಂಕುರಾರ್ಪಣವೆಂದು ಭಾವಿಸಿ ತಾವೂ ನಗುತ್ತ "ನಾನು ಅಂಥವನೆ. ಸಂಸಾರದ ಭಾರವನ್ನು ವಹಿಸುವವನು ಹಾಗೆಯೇ ಇರಬೇಕು. ಹಟವಿಲ್ಲದ ಮನುಷ್ಯ ಹೆಣದ ಹಾಗೆ" ಎಂದರು. ರಾಯರ ನಗುವಿನಿಂದ ಉತ್ತೇಜಿತರಾಗಿ ರುಕ್ಮಿಣಿಯಮ್ಮನವರು "ಆದರೆ ಹಟದಲ್ಲೂ ವಿಚಕ್ಷಣೆ ವಿವೇಚನೆಗಳು ಬೇಡವೆ? ಈಗ ಪರಸ್ಥಳದವರ ಸಂಸಾರಕ್ಕೆ ಮನೆ ಕೊಟ್ಟು ಇಲ್ಲಿಂದ ಸಾಮಾನುಗಳನ್ನೆಲ್ಲಾ ಕಳುಹಿಸಿ ದೋಪಿಡುವುದು ಯಾವ ದೇವರಿಗೆ ಪ್ರೀತಿ?" ಎಂದರು. ಬಾಲಕೃಷ್ಣರಾಯರು ಅಮೃತಶಿಲೆಯ ಪ್ರತಿಮೆಯಂತೆ ನಿಂತು "ಈ ಪ್ರಪಂಚದಲ್ಲಿ ಸ್ವಲ್ಪಕಾಲವಿರುವ ನಾವೂ ಪರಸ್ಥಳದವರೇ. ವೈಕುಂಠದ ಒಡೆಯ, ಆ ನಮ್ಮಪ್ಪ, ನಮ್ಮೂರಿನಿಂದ ನಮ್ಮನ್ನು ಇಲ್ಲಿಗೆ ಕೆಲವು ವರ್ಷಗಳ ಮಟ್ಟಿಗೆ ಕಳುಹಿಸಿಕೊಟ್ಟಿದ್ದಾನೆ. ಅದೆಲ್ಲಾ ಹೋಗಲಿ. ಆ ಹುಡುಗಿ ಗಿರಿಜ ದಂತದ ಪ್ರತಿಮೆಹಾಗಿದ್ದಾಳೆ, ನೋಡು. ಅವಳಿಗಾಗಿ ಇದೆಲ್ಲಾ ಮಾಡಿದೆ" ಎಂದರು.

ಈ ಮಾತುಗಳನ್ನು ಕೇಳಿ ರುಕ್ಮಿಣಿಯಮ್ಮನವರಿಗೆ ಮೈ ಚಿಟಿ ಗುಟ್ಟಿಹೋಯಿತು. ಆದರೂ ಅತಿಕಷ್ಟದಿಂದ ಸಹಿಸಿಕೊಂಡರು. ತಮ್ಮ ಮನಸ್ಸಿನಲ್ಲಿ "ಗಿರಿಜೆಯಲ್ಲ. ಗಿರಿಜ, ಗಿರಿಜ, ಗಿರಿಜವಾದಳು. ದಂತದ ಪ್ರತಿಮೆಯಂತೆ. ಆ ವಯಸ್ಸಿನಲ್ಲಿ ನಾನೇನು ಕಬ್ಬಿಣದ ಪ್ರತಿಮೆಯಾಗಿದ್ದೆನೆ? ಗಂಡಸರನ್ನು ನಂಬುವುದೇ ಅವಿವೇಕ. ಮಡುವಿನೊಳಗಿನ ಮೊಸಳೆಯನ್ನಾ ದರೂ ನಂಬಬಹುದು; ಗಂಡಸರನ್ನಲ್ಲ" ಎಂದುಕೊಂಡು, ಅಣಕದ ನಗೆಯಿಂದ "ಹಾಗೇ....ಅಯ್ಯೋ ಅದು ನನಗೆ ತಿಳಿಯಲೇ ಇಲ್ಲ ನೋಡಿ. ತಿಳಿದಿದ್ದರೆ ಇನ್ನೂ ಅಷ್ಟು ಸಾಮಾನು ಕೊಡಿ ಎಂತಿದ್ದೆ. ನನ್ನ ಒಂದೆರಡು ಒಡವೆಗಳನ್ನೂ ಕೊಡುತ್ತಿದ್ದೆ. ನನಗೇನು? ಬೇಕಾದಷ್ಟು

ಒಡವೆಗಳನ್ನು ಮಾಡಿಸಿದ್ದೀರಿ. ಅವಳ ಕೈ ಹಿಡಿಯುವವನ ಪುಣ್ಯಕ್ಕೆ ಎಣೆಯೇ ಇಲ್ಲ'' ಎಂದರು.

ರಾಯರು ಅಣಕದ ಸಬಳವನ್ನರಿಯದೆ "ನಿನ್ನ ಮನಸ್ಸೆಷ್ಟು ಧಾರಾಳ! ರೂಪಕ್ಕೆ ತಕ್ಕ ಹೃದಯ. ಗಿರಿಜು ಮನಸ್ಸೂ ಹಾಗೆಯೆ. ನಿನ್ನ ಮನಸ್ಸಿನಂತೆಯೇ ಬಹಳ ಮೃದು. ನಿನ್ನ ಒಡವೆಗಳನ್ನು ಅವಳಿಗೇಕೆ ಕೊಡಬೇಕು? ಅವಳಿಗಾಗಿ ನಾನೇ ಕೆಲವನ್ನು ಮಾಡಹಾಕಿದ್ದೇನೆ. ಆದರೆ, ಅದನ್ನು ಇದುವರೆಗೂ ಯಾರಿಗೂ ತಿಳಿಸಿರಲಿಲ್ಲ'' ಎಂದರು. ರುಕ್ಮಿಣಿಯಮ್ಮನವರ ಕಣ್ಣಿನಲ್ಲಿ ನೀರು ತುಳುಕಾಡಲು ಪ್ರಾರಂಭವಾಯಿತು. ಆದರೆ ರಾಯರು ಆ ಕಡೆಗೆ ತಿರುಗಿ ನೋಡುವಷ್ಟರಲ್ಲಿಯೇ ಅವರು ಹೊರಟುಹೋದರು. ತಮ್ಮ ಮನೋಭಾವವನ್ನು ತೋರ್ಪಡಿಸದಿರಲು ಇನ್ನೂ ಹೆಣಗಬೇಕೆಂಬ ಅವರ ಆಶೆಯೊಂದು; ಪ್ರಾಣದೇವರ ಗುಡಿಯ ಅರ್ಚಕರಾದ ನರಸಿಂಹಾಚಾರ್ಯರು "ರಾಯರೇ, ರಾಯರೇ, ನಾಳೆ ತಮ್ಮ ಕಡೆಯಿಂದ ಪ್ರಾಣದೇವರಿಗೆ ಸೇವಾರ್ಥ'' ಎಂದು ಕೂಗಿಕೊಂಡು ದಡದಡನೆ ಒಳಕ್ಕೆ ನುಗ್ಗಿದುದೊಂದು; ಇವೆರಡು ಕಾರಣಗಳಿಂದ ರುಕ್ಮಿಣಿಯಮ್ಮನವರು ಆ ರೀತಿ ಹೊರಟುಹೋದರು.

ಅತ್ತ ಲಕ್ಷ್ಮೀನಾರಣಪ್ಪನವರಿಗೂ ರಂಗಮ್ಮನವರಿಗೂ ಬಾಲಕೃಷ್ಣರಾಯರು ತಮ್ಮ ಮಗಳನ್ನು ವಿವಾಹಮಾಡಿಕೊಳ್ಳುವ ಪ್ರಯತ್ನದಲ್ಲಿದ್ದರೆಂಬ ಅನುಮಾನವೇ ಉಂಟಾಯಿತು. ರಾಯರು ಅಪರಿಚಿತರಾದ ತಮಗಾಗಿ ಒಂದು ಮನೆಯನ್ನು ಬಿಟ್ಟುಕೊಟ್ಟು "ಮೃಷ್ಟಾನ್ನ'' ಭೋಜನಕ್ಕೆ ವ್ಯವಸ್ಥೆಯನ್ನು ಕಲ್ಪಿಸಿದ್ದುದು; ದಿನದಿನವೂ ರಾಯರಿಗೆ ಗಿರಿಜು ಮೇಲಣ ಪ್ರೀತಿಯು ಹೆಚ್ಚಿದುದು; ಅದರ ಪರಿಣಾಮವಾಗಿ ಅವರು ಲಕ್ಷ್ಮೀನಾರಣಪ್ಪನವರು ಮನೆಯಲ್ಲಿಲ್ಲದಾಗ ಬಂದು ತಮ್ಮ ದರ್ಪದ ಬಿಂಕವನ್ನು ಕೂಡ ತೆಗೆದಿಟ್ಟು ಹುಡುಗಿಯೊಡನೆ ಹುಡುಗನಂತಾಗಿ ಗಾಳಿಯ ಪಟವನ್ನು ಕಟ್ಟಿಕೊಟ್ಟು ಅವಳೊಡನೆ ಆಟವಾಡಿದುದು; ಹುಡುಗಿಯ ತಾಯಿ ಅದನ್ನು ಕಂಡಾಗ ಅವರು ನಾಚಿಕೆಯಿಂದ ಪಟವನ್ನು ಗಿರಿಜು ಕೈಯಲ್ಲಿ ಕೊಟ್ಟು ಕಳ್ಳತನದ ಮಧ್ಯದಲ್ಲಿ ಸಿಕ್ಕಿಬಿದ್ದ ಕಳ್ಳನಂತೆ ತಮ್ಮ ಮನೆಗೆ ಹೊರಟುಹೋದುದು; ಗಿರಿಜು ಕೈ ಹಿಡಿಯುವವನು ಭಾಗ್ಯಶಾಲಿಯೆಂದೂ, ಅನೇಕ

ಸಂದರ್ಭಗಳಲ್ಲಿ ವರಸು ಸಮೀಪದಲ್ಲಿಯೇ ಇದ್ದರೂ ಕಂಕಣಕಾಲವು ಒದಗುವವರೆಗೂ ಗೋಚರಕ್ಕೇ ಬರುವುದಿಲ್ಲವೆಂದೂ ಒಂದೆರಡು ಸಾರಿ ರಾಯರು ಹೇಳಿದ್ದುದು—ಇವೇ ಮುಂತಾದ ವರ್ತನೆಗಳಿಂದ ಆ ಅನುಮಾನವು ದಿನೇ ದಿನೇ ಬಲವಾಯಿತು.

ರಂಗಮ್ಮನವರಿಗೆ ಅದರಿಂದ ಒಟ್ಟಿನಲ್ಲಿ ಸಂತೋಷವೇ ಆಯಿತು. ತಮ್ಮ ಬಡತನದ ವೇಥೆಯನ್ನು ನೀಗಲು ಅದರಿಂದ ಸಹಾಯವಾದೀತೆಂಬುದು ಅವರ ಹಾರೈಕೆ. ಅದರ ಸಂತೋಷದ ಮುಂದೆ, ಬಾಲಕೃಷ್ಣರಾಯರ ವಯಸ್ಸು ನಲವತ್ತಕ್ಕೆ ಕಡಮೆಯಾಗಿರಲಿಲ್ಲವೆಂದು ತೋರುತ್ತಿದ್ದ ಅಂಶವು ಅವರನ್ನು ವಿಶೇಷ ಹೆಚ್ಚಾಗಿ ಬಾಧಿಸಲಿಲ್ಲ. ಲಕ್ಷ್ಮೀನಾರಣಪ್ಪನವರಿಗೆ ಈ ಸಂಬಂಧವು ಸರಿಬೀಳಲಿಲ್ಲ. ಸವತಿಯಿರುವ ಮನೆಗೆ ಹೆಣ್ಣು ಕೊಡುವುದಂತು ಅಕ್ಷಮ್ಯವಾದ ಅಪರಾಧವೆಂದೇ ಅವರು ಭಾವಿಸಿದರು. ರಂಗಮ್ಮನವರು "ಹೀಗೇಕೆ ಹಾರಾಡುತ್ತೀರಿ. ದಾಕ್ಷಾಯಿಣಿಯು ಮೃತಪಟ್ಟಮೇಲಲ್ಲವೇ ಗಿರಿಜಾ ಕಲ್ಯಾಣವಾದದ್ದು. ಶಿವನಿಗೇ ಎರಡನೆಯ ಮದುವೆ. ದಾಕ್ಷಾಯಿಣಿ ಇರಲಿಲ್ಲವೆಂತೀರೇನೊ. ಗಂಗೆಯು ಸವತಿಯಾಗಿ ಸಿದ್ಧವಾಗಿದ್ದಳಲ್ಲ. ಪರ್ವತರಾಜ ಸವತಿಯ ಮೇಲೆ ಹೆಣ್ಣನ್ನೇಕೆ ಕೊಟ್ಟ? ಕೃಷ್ಣನಿಗೆಷ್ಟು ಮಂದಿ ಹೆಂಡತಿಯರಿದ್ದರು? ಚಿಕ್ಕ ಹುಡುಗ ಸಿಕ್ಕಲೆಂದು ನನಗೂ ಆಶೆ. ಆದರೆ ಕಾರ್ಪಣ್ಯ ಜೀವನವಾಗುವುದಾದರೆ ಚಿಕ್ಕವಯಸ್ಸಿನ ಗಂಡು ಬೇಡ. ಹುಡುಗಿ ಸೌಖ್ಯವಾಗಿರೋದನ್ನ ನೋಡಿ ಸಾಯಬೇಕೆಂದು ನನಗೆ ಆಶೆ" ಎಂದರು.

ಬಾಲಿಕಾ ಭಾವದಿಂದ ಗಿರಿಜು, ಬಾಲಕೃಷ್ಣರಾಯರ ಧೋತ್ರದ ಅಂಚನ್ನೂ ಅವರ ಗುಣಗಳನ್ನೂ ಹೊಗಳಿದುದನ್ನು ರಂಗಮ್ಮನವರು ವಿಪರೀತವಾಗಿ ಭಾವಿಸಿ ಅವಳಿಗೆ ಅವರನ್ನು ಮದುವೆಯಾಗಲು ಇಷ್ಟವಿಲ್ಲದಿರಲಾರದೆಂದು ನಿರ್ಧರಿಸಿದ್ದರು. ಅಂತು ಗಿರಿಜುವಿಗೆ ತಿಳಿಯದಂತೆ ದಂಪತಿಗಳಿಬ್ಬರೂ ವಾದಿಸಿ ವಾದಿಸಿ ದಣಿದುಹೋದರು. ಒಂದು ದಿನ ಬಾಲಕೃಷ್ಣರಾಯರು ಗಿರಿಜು ಜಾತಕವನ್ನು ಕೇಳಿದರು. ಆದರೆ ಅವರೇ ಬಂದು ಕೇಳದೆ ಜಾತಕಕ್ಕಾಗಿ ಹೇಳಿಕಳುಹಿಸಿದರು. ಆಗ ದಂಪತಿಗಳಿಗೆ ಬೇಕಾದಷ್ಟು ತರ್ಕವಿತರ್ಕಗಳು ನಡೆದು, ಕೊನೆಗೆ ನಿರ್ವಾಹವಿಲ್ಲದೆ ಲಕ್ಷ್ಮೀ

ನಾರಣಪ್ಪನವರು ಜಾತಕದ ನಕಲನ್ನು ಕಳುಹಿಸಿದರು; ಅಲ್ಲದೆ "ಜಾತಕದ ನಕಲು ಕೊಟ್ಟರೆ ಲಗ್ನ ಮಾಡಿಕೊಟ್ಟಂತಾಯಿತೆ? ಜಾತಕವು ಸರಿಬೀಳದೆ ಹೋಗಿ ಲಗ್ನಕ್ಕೆ ಅವಕಾಶತಪ್ಪಿದರೆ, ಅವನೊಡನೆ ನಿಷ್ಠುರವಾಗಿ ಮಾತ ನಾಡುವ ಆವಶ್ಯಕತೆಯೇ ತಪ್ಪುವುದು. ಜಾತಕವು ಸರಿಬಿದ್ದು ಅವನೇನಾ ದರೂ ಲಗ್ನದ ಪ್ರಸ್ತಾಪವನ್ನೆತ್ತಿದರೆ ಮುಖದ ನೀರನ್ನಿಳುಕಿಬಿಡುತ್ತೇನೆ" ಎಂದು ಅವರು ತಮ್ಮ ಮನಸ್ಸಿನಲ್ಲಿ ಹೇಳಿಕೊಂಡರು.

ರಾಯರು ಗಿರಿಜುವಿಗೆ ಹಣ್ಣುಹಂಪಲುಗಳನ್ನು ತಂದುಕೊಡು ತ್ತಿದ್ದುದು, ಅವಳೊಡನೆ ಆಟವಾಡುತ್ತಿದ್ದುದು ಮುಂತಾದ ಸಂಗತಿಗಳನ್ನು ಕೃತಜ್ಞತೆಯ ಮೊಗವಾಡವನ್ನು ಧರಿಸಿದ್ದ ಹೆಮ್ಮೆ ಸಂತೋಷಗಳಿಂದ ರಂಗಮ್ಮನವರು ರುಕ್ಮಿಣಿಯಮ್ಮನವರೊಡನೆ ಒಂದು ದಿನ ಹೇಳಿದರು. ರುಕ್ಮಿಣಿಯಮ್ಮನವರು ಸಿಡಿಮಿಡಿಗೊಂಡು "ಯಾವ ಒಲೆಯಲ್ಲಿ ಯಾವ ಕೊಳ್ಳಿಯಾದರೂ ಉರಿಯಲಿ. ನೀವು ಇಲ್ಲಿಗೆ ಬರಲೂ ಬೇಡಿ. ನನಗೆ ಈ ಸಂಗತಿಗಳೊಂದನ್ನೂ ಹೇಳಲೂ ಬೇಡಿ. ಅದು ಅವರವರ ಪಾಡು. ನನಗೆ ಅದನ್ನೆಲ್ಲಾ ಕಟ್ಟಿಕೊಂಡು ಆಗಬೇಕಾದ್ದೇನು" ಎಂದು ಔಚಿತ್ಯದ ಮೇರೆಯನ್ನು ಮೀರಿ ನುಡಿದುಬಿಟ್ಟರು. ಹೃದಯದಲ್ಲಿ ಅದುಮಿಟ್ಟಿದ್ದ ರಾಗದ್ವೇಷಗಳು ಈ ರೂಪದಲ್ಲಿ ಹೊರಬಿದ್ದುವು. ರಂಗಮ್ಮನವರೂ ಆಗ್ರಹವನ್ನು ತೋರಿಸಿ ಹೊರಟುಹೋದರು. ಹಿಂದೆಯೇ ತಿಳಿಸಿದ ಕಾರಣಗಳ ದೆಸೆಯಿಂದ ರುಕ್ಮಿಣಿಯಮ್ಮನವರು ಪತಿಗೆ ಅಸಮಾಧಾನ ವಾಗುವ ಹಾಗೆ ನುಡಿಯುವುದನ್ನು ತಮ್ಮಿಂದ ಸಾಧ್ಯವಾಗುವವರೆಗೂ ತಡಮಾಡಬೇಕೆಂದು ನಿರ್ಧರಿಸಿ ಇಕ್ಕಳದಲ್ಲಿ ಸಿಕ್ಕಿದ ಹಾವಿನಂತೆ ಸಂಕಟ ಪಡುತ್ತ ಬುಸುಗುಟ್ಟುತ್ತಿದ್ದರು.

ಒಂದು ದಿನ ಸುಮಾರು ಮೂರು ಜಾವದ ವೇಳೆಯಲ್ಲಿ ಬಾಲಕೃಷ್ಣ ರಾಯರು ಉತ್ಸಾಹ ಸಂತೋಷಗಳಿಂದ ತಮ್ಮ ಮನೆಯನ್ನು ಹೊಕ್ಕರು. ರುಕ್ಮಿಣಿಯಮ್ಮನವರು ಕಿಟಕಿಯಿಂದ ನಡುಮನೆಯೊಳಕ್ಕೆ ಬಿದ್ದಿದ್ದ ಬಿಸಿಲು ಕೋಲಿನಲ್ಲಿ ವಿವಿಧ ವರ್ಣಗಳಿಂದ ತೊಳಗುತ್ತಿದ್ದ ಧೂಳಿನ ಕಣಗಳನ್ನು ನೋಡುತ್ತ, ಸವತಿಯು ಬರುವ ಸಂಭವವನ್ನೇ ಶಂಕಿಸಬೇಕಾಗಿಲ್ಲದ ಆ ಕಣ ಗಳ ಬಾಳೇ ಮೇಲೆಂದು ತಮ್ಮ ಮನಸ್ಸಿನಲ್ಲಿ ಹೇಳಿಕೊಳ್ಳುತ್ತಿದ್ದರು. ಬಾಲ

ಕೃಷ್ಣರಾಯರು ಅವರ ಒಳಿಗೆ ಬಂದು "ಉತ್ಸವ ಕಾಲ. ಈಗೇತಕ್ಕೆ ಹೀಗೆ ಜೋಲುಮೋರೆ ಹಾಕಿಕೊಂಡು ನಿಂತಿದ್ದೀಯೆ. ಗಿರಿಜುವಿಗೆ ಮದುವೆ. ಧಾರೆ ಯೆರೆಸಿಕೊಳ್ಳಲು ಸಿದ್ಧವಾಗಬೇಕು. ಎರಡು ಮೂರು ದಿನಗಳಿಗೇ ಲಗ್ನ ಗೊತ್ತಾಗಿದೆ. ನಾವಿಬ್ಬರೂ ಹಸೆಯಮೇಲೆ ಕುಳಿತುಕೊಳ್ಳಬೇಕು" ಎಂದರು. ರುಕ್ಮಿಣಿಯಮ್ಮನವರಿಗೆ ಏಕಕಾಲದಲ್ಲಿ ರೋಷ ಶೋಕ ಮಾತ್ಸರ್ಯಗಳ ಆವೇಶವುಂಟಾಯಿತು. ಅವರು "ಅಗತ್ಯವಾಗಿ ನೀವಿಬ್ಬರೂ ಹಸೆಯ ಮೇಲೆ ಕೂತುಕೊಂಡು ಲೋಲಾಪ್ತಿಪಡಿ. ಅದಕ್ಕೆ ಯಾರು ಅಡ್ಡಿಯಾಗಿದ್ದಾರೆ? ಆನಂದಪಡಿ" ಎಂದರು. ರಾಯರು "ನಾನು ಹೇಳಿದ್ದು ನಾವಿಬ್ಬರೂ ಹಸೆಯ ಮೇಲೆ ಕೂತುಕೊಳ್ಳಬೇಕೆಂತ. ಧಾರೆಯೆರೆಸಿಕೊಳ್ಳಲು ನೀನು ಸಮ್ಮತಿಸಿ ಹಸೆಯ ಮೇಲೆ ಕೂತುಕೊಳ್ಳದೆ ಹೋದರೆ ಲಗ್ನವೇ ಸಾಗುವಂತಿಲ್ಲ. ನಾನು ಮಾಡಿದ ಏರ್ಪಾಡು ಆಭಾಸಕ್ಕಿಡುತ್ತದೆ" ಎಂದರು.

ಗಂಡನಿಗೆ ಅಸಮಾಧಾನವಾಗುವಂತೆ ವರ್ತಿಸಕೂಡದೆಂದು ರುಕ್ಮಿಣಿಯಮ್ಮನವರು ಮಾಡಿಕೊಂಡಿದ್ದ ಸ್ಥಿರ ಸಂಕಲ್ಪವು ಎಲ್ಲಿಗೋ ಹಾರಿ ಹೋಯಿತು. ಹುಚ್ಚುಹೊಳೆಯು ಏರಿಬಂದಾಗ ಉಕ್ಕಿ ಭೋರ್ಗರೆಯುವ ಪ್ರವಾಹಕ್ಕೆ ಯಾವ ಅಡ್ಡಕಟ್ಟೆಯು ತಾನೆ ಎದುರಾಗಬಲ್ಲುದು? ರುಕ್ಮಿಣಿಯಮ್ಮನವರು ರೋಷದಿಂದ ಗರ್ಜಿಸುತ್ತ "ನನ್ನ ಮೊದಲು ಕಡಿದುಹಾಕಿ; ನನ್ನ ತಿಥಿ ಪೂರೈಸಿ; ಆಮೇಲೆ ಈ ಮದುವೆ ಏರ್ಪಾಡು ಸಾಂಗವಾಗಿ ನಡೆಯಲಿ. ಅಲ್ಲಿಯವರೆಗೂ ಬೇಡ" ಎಂದರು. ಬಾಲಕೃಷ್ಣ ರಾಯರ ಹೃದಯತಲದಿಂದ ಮೇಲಕ್ಕೇರುತ್ತಿದ್ದ ರೋಷದರ್ಪಗಳ ಚಾಚು ನಾಲಗೆಯನ್ನು ಹಾಗೆಯೇ ಕೆಳಮುಖಕ್ಕೆ ತಿರುಗಿಸಿ ಅದುಮಿ "ಗಿರಿಜಾ ಕಲ್ಯಾಣಕ್ಕೆ ಹೋಗಿ ಬಂದಿದ್ದೇವೆ. ಪಾಪ! ಬಡ ಹುಡುಗಿ. ವಿವಾಹಕ್ಕೆ ಏರ್ಪಾಡು ಮಾಡಿದ್ದೇ ತಪ್ಪೆ?" ಎಂದರು. ರುಕ್ಮಿಣಿಯಮ್ಮನವರು ಹಿಂದು ಮುಂದು ನೋಡದೆ "ಅಯ್ಯೋ ಪಾಪ! ದಾನದ ಕರ್ಣ ನಿಮ್ಮನ್ನೇ ತನಗೆ ಪ್ರತಿಯಾಗಿ ನಿಲ್ಲಿಸಿ ಹೋಗಿದ್ದಾನೆ" ಎಂದರು. ರಾಯರು ರೋಷ ಭೀಷಣವಾದ ದರ್ಪದ ವಾಣಿಯಿಂದ "ಸಾಕು, ನಿನ್ನ ಹರಟೆ. ನೀನೇ ಇಷ್ಟು ಬಿರುಸಾದರೆ ನಾನೇನೂ ತಗ್ಗಬೇಕಾಗಿಲ್ಲ. ಆಗಲಿ: ಏನೇನು ಮಾಡುತ್ತೀಯೋ ನೋಡುವೆನು" ಎಂದು ಹೊರಟುಹೋದರು.

ರಾಯರು ಅಲ್ಲಿಂದ ಲಕ್ಷ್ಮೀನಾರಣಪ್ಪನವರಿಗೆ ತಾವು ವಾಸಕ್ಕೆ ಕೊಟ್ಟಿದ್ದ ಮನೆಗೆ ಹೋದರು. ಒಡನೆಯೇ ಉತ್ಸಾಹದಿಂದ—ಆದರೆ ತಗ್ಗಿದ ಉತ್ಸಾಹದಿಂದ—"ಲಕ್ಷ್ಮೀನಾರಣಪ್ಪನವರೇ! ನಿಮ್ಮ ಹುಡುಗಿಯ ವಿವಾಹಕ್ಕೆ ಪ್ರಶಸ್ತವಾದ ಲಗ್ನ ಕಟ್ಟಿಸಿದ್ದೇನೆ. ಇನ್ನು ಎರಡು ಮೂರು ದಿನಗಳಿಗೇ ವಿವಾಹ. ವಧುವಿನ ಒಡವೆಗಳು ಮುಂತಾಗಿ ಸಮಸ್ತಕ್ಕೂ ಏರ್ಪಾಡು ಮಾಡಿದ್ದೇನೆ" ಎಂದರು. ಲಕ್ಷ್ಮೀನಾರಣಪ್ಪನವರು "ಅದೆಲ್ಲಾ ಸರಿ, ರಾಯರೆ, ವರನು ಯಾರೆಂಬುದನ್ನೇ ತಿಳಿಸಲಿಲ್ಲವಲ್ಲಾ!" ಎಂದರು. ಬಾಲಕೃಷ್ಣರಾಯರು ದರ್ಪದ ಧೋರಣೆಯಿಂದ "ನಾನು ಹೇಳುತ್ತಲೇ ಇರಲಿಲ್ಲವೆ? ಅನೇಕ ಸಂದರ್ಭಗಳಲ್ಲಿ ಉತ್ತಮ ವರನು ನಮ್ಮ ಕಣ್ಣೆದುರಿಗೇ ಇದ್ದರೂ ಕಂಕಣಕಾಲ ಬರುವವರೆಗೂ ತೋರುವುದಿಲ್ಲ; ತಿಳಿಯುವುದಿಲ್ಲ. ಈಗ ನೋಡಿ ನಾವು . . ." ಎಂದು ಅರ್ಧೋಕ್ತಿಗಳನ್ನಾಡುವಷ್ಟರಲ್ಲಿಯೇ ಲಕ್ಷ್ಮೀನಾರಣಪ್ಪನವರು ಕೈಮುಗಿದು "ಸ್ವಾಮಿ, ಕೈಮುಗಿದು ಬೇಡಿಕೊಳ್ಳುತ್ತೇನೆ ಸ್ವಾಮಿ. ಈ ಮದುವೆ ಆಯಾಸವೇ ಬೇಡಿ. ನಮ್ಮ ತಲೆಯ ಮೇಲೆ ಕಲ್ಲೆಳೆಯಬೇಡಿ. ನೀವು ಇದುವರೆಗೂ ಆಶ್ರಯಕೊಟ್ಟುದಕ್ಕೆ ನಾನು ಕೃತಜ್ಞ. ನಾಳೆಯೇ ತಮ್ಮ ಆಶ್ರಯವನ್ನು ಬಿಟ್ಟು ಹೊರಡುತ್ತೇನೆ. ಕ್ಷಮಿಸಿ ಉದ್ಧಾರಮಾಡಿ" ಎಂದರು.

ರಾಯರಿಗೆ ರೇಗಿಹೋಗಿ, ಅವರು "ಗಿರಿಜುವಿಗೆ ಮದುವೆಯಾಗಬೇಕೆಂದು ಪದೇ ಪದೇ ಹೇಳುತ್ತಿದ್ದಿರಿ. ನಾನು ಕೇಳಿದಾಗ ಜಾತಕವನ್ನೂ ಕಳುಹಿಸಿಕೊಟ್ಟಿರಿ. ನಾನು ವಿವಾಹಕ್ಕೆ ಏರ್ಪಾಡುಮಾಡಿ ಸಹಾಯ ಮಾಡೋಣವೆಂದರೆ ಈ ರೀತಿ ಹುಚ್ಚುಮಾತನಾಡುತ್ತೀರಿ. ಇದೆಲ್ಲಿಯ ಸಂಪ್ರದಾಯ ಸ್ವಾಮಿ?" ಎಂದು ಗರ್ಜಿಸಿದರು. ಲಕ್ಷ್ಮೀನಾರಣಪ್ಪನವರೂ ಜಗ್ಗಲಿಲ್ಲ. ಅವರು "ಜಾತಕ ಕೊಟ್ಟಮಾತ್ರಕ್ಕೇ ವಿವಾಹಕ್ಕೆ ಸಮ್ಮತಿಸಬೇಕೆಂಬ ನಿರ್ಬಂಧವೇನೂ ಇಲ್ಲ. ನಿಮ್ಮ ಈ ಬಗೆಯ ಸಹಾಯವೇ ನನಗೆ ಬೇಡ. ಜಾತಕ ಕೊಟ್ಟ ಮಾತ್ರವೇ, ನನ್ನಷ್ಟು ವಯಸ್ಸಾಗಿರುವವರಿಗೆ ನನ್ನ ಮಗಳನ್ನು ಕೊಡಬೇಕೆಂದು ಯಾವ ಸಂಪ್ರದಾಯಸ್ಥರೂ ಹೇಳುವುದಿಲ್ಲ" ಎಂದರು.

ಬಾಲಕೃಷ್ಣರಾಯರು ಮತ್ತಷ್ಟು ರೋಷದಿಂದಲೂ ದರ್ಪದಿಂದಲೂ ಸೆಡೆದು ನಿಂತು "ತಮ್ಮಷ್ಟು ವಯಸ್ಸಾಗಿದೆಯಂತೆ. ಯಾರದೋ ಚಾಡಿ

ಮಾತು ಕೇಳಿ ಹುಚ್ಚು ಮಾತನಾಡುತ್ತಿದ್ದೀರಿ. ಮುಖ ನೋಡಿದರೆ ವಯಸ್ಸು ನಿಮಗೇ ತಿಳಿಯುವುದಿಲ್ಲವೇ? ವಿಚಾರವಮಾಡದೆಯೇ ಈ ಹರಟೆಯೆ?'' ಎಂದು ಗರ್ಜಿಸಿದರು. ಲಕ್ಷ್ಮೀನಾರಣಪ್ಪನವರು ''ಸ್ವಾಮಿ, ತಾವು ದೊಡ್ಡವರು. ಈ ಹರಟೆಯೆಲ್ಲಾ ಮೊಟ್ಟಮೊದಲು ನನಗೆ ಅನುಮಾನ ಬಂದಾಗಲೇ ಆಡಿ ಮುಗಿಸಬೇಕೆಂದಿದ್ದೆ, ದೇವರು. ಆದರೆ ನಮ್ಮ ಮನೆಯವಳ ಅವಾಂತರದಿಂದ, ನಿಮ್ಮ ದರ್ಪದ ಮತ್ತು ನಿಮ್ಮ ಕೀರ್ತಿಯ ಪ್ರಭಾವದಿಂದ ನನ್ನ ಬಾಯಿ ಕಟ್ಟಿಹೋಗಿ ಇಷ್ಟು ಹಗರಣಕ್ಕೆ ಬಂತು. ಮುಖ ನೋಡಿದರೆ ವಯಸ್ಸು ತಿಳಿಯುತ್ತೆ, ನಿಜ. ನಿಮಗೆ ನನ್ನಷ್ಟೇ ವಯಸ್ಸಾಗಿದೆ. ಅಥವಾ ಒಂದೆರಡು ವರ್ಷ ಕಡಮೆಯಾಗಿರಬಹುದು'' ಎಂದರು; ಬೀದಿಯ ಬಾಗಿಲಿನಿಂದ ಒಳಕ್ಕೆ ಬಂದ ಯುವಕನೊಬ್ಬನನ್ನು ಕಂಡು ''ನೀವು ಯಾರೋ ತಿಳಿಯದು. ಆಮೇಲೆ ಬನ್ನಿ. ಈಗ ಬೇಡ'' ಎಂದು ಆತನೊಡನೆ ಅವರು ಹೇಳಿದರು.

ಬಾಲಕೃಷ್ಣರಾಯರು ಆಗಂತುಕನನ್ನು ಒಳಕ್ಕೆ ಬರಹೇಳಿ ''ಬಾರಣ್ಣಾ ಲಕ್ಷ್ಮಣರಾಯ. ಇದು ನನ್ನ ಮನೆ ಸ್ವಾಮಿ. ಇಲ್ಲಿ ಅವನಿಗೆ ಅಂಕೆಯಿಡಬೇಡಿ. ಅಲ್ಲಾ ನನ್ನ ವಯಸ್ಸು ಕಟ್ಟಿಕೊಂಡು ನಿಮಗೇನು? ಹುಚ್ಚುಮಾತಿಗೂ ಕೊನೆಮೊದಲೇ ಇಲ್ಲವೆ?'' ಎಂದರು. ಲಕ್ಷ್ಮೀನಾರಣಪ್ಪನವರು ''ಹಣಗಾರರು ಏನೆಂದರೂ ತಡೆಯುವುದು, ದೇವರು. ತಡೆಯುತ್ತೆ; ಆಡುತ್ತೀರಿ. ವಯಸ್ಸನ್ನೇ ನೋಡದೆ ಮಗಳನ್ನು ಕೊಡೆನ್ನುವಿರೇನು? ಆದಾದರೂ ಹೇಳಿ, ಕೇಳೋಣ'' ಎಂದರು. ಬಾಲಕೃಷ್ಣರಾಯರು ''ಅಗತ್ಯವಾಗಿ ವಯಸ್ಸನ್ನು ನೋಡಲೇ ಬೇಕು. ಆದರೆ ನನ್ನ ವಯಸ್ಸಿನಿಂದ ನಿಮಗಾಗಬೇಕಾದ್ದೇನು?'' ಎಂದು ಕೇಳಿದರು. ಲಕ್ಷ್ಮೀನಾರಣಪ್ಪನವರು ''ಸ್ವಲ್ಪ ಕಾಲ ಅನ್ನವಿಟ್ಟ ಮಾತ್ರಕ್ಕೇ ಈ ರೀತಿ ವೈಯುರಿಸಬಾರದು, ದೇವರು. ಹೀಗೆ ಬಡವನ ಹೊಟ್ಟೆಯುರಿಸಬೇಡಿ. ನಿಮ್ಮ ವಯಸ್ಸನ್ನೇ ಪರಿಗಣಿಸದೆ ನಿಮಗೆ ಹೆಣ್ಣು ಕೊಡಲೆ? ಹಾಗೆ ಕೊಡಬಹುದೆ?'' ಎಂದರು.

ಬಾಲಕೃಷ್ಣರಾಯರು ಆಶ್ಚರ್ಯದಿಂದ ಅಪ್ರತಿಭರಾಗಿ ''ಏನೆಂದಿರಿ?'' ಎಂದು ಕೇಳಿದರು. ಲಕ್ಷ್ಮೀನಾರಣಪ್ಪನವರು ವಿಷಾದದಿಂದಲೂ ಅಸಹ್ಯ

ದಿಂದಲೂ ತುಂಬಿದ ಕಂಠಸ್ವರದಿಂದ "ಕೇಳಿಸಲಿಲ್ಲವೇ, ದೇವರು. ನಾನೊಬ್ಬ ಪಾಪಿಷ್ಠ. ನನ್ನ ಬಡತನವು ನನಗೆ ಈ ಬಗೆಯ ಸಂಕಟವನ್ನು ತಂದಿದೆ. ಅದೃಷ್ಟವಿದ್ದಪಕ್ಷಕ್ಕೆ ನಿಮಗೂ ನಮ್ಮ ಗಿರಿಜು ವಯಸ್ಸಿನ ಮಗಳೇ ಇರಬೇಕಾಗಿತ್ತು. ಅಷ್ಟು ವಯಸ್ಸಾಗಿದೆ. ನನ್ನಷ್ಟೇ ವಯಸ್ಸಾಗಿದೆ. ನಿಮ್ಮ ವಯಸ್ಸನ್ನೇ ಪರಿಗಣಿಸದೆ ನಿಮಗೆ ಹೆಣ್ಣು ಕೊಡಲೆ? ಹಾಗೆ ಕೊಡಬಹುದೆ—ಎಂತ ಹೇಳಿದೆ. ಈಗಲಾದರೂ ಸ್ಪಷ್ಟವಾಗಿ ತಿಳಿಯಿತೆ?" ಎಂದರು. ಬಾಲಕೃಷ್ಣರಾಯರು ಗಹಗಹಿಸಿ ನಕ್ಕರು. ಅವರು ನಕ್ಕಷ್ಟೂ ಲಕ್ಷ್ಮೀನಾರಣಪ್ಪನವರಿಗೆ ರೇಗಿಹೋಯಿತು. ಲಕ್ಷ್ಮಣರಾಯನೂ ನಗ ಲಾರಂಭಿಸಿದುದನ್ನು ಕಂಡು ಅವರ ಕೋಪವು ಮತ್ತಷ್ಟು ಹೆಚ್ಚಿತು. ಅವರು ಉಚ್ಚಸ್ಥಾಯಿಗೇರಿದ ಕೀರಲು ಧ್ವನಿಯಲ್ಲಿ "ಇನ್ನು ಹೊರಟು ಹೋಗಿ ಸ್ವಾಮಿ. ನನ್ನ ರೇಗಿಸಬೇಡಿ" ಎಂದರು.

ಬಾಲಕೃಷ್ಣರಾಯರು ನಗುವನ್ನು ಕಡಮೆಮಾಡಿ "ಗಿರಿಜುವನ್ನು ನಾನು ಮದುವೆಯಾಗಬೇಕೆಂದಿದ್ದೇನೆಂಬುದು ನಿಮಗೆ ತಿಳಿದ ಬಗೆ ಹೇಗೆ? ನಿಮಗಿಷ್ಟವಿಲ್ಲದಿದ್ದರೆ ಮೊದಲೇ ಏಕೆ ಹೇಳಲಿಲ್ಲ!" ಎಂದು ಕೇಳಿ ಮತ್ತೆ ಗಹಗಹಿಸಿ ನಕ್ಕರು. ಲಕ್ಷ್ಮಣರಾಯನೂ ನಗುತ್ತಿದ್ದನು. ಲಕ್ಷ್ಮೀನಾರಣಪ್ಪನವರು "ನೀವು ಗಿರಿಜು ಗಿರಿಜು ಎಂದು ಕೂಗುತ್ತ ಅವಳೊಡನೆ ಆಟವಾಡುತ್ತ ಪ್ರೀತಿಸುತ್ತಿದ್ದುದರಿಂದ ನೀವು ಅವಳನ್ನು ಮದುವೆಯಾಗಬೇಕೆಂದಿರಬಹುದೆಂದು ತಿಳಿಯಿತು. ವಿವಾಹಕ್ಕೆ ಏರ್ಪಾಡು ಮಾಡಿರುವುದಾಗಿ ನೀವೇ ಹೇಳಿದಿರಿ. ನಮ್ಮ ಊಹೆ ನಿಜವಾಯಿತು. ಧನಿಕರ ಧನಾಢ್ಯತೆಗೆ ಬೆರಗಾಗಿ ಮಗಳ ಸುಖವನ್ನು ಬಲಿ ಕೊಡುವ ಆಸೆಯು ನನಗಿಲ್ಲ. ನಿಮಗೆ ಮೊದಲೇ ತಿಳಿಸದಿದ್ದುದು ಅಪರಾಧ ವಾಯಿತು. ನಿಮ್ಮ ಮುಖದಲ್ಲಿ ಯಾವ ರಾಹುಗ್ರಹದ ಅಂಶವಿದೆಯೋ ತಿಳಿಯದು. ನಿಮ್ಮ ದರ್ಪ ಅಷ್ಟಿಷ್ಟಲ್ಲ. ನಿಮ್ಮ ಮುಖವನ್ನೂ ದರ್ಪ ವನ್ನೂ ನೋಡಿದರೆ ಮಾತನಾಡಬೇಕೆಂದು ಬಂದವರ ಬಾಯೇ ಒಣಗಿ ಹೋಗುತ್ತದೆ. ಈ ಊರಿನೊಳಗಾಗಿ ನಿಮ್ಮ ದರ್ಪದಿಂದ ನಾಲಿಗೆಗೆ ಬೀಗ ವಾಗದಿರುವವಳು ನಮ್ಮ ಗಿರಿಜುವೊಬ್ಬಳೇ. ಈಗ ಎಲ್ಲವನ್ನೂ ಯತ್ನವಿಲ್ಲದೆ ಒದರಿದ್ದೇನೆ. ನನ್ನ ಸಂಕಟವು ನಿಮ್ಮ ದರ್ಪವನ್ನೂ ಮರೆಯಿಸಿತು.

ಇನ್ನು ಮಾತನಾಡಿ ಸಂಕಟಪಡಿಸದೆ ನೀವಿಬ್ಬರೂ ಹೊರಟುಹೋಗಿ" ಎಂದರು.

ಬಾಲಕೃಷ್ಣರಾಯರು ನಕ್ಕು ನಕ್ಕು ಸಾಕಾಗಿ ನಗುವಿನ ಮಧ್ಯದಲ್ಲಿ "ಅಯ್ಯೋ ಹುಚ್ಚಪ್ಪ! ನಕ್ಕು ನಕ್ಕು ನನ್ನ ಹೊಟ್ಟೆ ಹುಣ್ಣಾಯಿತು. ಗಂಡಸು ಹಸುಕೂಸಿನ ಹತ್ತಿರ ನಿಂತರೂ ನೀವು ವಿವಾಹದ ಯೋಚನೆಯನ್ನು ಕಟ್ಟಿಕೊಂಡು ತೊಳಲಿ ಬಳಲುವುದೆ? ಬೇರೆ ಬಗೆಯ ಪ್ರೀತಿಯೇ ಪ್ರಪಂಚದಲ್ಲಿರಕೂಡದೆ? ನನಗೆ ಯಾವ ಜನ್ಮಾಂತರದ ಋಣಾನುಬಂಧದಿಂದಲೋ ಗಿರಿಜ ಮೇಲೆ ಮಗಳ ಹಾಗೆ ಪ್ರೀತಿ. ಅವಳೆದುರಿಗೆ ನಿಂತಾಗ ನನ್ನ ವಯಸ್ಸು ಕೂಡ ಮರೆತುಹೋಗಿ ನಾನು ಅವಳ ಜೊತೆಯ ಆಟದ ಹುಡುಗನಾಗುತ್ತಿದ್ದೆ. ನೀವು ಯಾರಾದರೂ ಅದನ್ನು ಕಂಡರೆ ನಾಚಿ ನಾನಿಳಿದಿದ್ದ ಬಾಲಭಾವದ ಮಡುವಿನಿಂದ ಮೇಲಕ್ಕೆ ಬರುತ್ತಿದ್ದೆ" ಎಂದರು.

ತಂದೆಗೂ ರಾಯರಿಗೂ ಅದುವರೆಗೆ ನಡೆಯುತ್ತಿದ್ದ ವಿರಸವಾದ ಮಾತುಗಳನ್ನು ಕೇಳಿ ಅರ್ಥವು ಪೂರ್ತಿಯಾಗಿ ತಿಳಿಯದೆ ತತ್ತರಿಸುತ್ತಿದ್ದ ಗಿರಿಜ ಸರಕ್ಕನೆ ರಾಯರ ಬಳಿಗೆ ಬಂದು ನಿಂತು ತಂದೆಯ ಕಡೆಗೆ ತಿರುಗಿ "ರಾಯರು ಬಹಳ ಒಳ್ಳೆಯವರೆಂತ ನಾನು ಹೇಳ್ತಿರಲಿಲ್ಲವೇನಣ್ಣ?" ಎಂದಳು. ಹಸುವಿನ ಬಳಿಯ ಕರುವಿನಂತೆ ರಾಯರ ಸಮೀಪದಲ್ಲಿ ಗಿರಿಜ ನಿಂತಿದ್ದ ಭಂಗಿಯನ್ನು ಕಂಡು, ರಾಯರ ಮಾತುಗಳನ್ನು ಮನನಮಾಡಿ ಲಕ್ಷ್ಮೀನಾರಣಪ್ಪನವರು ವಿಸ್ಮಿತರಾದರು; ಆದರೂ ತಮ್ಮ ಮನಸ್ಸನ್ನು ಅರಿತಮೇಲೆ ರಾಯರು ಆಟವನ್ನು ಕಟ್ಟಿರಬೇಕೆಂದು ಬಗೆದು "ಇದೇನು ರಾಯರೆ ಈ ಇಂದ್ರಜಾಲ? ಮೊದಲು ಹೇಳಿದಿರಿ, ವಿವಾಹಕ್ಕೆ ಅಣಿ ಮಾಡಿರುವುದಾಗಿ. ಈಗ ಹೇಳುತ್ತೀರಿ ಅದಕ್ಕೆ ವಿರುದ್ಧವಾಗಿ" ಎಂದರು.

ಬಾಲಕೃಷ್ಣರಾಯರು ಹೃದಯದ ನೋವನ್ನು ಮರೆಯಿಸುವ ನಗುವಿನಿಂದ "ಇಂದ್ರಜಾಲವೂ ಇಲ್ಲ, ಮಹೇಂದ್ರಜಾಲವೂ ಇಲ್ಲ. ಸ್ಪಷ್ಟವಾಗಿ ಹೇಳುತ್ತೇನೆ ಕೇಳಿ. ನಮ್ಮ ಮನೆ ಪಕ್ಕದಲ್ಲಿರುವ ಪಂಡಿತರು ರಘುವಂಶ ಪಾಠ ಹೇಳುವುದನ್ನು ಪದೇ ಪದೇ ಕೇಳಿದ್ದೆ. 'ಜಗತಃ ಪಿತರೌ ವಂದೇ ಪಾರ್ವತೀಪರಮೇಶ್ವರೌ' ಎಂಬುದನ್ನು ಕೇಳಿ ಕೇಳಿ ಆನಂದಿಸಿದ್ದೆ.. ಗಿರಿಜಾ ಕಲ್ಯಾಣದ ಉತ್ಸವವನ್ನು ನೋಡಲು ನಂಜನಗೂಡಿಗೆ ಹೋದೆ. ಅಲ್ಲಿ

ನಡೆದ ಮರುಳಾಟ ಜಗತ್ತಿನ ತಾಯಿತಂದೆಗಳಾದ ಪಾರ್ವತೀಪರಮೇಶ್ವರರಿಗೆ ಅವಮಾನವೆಂದು ತೋರಿತು. ನಿಜವಾಗಿ ಬಡಹುಡುಗಿಯೊಬ್ಬಳಿಗೆ ಮದುವೆ ಮಾಡಿಸಿ, ನೋಡಿ ಆನಂದಿಸಿ, ಅದರ ಫಲವನ್ನು ಅವರಿಗೆ ಸಮರ್ಪಿಸಿ ಜನ್ಮಸಾರ್ಥಕಮಾಡಿಕೊಳ್ಳಲು ಆಸೆಯಾಯಿತು. ಕನ್ಯಾಕುಮಾರಿಯಂತೆ ನಿಮ್ಮ ಮಗಳು ಗಿರಿಜುವನ್ನು ಕಂಡೆ. ನನ್ನಲ್ಲಿ ಹಣವಿದೆ. ನಿಮ್ಮಲ್ಲಿ ಹುಡುಗಿಯಿದೆ. ಈ ಗಿರಿಜಾ ಕಲ್ಯಾಣ ಮಾಡಿದರೆ ಆ ಗಿರಿಜಾ ಕಲ್ಯಾಣಕ್ಕಿಂತ ಜಗತ್ತಿನ ತಾಯಿತಂದೆಗಳಿಗೆ ಹೆಚ್ಚು ಸಂತೋಷವೆಂದು ಭಾವಿಸಿದೆ. ಬಲಗೈ ಧರ್ಮಮಾಡಿದರೆ ಎಡಗೈಗೆ ತಿಳಿಯಬಾರದಂತೆ. ಅಷ್ಟರಲ್ಲಿ ಗರ್ವ ಬಂದೀತೆಂತಲೋ ಏನೋ! ನಾನು ಯಾರಿಗೂ ತಿಳಿಸದೆ ಏರ್ಪಾಡು ಮಾಡಿದೆ'' ಎಂದರು.

ಅವರು ಮುಂದೆ ಹೇಳುವಷ್ಟರಲ್ಲಿ ಲಕ್ಷ್ಮೀನಾರಣಪ್ಪನವರು ಪಶ್ಚಾತ್ತಾಪದಗ್ಧವಾದ ಹೃದಯದಿಂದ ಕೂಡಿ ತಮ್ಮ ಮಾತಿನ ಅರ್ಥವು ತಮಗೇ ತಿಳಿಯದೆ ''ವರ, ವರನೆಲ್ಲಿ ಹಾಗಾದರೆ?'' ಎಂದರು. ಬಾಲಕೃಷ್ಣರಾಯರು ನಕ್ಕು, ''ವರನಿಲ್ಲದೆ ಮರಕ್ಕೆ ಮದುವೆ ಮಾಡುವಷ್ಟು ಮೂಢನಲ್ಲ. ವರನು ನಿಮ್ಮೆದುರಿಗೇ ಇದ್ದಾನೆ. ಲಕ್ಷ್ಮಣರಾಯ ಅಪರಂಜಿಯಂಥ ವರ. ಪಾಲಹಳ್ಳಿ ಸ್ಥಳ. (ಆ ಮಾತುಗಳನ್ನು ಕೇಳಿದೊಡನೆಯೇ ಗಿರಿಜು ನಾಚಿಕೆಯಿಂದ ತಲೆತಗ್ಗಿಸಿ ಓಡಿಹೋದಳು.) ಈ ಊರಿಗೆ ಅರ್ಧ ಹರಿದಾರಿಯ ಊರು. ರೂಪದಲ್ಲಿ ನೋಡಿ, ಗುಣದಲ್ಲಿ ನೋಡಿ, ವಿದ್ಯೆಯಲ್ಲಿ ನೋಡಿ, ನಮ್ಮ ಮಾಧ್ವಕುಲಕ್ಕೇ ರತ್ನದಂತಿದ್ದಾನೆ. ಈ ಚಿಕ್ಕವಯಸ್ಸಿಗೇ ತರ್ಕಸಿಂಹನೆನಿಸಿದ್ದಾನೆ. ಸೋಸಲೆ ಮಠದಿಂದ ವಿದ್ವತ್ಸಂಭಾವನೆ. ಅವನ ಖ್ಯಾತಿ ಶ್ರೀಮನ್ಮಹಾರಾಜರವರ ಚಿತ್ತಕ್ಕೂ ವೇದ್ಯವಾಗಿದೆಯಂತೆ. ವರನ ಮನೆಯವರು ಧನಿಕರಲ್ಲದಿದ್ದರೂ ಅನ್ನಬಟ್ಟೆಗೆ ನೆಮ್ಮದಿಯಾಗಿದ್ದಾರೆ. ಗಿರಿಜು ಸೌಖ್ಯದ ವಿಚಾರ ನನಗಿರಲಿ. ವರನು ಅವಳನ್ನು ವಿವಾಹವಾಗಲು ಸಮ್ಮತಿಸಿರುವುದು ನಮ್ಮ ಭಾಗ್ಯ. ಅತ್ಯಂತ ದೂರದ ನೆಂಟರು ಹೊರತು ಲಕ್ಷ್ಮಣರಾಯನಿಗೂ ಯಾರೂ ಇಲ್ಲ. ಕಂಕಣ ಕಾಲ ಒದಗಿದಲ್ಲದೆ ಸಮೀಪದಲ್ಲಿದ್ದರೂ ವರನು ಗೋಚರಿಸುವುದಿಲ್ಲವೆಂದು ನಾನು ಹೇಳುತ್ತಲೇ ಇದ್ದೆ, ನೋಡಿ'' ಎಂದರು.

ಲಕ್ಷ್ಮೀನಾರಣಪ್ಪನವರು ಪಶ್ಚಾತ್ತಾಪದಿಂದಲೂ ಕೃತಜ್ಞತೆಯಿಂದಲೂ ಕಣ್ಣೀರು ಸುರಿಸುತ್ತ ರಾಯರಿಗೆ ಅಡ್ಡಬಿದ್ದು "ನಾನು ಕೃತಘ್ನ. ಚಂಡಾಲ. ಮಣ್ಣು ತಿಂದೆ. ಕ್ಷಮಿಸಿ ಉದ್ಧಾರಮಾಡಿ. ಎಂಥ ಧನಿಕರನ್ನ ಏನ್ನುಟ್ಟ ಮಾತನಾಡಿ ನೋಯಿಸಿದೆನಪ್ಪ. ನನಗೇ ಬೇರೆ ನರಕವೇ ಸೃಷ್ಟಿಯಾಗಬೇಕು. ರಾಯರೇ ನೀವು ನನ್ನ ಮನೆಯ ದೇವರು. ಕ್ಷಮಿಸಿರುವುದಾಗಿ ಹೇಳಿದಲ್ಲದೆ ಈ ಪಾದಗಳನ್ನು ಬಿಡುವುದಿಲ್ಲ" ಎಂದು ಗದ್ಗದ ಸ್ವರದಿಂದ ಹೇಳಿ ಗೋಳಾಡಿದರು. ರಾಯರು ನಕ್ಕು "ಈ ಹುಚ್ಚಾಟವುಂಟೆ? ಮೇಲಕ್ಕೇಳಿ. ನನಗೆ ಮಗಳಿಲ್ಲ. ನಿಮಗೆ ಹಣವಿಲ್ಲ. ನಾವಿಬ್ಬರೂ ಬಡವರು. ಇಲ್ಲದವರು ಬಡವರೇ ತಾನೆ! ಸ್ಪಷ್ಟವಾಗಿ ಮಾತನಾಡದೆ ಹೋದದ್ದು ನನ್ನ ತಪ್ಪು. ಈಗ ಹೊಳೆಯಿತು. ನಮ್ಮ ಮನೆಯವಳೂ ನಿಮ್ಮಹಾಗೆಯೇ ಅಪಾರ್ಥ ಮಾಡಿರಬೇಕು. ಅದಕ್ಕೇ ವಿಚಿತ್ರವಾಗಿ ಮಾತನಾಡಿದಳು. ಯಾವ ತಪ್ಪು ಬೇಕಾದರೂ ಮಾಡಿ. ಆದರೆ ಮನುಷ್ಯನನ್ನು ದೇವರೆನ್ನಬೇಡಿ. ನಮ್ಮಿಬ್ಬರಿಗೂ ದೇವರು ಬೇರೆ ಇದ್ದಾನೆ" ಎಂದು ಹೇಳಿ ಲಕ್ಷ್ಮಣರಾಯನೊಡನೆ ಹೊರಟುಹೋದರು. ರಾಯರನ್ನು ಹಿಂಬಾಲಿಸಿ ಬೀಳ್ಕೊಡುವುದಕ್ಕೂ ಲಕ್ಷ್ಮೀನಾರಣಪ್ಪನವರಿಗೆ ಬುದ್ಧಿಯು ಸ್ವಾಧೀನದಲ್ಲಿರಲಿಲ್ಲ.

ಬಾಲಕೃಷ್ಣರಾಯರು ಲಕ್ಷ್ಮಣರಾಯನನ್ನು ತಮ್ಮ ಮನೆಯೊಳಗೆ ಹಜಾರದಲ್ಲಿ ಕುಳ್ಳಿರಿಸಿ, ರುಕ್ಮಿಣಿಯಮ್ಮನವರೆಲ್ಲೆಂದು ಅಡಿಗೆಯವನನ್ನು ಕೇಳಿ ಅವನು ಸಂಜ್ಞೆಯಿಂದ ತೋರಿಸಿದ ಕೊಟಡಿಯ ಕಡೆಗೆ ಹೋದರು. ಕೊಟಡಿಯಲ್ಲಿ ರುಕ್ಮಿಣಿಯಮ್ಮನವರು ಅತ್ತು ಅತ್ತು ಸಾಕಾಗಿ ಕೊನೆಗೆ ಸಮಾಧಾನ ಹೊಂದಿ ಕುಳಿತುಕೊಂಡಿದ್ದರು. ರಾಯರು ಅವರನ್ನು ಕಂಡೊಡನೆಯೇ "ನೀನು ಹುಚ್ಚಿ. ನನ್ನ ಮಾತುಗಳನ್ನೇ ತಪ್ಪಾಗಿ ತಿಳಿದುಕೊಂಡೆ. ನಾನೂ ಸ್ಪಷ್ಟವಾಗಿ ತಿಳಿಸಲಿಲ್ಲ. ನೀನೇ ಕೇಳಿದರೆ ಸ್ಪಷ್ಟವಾಗಿ ತಿಳಿಸಬೇಕೆಂದು ನನಗೂ ಕುತೂಹಲವಿತ್ತು. ಗಿರಿಜುವಿಗೆ ಮದುವೆ. ಆದರೆ ವರನು ನಾನಲ್ಲ. ವರ ಬೇರೆ. ನಾನೂ ನೀನೂ ಧಾರೆಯೆರೆಸಿಕೊಳ್ಳಲು ವರನ ಕಡೆ ಹಸೆಯಮೇಲೆ ಕುಳಿತುಕೊಳ್ಳುವವರು" ಎಂದರು. ರುಕ್ಮಿಣಿಯಮ್ಮನವರು ತಮ್ಮ ಕಿವಿಗಳನ್ನು ತಾವೇ ನಂಬಲಾರದೆ, ನೀರಿನಲ್ಲಿ

ಮುಳುಗಿ ಹೋಗುತ್ತಿರುವಾಗ ಮರದ ಬೇರಿನ ಆಶ್ರಯವು ದೊರೆಯಿತೆಂದು ಭಾವಿಸಿ "ನಿಜವಾಗಿ, ನನ್ನಾಣೆಗೂ, ದೇವರಾಣೆಗೂ?" ಎಂದರು. ರಾಯರು ನಕ್ಕು "ನಾನು ಸುಳ್ಳು ಹೇಳಿರುವುದೆಂದು? ನಿಜವಾಗಿಯೂ" ಎಂದರು. ರುಕ್ಮಿಣಿಯಮ್ಮನವರು ತಟಕ್ಕನೆ ಮೇಲಕ್ಕೆದ್ದು "ಇಂಥ ಹತ್ತು ಮದುವೆ ಬೇಕಾದರೂ ಮಾಡಿ. ನಾನು ಬದುಕಿದೆ" ಎಂದರು.

ಗಿರಿಜಾ ಕಲ್ಯಾಣವು ಸೊಗಸಾಗಿ ನಡೆಯಿತು. ಬೀಗರಾದ ರಾಯರೂ ರುಕ್ಮಿಣಿಯಮ್ಮನವರೂ ಊರುಟಣೆಯಾದ ಮೇಲೆ ಮನೆಗೆ ಹಿಂತಿರುಗಿದರು. ರಾಯರು ಹುಸಿಬಿಂಕದಿಂದ "ಊರುಟಣೆ ನೋಡುವ ಆಶೆಯು ಯಾರಿಗಿಲ್ಲ?" ಎಂದರು. ರುಕ್ಮಿಣಿಯಮ್ಮನವರು ನಕ್ಕು "ಹಿಂದೊಂದು ದಿನ ಹೀಗೆ ಹೇಳಿದ್ದಿರಿ. ಆದರೆ ನಿಮ್ಮ ಧರ್ಮಕ್ಕೆ ಒಗಟುಗಳಲ್ಲಿ ಮಾತನಾಡಿ ಕುದಿಯೆಣ್ಣೆಯ ಕಡಾಯಿನೊಳಗೆ ಮಾತ್ರ ಮುಳುಗಿಸಬೇಡಿ" ಎಂದರು. ರಾಯರು ನಗುತ್ತ "ಇನ್ನು ಮೇಲೆ ಒಗಟೆಯೂ ಇಲ್ಲ. ದರ್ಪವೂ ಇಲ್ಲ. ಗಿರಿಜು ಜೊತೆಗೆ ನಾನೂ ಹೆಣ್ಣು ಹುಡುಗಿ. ಇನ್ನಾದರೂ ತೃಪ್ತಿಯಾಯಿತೆ?" ಎಂದರು. ಇಬ್ಬರೂ ಮತ್ತೆ ನಕ್ಕರು. ಅವರ ನಗುವಿನ ಲಹರಿಯಿಂದ ಗಿರಿಜಾ ಮಾತೆಗೆ ತೃಪ್ತಿಯಾಯಿತೆಂಬುದೇ ಅವರೀರ್ವರ ನಂಬಿಕೆ.



2171—35.—ಬೆಂಗಳೂರು ಸಿಟಿ ಬೆಂಗಳೂರು ಪ್ರೆಸ್ಸಿನಲ್ಲಿ ಸೂಪರಿಂಟೆಂಡೆಂಟರಾದ
ಟಿ. ಸುಬ್ರಹ್ಮಣ್ಯ ಅಯ್ಯರವರಿಂದ ಮುದ್ರಿಸಲ್ಪಟ್ಟಿತು.